ಮುನಿವಿದ್ಯಾನಂದರು

# ಸುಳ್ಳಾಡಿದ್ದೇಕೆ?

ಬಿ. ಎಸ್. ನಂದಕುಮಾರ್



ಕುಂದಕುಂದ ಪ್ರಕಾಶನ
ಭದ್ರಾವತಿ

Munividyanandaru Sulladiddeke ? (Why did Munividyanandaji told lie ?) —by B S Nandakumar, M A , Department of Kannada Sir, M V College, Bhadravati-577301. Published by Kundakunda Prakashana, 58, 'Thimmarayaswamy Prasanna' (Upstairs), Upperhutta, Bhadravati. (Karnataka State) First Edition June 1981

ಮೊದಲನೆಯ ಮುದ್ರಣ : ಜೂನ್ 1981

ಕಾಪಿರೈಟ್ ಬಿ. ಎಸ್. ನಂದಕುಮಾರ್

ಬೆಲೆ [illegible]
೮ - ೦೦

ಮುಖಚಿತ್ರ

'ಚಳಿಪುರುಷನೊಂದಿಗೆ ಸೆಣಸಾಟ ,

ಕಾಂಕ್ರೀಟ್ ಕಟ್ಟಡದೊಳಗೊಂದು ಹುಲ್ಲಿನ ಕುಟೀರ '

ಫೋಟೋ :

ಶ್ರೀ ಸಿ ಬಿ ಎಂ. ಚಂದ್ರಯ್ಯ

ವಿನ್ಯಾಸ

ಶ್ರೀ ಬಿ ಎಸ್ ನಂದಕುಮಾರ್

ಮುದ್ರಕರು

ಮೈಸೂರು ಶ್ರೀ ಶಾರದಾ ಪ್ರೆಸ್, ಮೈಸೂರು.

# ಪರಿವಿಡಿ



**ಣಿಂದಾವಂಚಣ ದೂರೋ, ಪರಿಸಹ ಉವಸಗ್ಗ ದುಃಖಸಹಮಾಣೋ ।**

**ಸುಹ ಝಾಣಜ್ಝಯಣರದೊ, ಗಯಸಂಗೋಹೋಇ ಮುಣಿರಾಯೋ ॥**

—ಕುಂದ ಕುಂದಾಚಾರ್ಯ

(ರಯಣಸಾರ-೧೦೧)

ಶ್ರೇಷ್ಠ ಮುನಿಯು ಅನ್ಯರನ್ನು ನಿಂದಿಸಬಾರದು ಅನ್ಯರನ್ನು ವಂಚಿಸಬಾರದು ಪರೀಷಹ ಮತ್ತು ಉಪಸರ್ಗಗಳ ದುಃಖವನ್ನು ಸಹಿಸಬೇಕು ಶುಭ ಧ್ಯಾನಾದಿಗಳಲ್ಲಿ ನಿರತನಾಗಿರಬೇಕು ಪರಿಗ್ರಹಗಳಿಲ್ಲದವನಾಗಿರಬೇಕು ಇಂಥವನು ಮುನಿರಾಜನೆನಿಸುವನು



# ಮೊದಲ ಮಾತು

ಪ್ರಪಂಚದ ಸಾಂಸ್ಕೃತಿಕ ಇತಿಹಾಸದಲ್ಲಿ ಶ್ರವಣಬೆಳಗೊಳದ ಹೆಸರು ಚಿರಸ್ಥಾಯಿ ಯಾಗಿದೆ. ಅಂತಿಮ ಶ್ರುತಕೇವಲಿ ಭದ್ರಬಾಹು ಮುನಿ ಎರಡು ಸಾವಿರ ವರ್ಷಗಳಿಗೂ ಹಿಂದೆಯೇ ಉತ್ತರ ಭಾರತದಿಂದ ಈ ಸ್ಥಳಕ್ಕೆ ಆಗಮಿಸಿ ಜೈನ ಸಂಸ್ಕೃತಿ ದಕ್ಷಿಣದಲ್ಲಿ ನೆಲೆಯೂರಲು ಕಾರಣಪುರುಷನಾದನು ಭದ್ರಬಾಹುವಿನ ಪಾದಸ್ಪರ್ಶದಿಂದ ಪವಿತ್ರ ವಾದ ಶ್ರವಣಬೆಳಗೊಳದ ಮಣ್ಣು ದಕ್ಷಿಣ ಭಾರತದ ಜನಜೀವನದಲ್ಲಿ ಸ್ವರ್ಣಮಯ ಅಧ್ಯಾಯಗಳನ್ನು ಬರೆಯಲು ಕಾರಣವಾಯಿತು

' ಕಟ್ವಪ್ಪು ' ನಾಡೆಂದು ಪ್ರಾಚೀನ ಕಾಲದಲ್ಲಿ ಹೆಸರು ಪಡೆದಿದ್ದ ಶ್ರವಣಬೆಳಗೊಳ ಕ್ಷೇತ್ರ ಮೋಕ್ಷಾಭಿಲಾಷಿಗಳಾದ ಮುನಿಪುಂಗವರ, ಧರ್ಮಾಭಿಮಾನಿಗಳಾದ ರಾಜ ಮಹಾ ರಾಜ ಚಕ್ರವರ್ತಿ ದಂಡನಾಯಕರುಗಳ ಮತ್ತು ಭಕ್ತ ಜನರ ಸಾತ್ವಿಕಾಕರ್ಷಣೆಯ ಕೇಂದ್ರ ವಾಯಿತು ಎಲ್ಲರ ಧರ್ಮಶ್ರದ್ಧೆಯ ಮೂರ್ತರೂಪವಾಯಿತು. ಭವ್ಯಾತ್ಮನಾದ ಚಾವುಂಡರಾಯನು ಇಂದ್ರಗಿರಿಯಲ್ಲಿ ಗೊಮ್ಮಟಮೂರ್ತಿಯನ್ನು ನಿರ್ಮಾಣ ಮಾಡಿಸಿ ದಾಗ ಕ್ಷೇತ್ರ, ಧರ್ಮ ಮತ್ತು ಕಲೆಗಳ ಸಾಕ್ಷಾತ್ಕಾರಕ್ಕೆ ನಿದರ್ಶನವೆಂಬಂತೆ ವಿಶ್ವವಿಖ್ಯಾತ ವಾಯಿತು ಭಕ್ತ ಜನರ ಸಾಧನೆಗಳು ಕಾಲನ ದವಡೆಗೆ ಸಿಕ್ಕಿ ನಾಶವಾಗದಿರಲಿ, ಇದ ರಿಂದ ಮುಂದಿನ ಪೀಳಿಗೆ ವಂಚಿತವಾಗದಿರಲಿ, ಎಂಬ ದೂರದೃಷ್ಟಿಯಿಂದ ಶ್ರವಣಬೆಳ ಗೊಳದ ಬಂಡೆಗಲ್ಲುಗಳು ನೂರಾರು ಶಾಸನಗಳನ್ನು ಹೊತ್ತು ನಿಂತು ಪ್ರಾಚೀನರು ಮತ್ತು ಅರ್ವಾಚೀನರ ನಡುವಿನ ಶಾಶ್ವತ ರಾಯಭಾರಿಗಳಂತೆ ಕೆಲಸ ಮಾಡತೊಡಗಿ ದವು

ತೇಜೋಮೂರ್ತಿಗಳಾದ ದಿವ್ಯಾತ್ಮರ ಉಪದೇಶವಾಣಿಯಿಂದ ಧನ್ಯತೆಯನ್ನು ಪಡೆದ ಇಂತಹ ಭವ್ಯ ವಾತಾವರಣದಲ್ಲಿ, ಪವಿತ್ರಾತ್ಮರ ಪಾದಸ್ಪರ್ಶದಿಂದ ಕೃತಶಕ್ತಿ ಯನ್ನು ಪಡೆದು ಪಾವನವಾದ ಇಂತಹ ಪುಣ್ಯಭೂಮಿಯಲ್ಲಿ, ಉದ್ಯೋಗ ನಿಮಿತ್ತ ಆರು ವರ್ಷಗಳ ಕಾಲ ವಾಸಮಾಡುವ ಸದವಕಾಶ ನನಗೆ ಹಿಂದೆ ಪ್ರಾಪ್ತಿಯಾಗಿತ್ತು ಇದರಿಂ ದಾಗಿ ನಾನು ಈಗ ಶ್ರವಣಬೆಳಗೊಳದಿಂದ ದೂರದಲ್ಲಿದ್ದರೂ ಸಹ ಆತ್ಮಿಕವಾಗಿ ನಾನಿನ್ನೂ ಶ್ರವಣಬೆಳಗೊಳದ ನಿವಾಸಿಯೇ ಆಗಿದ್ದೇನೆ ಪರಿಸ್ಥಿತಿ ಹೀಗಿರುವಾಗ ಶ್ರವಣಬೆಳ ಗೊಳದ ಇಂದಿನ ಆಗುಹೋಗುಗಳು ನನ್ನ ಗಮನವನ್ನು ಸೆಳೆಯದೇ ಇರಲು ಸಾಧ್ಯವೇ ಇಲ್ಲ

ವಿದ್ಯಾನಂದ ಮುನಿಗಳು ದೆಹಲಿಯಿಂದ ಶ್ರವಣಬೆಳಗೊಳದ ಕಡೆಗೆ ವಿಹಾರ ಹೊರಟಾಗ, ಹಿಂದೆ ಶ್ರುತಕೇವಲಿ ಭದ್ರಬಾಹು ಮುನಿ ದಕ್ಷಿಣಾಪಥದ ಯಾತ್ರೆ ಕೈ

ಗೊಂಡ ಐತಿಹಾಸಿಕ ಘಟನೆ ನನ್ನ ನೆನಪಿಗೆ ಬಂದಿತು  ಎರಡು ಸಾವಿರ ವರ್ಷಗಳ ಹಿಂದೆ ಭದ್ರಬಾಹುವಿನಿಂದ ನಡೆದ ಧಾರ್ಮಿಕ ಉತ್ಕ್ರಾಂತಿಯನ್ನು ಹೋಲುವ ಸಮಾಜ ಸುಧಾರಣೆ ಈ ಆಧುನಿಕ ಕಾಲದಲ್ಲಿ ದಕ್ಷಿಣಭಾರತದಲ್ಲಾಗಬಹುದೆಂದು ನಾನು ನಿರೀಕ್ಷಿಸಿದ್ದೆ !  ಆದರೆ ವಿದ್ಯಾನಂದರ ತಾ॥ 14-7-80 ರ ಬೆಳ್ಳೂರು ಪ್ರವಚನವನ್ನು ಕೇಳಿದ ಕೂಡಲೇ ನನ್ನ ನಿರೀಕ್ಷೆ ಹುಸಿಯಾಯಿತು !  ಅವರ ಬಗ್ಗೆ ಮುಂದಿನ ನನ್ನ ಶೋಧನೆಗಳು ಅವರೆಷ್ಟು ಟೊಳ್ಳು ಮನುಷ್ಯರೆಂಬುದನ್ನು ನನಗೆ ಮನವರಿಕೆ ಮಾಡಿಕೊಟ್ಟುವು ನನ್ನ ಶೋಧನೆಯ ಅಂಗವಾಗಿ ನಾನು ವಿದ್ಯಾನಂದರಿಗೆ ಬರೆದ ನಾಲ್ಕು ಪತ್ರಗಳು, ನಂತರ ಅವರ ಬಗೆಗೆ ಬರೆದಿರುವ ಈ ಪುಸ್ತಕ, ವಿದ್ಯಾನಂದರು ಮತ್ತು ಚಾರುಕೀರ್ತಿಭಟ್ಟಾರಕ ಸ್ವಾಮಿಗಳ ಕೃತಕ ವ್ಯಕ್ತಿತ್ವಗಳನ್ನು ದಾಖಲೆಗಳ ಸಮೇತವಾಗಿ ವಿವರಿಸುತ್ತದೆ  ಅಲ್ಲದೆ "ಈ ಕಾಲದಲ್ಲಿ ತ್ಯಾಗಿಗಳಲ್ಲಿ ತ್ಯಾಗಿಗಳನ್ನು ಕಾಣುವುದು ಕಠಿಣ, ಆದರೆ ಗೃಹಸ್ಥರಲ್ಲಿ ತ್ಯಾಗಿಗಳನ್ನು ಕಾಣುವುದು ಸುಲಭ" ಎಂಬ ಅನುಭವಿಗಳ ಮಾತಿಗೂ ಈ ಪುಸ್ತಕ ನಿದರ್ಶನವಾಗಬಲ್ಲುದು.

ತಮ್ಮ ಪತ್ರರಚನೆಗಳ ಮೂಲಕವಾಗಿ ಈ ಗ್ರಂಥರಚನೆಗೆ ಅಗತ್ಯವಾಗಿ ಬೇಕಾದ ದಾಖಲೆಪತ್ರಗಳನ್ನು ಒದಗಿಸಿದವರೆಲ್ಲರ ಉಪಕಾರವನ್ನು ನಾನೆಂದಿಗೂ ಮರೆಯಲು ಸಾಧ್ಯವಿಲ್ಲ  ಈ ಪುಸ್ತಕದಲ್ಲಿ ಉಪಯೋಗಿಸಲಾಗಿರುವ ಅನೇಕ ಮೂಲ ದಾಖಲೆಪತ್ರಗಳನ್ನು ಕನ್ನಡಕ್ಕೆ ಸಮರ್ಥವಾಗಿ ಅನುವಾದ ಮಾಡಿಕೊಟ್ಟ ನನ್ನ ಸಹೋದ್ಯೋಗಿಗಳಾದ ಶ್ರೀ ಹೆಚ್. ವಿ ಸತ್ಯನಾರಾಯಣಶಾಸ್ತ್ರಿ, ಶ್ರೀ ಆರ್ ವಿ ಹೆಗ್ಗಡೆ, ಶ್ರೀ ಜಿ ನಾರಾಯಣ ರಾವ್ ಇವರುಗಳ ನೆರವನ್ನು ಸ್ಮರಿಸುವುದು ನನ್ನ ಕರ್ತವ್ಯವಾಗಿದೆ  ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮೈಸೂರು ಶ್ರೀ ಶಾರದಾ ಪ್ರೆಸ್ಸಿನ ಮಾಲೀಕರಿಗೆ ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತೇನೆ

ಬಿ ಎಸ್ ನಂದಕುಮಾರ್
ಲೆಕ್ಚರರ್
ಸರ್. ಎಂ ವಿ ಕಾಲೇಜು, ಭದ್ರಾವತಿ.

ತಾ॥ ೪-೬-೧೯೮೧.

ಜೇ ಪಾವಾರಂಭರಯಾ, ಕಸಾಯ ಜುತ್ತಾ ಪರಿಗ್ಗಹಾಸತ್ತಾ ।
ಲೋಯವವಹಾರ ಪವುರಾ, ತೇಸಾಹೂ ಸಮ್ಮ ಉಮ್ಮುಕ್ಕಾ ॥

—ಕುಂದ ಕುಂದಾಚಾರ್ಯ

(ರಯಣಸಾರ—ಶ್ಲೋಕ-೧೧೧)

**ಅರ್ಥ ವಿವರಣೆ :**

ಹಿಂಸೆ, ಸುಳ್ಳು, ಕಳ್ಳತನ, ದುರಾಲೋಚನೆ, ಪರಿಗ್ರಹ ಮೊದಲಾದ ಪಾಪ ಕೆಲಸಗಳಲ್ಲಿ ಆಸಕ್ತಿಯುಳ್ಳವರೂ, ಕ್ರೋಧಾದಿ ಕಷಾಯಯುಕ್ತವಾದ ವ್ಯಾಪಾರ, ಕೃತಿ, ಸಾಮಾಜಿಕ ಕಾರ್ಯಗಳು ಮೊದಲಾದ ಲೋಕ ವ್ಯವಹಾರದಲ್ಲಿ ತೊಡಗುವ ಸಾಧುಗಳಿಗೆ ಸಮ್ಯಕ್ತ್ವ ಪ್ರಾಪ್ತಿಯಾಗುವುದಿಲ್ಲ

**ಪ್ರವೇಶ :**

ನಾನು ಶ್ರೀ ವಿದ್ಯಾನಂದಮುನಿಗಳಿಗೆ ನಾಲ್ಕು ಬಹಿರಂಗ ಪತ್ರಗಳನ್ನು ಬರೆದು ಅವುಗಳನ್ನು ಈಗಾಗಲೇ ಬಹಿರಂಗಪಡಿಸಿದ್ದೇನೆ ವಿದ್ಯಾನಂದಮುನಿಗಳು ನನ್ನ ಮೂರನೇ ಬಹಿರಂಗ ಪತ್ರವನ್ನು ತೆಗೆದುಕೊಳ್ಳಲು ನಿರಾಕರಿಸಿದಂತೆ ನಾಲ್ಕನೇ ಬಹಿರಂಗ ಪತ್ರವಿದ್ದ ರಿಜಿಸ್ಟರ್ಡ್ ಅಂಚೆಯನ್ನೂ ಸಹ ಸ್ವೀಕರಿಸಲು ನಿರಾಕರಿಸಿದರು ಇಷ್ಟಾದರೂ ನನ್ನ ನಾಲ್ಕುಪತ್ರಗಳನ್ನು ಅವರಿಗೆ ತಲುಪಿಸುವ ಪ್ರಯತ್ನವನ್ನು ನಾನು ಕೈಬಿಡಲಿಲ್ಲ ಪುನಃ ನಾಲ್ಕು ಮುದ್ರಿತ ಪತ್ರಗಳಿದ್ದ ಲಕೋಟೆಯನ್ನು ಅವರಿಗೆ ಅಂಚೆ ಅಸ್ವೀಕೃತಿ ಚೀಟಿ ಪಡೆಯುವುದರ ಮೂಲಕ ರವಾನಿಸಿದೆ

ನನ್ನ ನಾಲ್ಕನೆಯ ಬಹಿರಂಗ ಪತ್ರದಲ್ಲಿ ಮೈಸೂರಿನ ಶ್ರೀ ಸಿ ಬಿ ಎಂ ಚಂದ್ರಯ್ಯ ಮತ್ತು ಶ್ರೀ ಎಸ್ ಪಿ ಶಾಂತರಾಜ್‌ರವರಿಂದ, ಶ್ರವಣಬೆಳಗೊಳ ಕ್ಷೇತ್ರಕ್ಕೆ ಮತ್ತು ಅಲ್ಲಿನ ಮಠಾಧಿಪತಿಗಳಾದ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರಿಗೆ ಯಾವ ಬಗೆಯ ತೊಂದರೆಯಾಗಲೀ, ಕಿತಾಪತಿಯಾಗಲೀ ಅಥವಾ ಹಿಂಸೆಯಾಗಲೀ ಆಗಿಲ್ಲವೆಂಬುದನ್ನು ಸ್ಪಷ್ಟವಾದ ದಾಖಲೆಗಳ ಮೂಲಕ ವಿವರಿಸಿದ್ದೇನೆ ಅಲ್ಲದೆ ಅವರಿಬ್ಬರೂ ಕ್ಷೇತ್ರದ ಜೀವನಾಡಿಗಳಂತಿದ್ದು, ಕ್ಷೇತ್ರ ಹೇಗೆ ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಲು ಪ್ರಧಾನವಾಗಿ ಕಾರಣಕರ್ತರಾದರೆಂಬುದನ್ನೂ ಸಹ ದಾಖಲೆಗಳ ಮೂಲಕವೇ ಸ್ಪಷ್ಟ ಪಡಿಸಿದ್ದೇನೆ

ಇಷ್ಟಾದ ಮೇಲೆ ವಿದ್ಯಾನಂದ ಮುನಿಗಳು ತಾವು ಮೇಲಿನ ಇಬ್ಬರು ವ್ಯಕ್ತಿಗಳ ಮೇಲೆ ಬೆಳ್ಗೊಳಿಸಲ್ಲಿ ಮಾಡಿದ ಆಪಾದನೆಗಳನ್ನು ರುಜುವಾತುಪಡಿಸಬೇಕಾಗಿತ್ತು. ಅಥವಾ ಅದು ಸಾಧ್ಯವಾಗದೇ ಹೋಗಿದ್ದರೆ ತಾವು ಸುಳ್ಳಾಡಿದ್ದಕ್ಕಾಗಿ ವಿವರಣೆಯನ್ನಾದರೂ ನೀಡಬೇಕಾಗಿತ್ತು. ತಾವು ಬಹಿರಂಗವಾಗಿ ಒಂದು ವಿವಾದವನ್ನು ಹುಟ್ಟುಹಾಕಿದಾಗ, ಸಾರ್ವಜನಿಕರಿಗೆ ಅದರ ಪೂರ್ಣ ವಿವರವನ್ನು ತಿಳಿಯುವ ಕುತೂಹಲ ಇದ್ದೇ ಇರುತ್ತದೆ ಅಪಾದನೆಗಳನ್ನು ಮಾಡಿದ ಮೇಲೆ, ಅವುಗಳನ್ನು ಸಮರ್ಥಿಸುವಂತಹ ದಾಖಲೆಗಳನ್ನು ಜನರು ಬಯಸುವ ಮೊಂಚೆಯೇ ವಿದ್ಯಾನಂದರು ಅವರ ಮುಂದಿಡಬೇಕಾಗಿತ್ತು ತಮ್ಮ ಹೇಳಿಕೆಯ ಪ್ರಾಮಾಣಿಕತೆಯನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ಈ ಕ್ರಮ ಅತ್ಯಗತ್ಯವಾಗಿತ್ತು ಆದರೆ ವಿದ್ಯಾನಂದ ಮುನಿಗಳು ಇದಾವುದನ್ನೂ ಮಾಡಲಿಲ್ಲ

ಆಪಾದನೆ ಮಾಡಿದವರು ತಮ್ಮ ಮಾತುಗಳನ್ನು ರುಜುವಾತು ಪಡಿಸಲಾಗದೇ ಹೋದಾಗ ಆ ಮಾತುಗಳೆಲ್ಲಾ ಸುಳ್ಳೆಂದಾಗುತ್ತದೆ

ಈ ಹಂತದಲ್ಲಿ ನಾನು ನನ್ನ ಸತ್ಯ ತಿಳಿಯುವ ಪ್ರಯತ್ನವನ್ನು ನಿಲ್ಲಿಸಲಿಲ್ಲ ವಿದ್ಯಾನಂದರಂತಹ ತಪೋಧನರು ರುಜುವಾತುಪಡಿಸಲಾಗದಂತಹ ಮಾತುಗಳನ್ನು ತುಂಬಿದ ಸಭೆಯಲ್ಲಿ ಏಕೆ ಆಡಿದರು ? ನಿಂದೆಯ ಮಾತುಗಳು ಬರಲು ಕಾರಣವೇನಿರಬಹುದು ? ಈ ಪ್ರಸಂಗದ ಹಿನ್ನೆಲೆಯೇನು ? ವಿದ್ಯಾನಂದರ ಕ್ರೋಧಕ್ಕೆ ಕಾರಣವಾಗಿರಬಹುದಾದ ನಿಜವಾದ ಘಟನಾವಳಿಗಳೇನಿರಬಹುದು ? ಇವುಗಳಿಗೆಲ್ಲಾ ಯಾರು ಯಾರು ಎಷ್ಟೆಷ್ಟರ ಮಟ್ಟಿಗೆ ಕಾರಣರಾಗಿರಬಹುದು ? ಶಾಂತರಾಜರಿಂದ ಸ್ವಾಮಿಗಳಿಗೆ ಹಿಂಸೆಯಾಗುತ್ತಿದೆ ಎಂಬ ಮಾತು ಅಹಿಂಸೆಯ ಪ್ರತಿಪಾದಕರಾದ ವಿದ್ಯಾನಂದ ಮುನಿಗಳಿಂದ ಬಂದಾಗ ತಕ್ಷಣವೇ ಚಾರುಕೀರ್ತಿ ಸ್ವಾಮಿಗಳು ಅದನ್ನು ಸಮರ್ಥಿಸಲೂ ಇಲ್ಲ ಅಥವಾ ನಿರಾಕರಿಸಲೂ ಇಲ್ಲ ! ಬದಲಾಗಿ ವಿದ್ಯಾನಂದರನ್ನು ಪ್ರಶ್ನಿಸಿದ ನನ್ನನ್ನು ಚಾರುಕೀರ್ತಿಗಳು ಬೆದರಿಸಲು ಪ್ರಯತ್ನಪಟ್ಟರು ಈ ಮೂಲಕ ವಿದ್ಯಾನಂದರ ಮಾತುಗಳನ್ನು ಅವರು ಅನುಮೋದಿಸಿದರು ಚಾರುಕೀರ್ತಿಗಳು ನನಗೆ ಬೆದರಿಕೆ ಹಾಕಲು ಹೋಗುವ ಬದಲು ಶಾಂತರಾಜರು ತಮಗೆ ಯಾವ ಯಾವ ಬಗೆಯ ಹಿಂಸೆ ಮಾಡಿದರು ಕಿತಾಪತಿಗಳನ್ನು ಮಾಡಿದರು ಎಂಬುದನ್ನು ತಾವಾದರೂ ವಿವರಿಸಬಹುದಿತ್ತು ! ಆದರೆ ಅವರೂ ಈ ಮಾರ್ಗವನ್ನು ತುಳಿಯಲಿಲ್ಲ

ಉಪಾಧ್ಯಾಯ ಮುನಿಗಳೆಂದು ಪದವಿ ಪಡೆದ, ಪಲಾಚಾರ್ಯರು, ಸಿದ್ಧಾಂತ ಚಕ್ರವರ್ತಿಗಳು ಎಂದು ಜನರಿಂದ ಹೊಗಳಿಸಿಕೊಂಡ, ವಿಶ್ವಧರ್ಮಪ್ರೇರಕರು ಎಂದು ಕೀರ್ತಿಪಡೆದ ಹಿಮಾಲಯದ ತಪ್ಪಲಿನಲ್ಲಿ ವಿಹಾರ ಮಾಡಿಬಂದ ವಿದ್ಯಾನಂದರಂತಹ

ತಪಸ್ವಿಗಳು ಸಮಾಜದ ಒಂದಿಬ್ಬರನ್ನು ತುಂಬಿದ ಸಭೆಯಲ್ಲಿ ನಿಂದಿಸಬೇಕಾದರೆ ಅದಕ್ಕೆ ಪ್ರಬಲವಾದ ಹಿನ್ನೆಲೆ, ಕಾರಣಗಳು ಇರಲೇಬೇಕಲ್ಲವೇ ?

ಈ ರೀತಿಯ ಪ್ರಶ್ನೆಗಳು ನನ್ನಲ್ಲಿ ಮನೆಮಾಡಿಕೊಂಡವು. ಇವು ನನ್ನ ಪ್ರಶ್ನೆಗಳು ಮಾತ್ರವಲ್ಲದೆ, ನಿಜವಾದ ಮಾರ್ಗದಲ್ಲಿ ಸಮಾಜದ ಹಿತವನ್ನು ಬಯಸುವ ಎಲ್ಲರ ಪ್ರಶ್ನೆಗಳಾದ್ದರಿಂದ, ಇವುಗಳಿಗೆಲ್ಲಾ ಉತ್ತರ ಹುಡುಕಲು ನಾನು ದೃಢನಿರ್ಧಾರ ಮಾಡಿದೆ. ವಿದ್ಯಾನಂದರಿಂದ ನನ್ನ ಸಂದೇಹಗಳಿಗೆ ಉತ್ತರ ಬರದೇ ಹೋದಾಗ ನನಗೆ ಉಳಿದ ಏಕೈಕ ಮಾರ್ಗವೆಂದರೆ, ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸುವುದು ಅವುಗಳ ಮೂಲಕ ವಿದ್ಯಾನಂದರ ಮಾತಿಗೆ ಕಾರಣಗಳನ್ನು ಹುಡುಕುವುದು ನಿಜಾಂಶವನ್ನು ಗ್ರಹಿಸಿ ಅದನ್ನು ಸಾರ್ವಜನಿಕರ ಗಮನಕ್ಕೆ ತರುವುದು

ಇದಕ್ಕನುಸಾರವಾಗಿ ನಾನು ದಾಖಲೆಗಳನ್ನು ಸಂಗ್ರಹಿಸಲು ತೊಡಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಕೆಲವು ದಾಖಲೆಗಳನ್ನೂ , ಶ್ರವಣಬೆಳಗೊಳದ ಚಾರುಕೀರ್ತಿಯವರು ಬರೆದಿರುವ ಕೆಲವು ಪತ್ರಗಳನ್ನೂ, ಇತರರು ಸಾರ್ವಜನಿಕರಿಗೆಂದು ಹೊರಡಿಸಿರುವ ಕರಪತ್ರಗಳನ್ನೂ, ಇನ್ನಿತರ ದಾಖಲೆಗಳನ್ನೂ ಮತ್ತು ಸಂಬಂಧಪಟ್ಟ ಸಾರ್ವಜನಿಕರಿಂದ ಕೆಲವು ಮಾಹಿತಿಗಳನ್ನೂ ಸಂಗ್ರಹಿಸಿದೆ ಇವುಗಳನ್ನೆಲ್ಲಾ ಅಭ್ಯಾಸಮಾಡಿದ ಮೇಲೆ ಈ ಎಲ್ಲಾ ದಾಖಲೆಗಳ ಆಧಾರದಿಂದ ವಿದ್ಯಾನಂದರು ಬೆಳ್ಳೂರಿನಲ್ಲಿ ಸುಳ್ಳಾಡಿದ್ದೇಕೆ ? ಎಂಬುದನ್ನು ಇನ್ನು ಮುಂದೆ ವಿವರಿಸುತ್ತೇನೆ

## ಅಧ್ಯಾಯ ೧

# ಬೆಳ್ಳೂರು ಪ್ರವಚನದ ಪರಿಣಾಮಗಳು

ತಾ|| 14–7–80 ರಂದು ವಿದ್ಯಾನಂದರು ಚಂದ್ರಯ್ಯ ಮತ್ತು ಶಾಂತರಾಜರನ್ನು ಕಟುವಾಗಿ ದೂಷಿಸಿ ಮಾತನಾಡಿದ ಮೇಲೆ, ತಾವು ತುಳಿದ ತಪ್ಪು ಹಾದಿಯನ್ನು ಸರಿಪಡಿಸಿಕೊಳ್ಳಲೇ ಇಲ್ಲ. ಮುಂದೆ ಅವರು ಶ್ರವಣಬೆಳಗೊಳವನ್ನು ತಲುಪಿದ ಮೇಲೆ ತಾ|| 21–7–80 ರಂದು ಕರ್ನಾಟಕದ ಮುಖ್ಯಮಂತ್ರಿಯವರ ಸಮ್ಮುಖದಲ್ಲಿ ನಡೆದ ಬಹಿರಂಗಸಭೆಯಲ್ಲಿ ಪುನಃ ಚಂದ್ರಯ್ಯನವರ ವಿರುದ್ಧ, ವೇದಿಕೆಯನ್ನೂ ಮುನಿಧರ್ಮವನ್ನೂ ದುರುಪಯೋಗಪಡಿಸಿಕೊಂಡು ಆಪಾದನೆಗಳನ್ನು ಮಾಡಿದರು. ಈ ವಿವಾದದ ಪೂರ್ಣ ವಿವರ ತಿಳಿಯದ ಮುಗ್ಧ ಜನರು ಚಪ್ಪಾಳೆ ತಟ್ಟಿದರು.

**ಅಪಪ್ರಚಾರ :**

ವಿದ್ಯಾನಂದರ ಆಪಾದನೆಗಳನ್ನು ಅನುಸರಿಸಿ ಶ್ರವಣಬೆಳಗೊಳದ ಗೋಡೆಗಳ ಮೇಲೆ ಚಂದ್ರಯ್ಯನವರ ವಿರುದ್ಧ ಅಸಭ್ಯ ಬರಹಗಳು ಕಾಣಿಸಿಕೊಂಡವು. ಬ್ಯಾನರ್‌ಗಳು ಹಾರಾಡಿದವು, ಕೆಳದರ್ಜೆಯ ಕರಪತ್ರಗಳು ವಿಲೇವಾರಿಯಾದುವು. ತಮ್ಮ ಮಾತಿನಿಂದ ಉಂಟಾದ ಈ ಅಪಪ್ರಚಾರಗಳನ್ನು ವಿದ್ಯಾನಂದರು ಒಮ್ಮೆಯೂ ಸಾರ್ವತ್ರಿಕವಾಗಿ ಖಂಡಿಸಲಿಲ್ಲ! ಬೀದಿ ಜಗಳಕ್ಕಿಳಿದ ಜನರಿಗೆ ನೇರವಾದ ಉಚಿತವಾದ ಮಾರ್ಗವನ್ನು ತುಳಿಯುವಂತೆ ಅವರಿಗೆ ಮಾರ್ಗದರ್ಶನ ಮಾಡಲಿಲ್ಲ!

ವಿದ್ಯಾನಂದರ ಪ್ರಚೋದನಾತ್ಮಕ ಮಾತುಗಳಿಂದಾಗಿ ಚಂದ್ರಯ್ಯ ಮತ್ತು ಶಾಂತರಾಜರ ವಿರುದ್ಧ ಅಪಪ್ರಚಾರ ಮಾಡಲು ವ್ಯವಸ್ಥಿತವಾದ ಒಂದು ತಂಡವೇ ಸಿದ್ಧವಾಯಿತು. ಈ ತಂಡ ತನ್ನ ದುರ್ಮಾರ್ಗಗಳಿಂದ ಅವರಿಬ್ಬರನ್ನೂ ಮಾನಸಿಕವಾಗಿ ಮುಗಿಸಿಬಿಡಲು ನಿರಂತರವಾದ ಪ್ರಯತ್ನವನ್ನು ನಡೆಸುತ್ತಾ ಹೋಯಿತು. ಈ ತಂಡ ತನ್ನ ಅಪಪ್ರಚಾರದ ಒಂದು ಅಂಗವಾಗಿ, ಚಂದ್ರಯ್ಯನವರ ಹೆಸರು ಮತ್ತು ವಿಳಾಸವನ್ನುಪಯೋಗಿಸಿ ತಾ|| 5–8–80ರಂದು ಕೋಟಾಪತ್ರವೊಂದನ್ನು ಮುದ್ರಿಸಿ ಹಂಚಿತು. ಈ ಪತ್ರದ ಮೂಲಕ ಚಂದ್ರಯ್ಯನವರ ವಿರುದ್ಧ ಶಾಸಕರಾದ ಹೆಚ್. ಸಿ. ಶ್ರೀಕಂಠಯ್ಯನವರನ್ನು ಎತ್ತಿಕಟ್ಟಲು ಪ್ರಯತ್ನಿಸಿತು. ಆದರೆ ಈ ಪ್ರಯತ್ನ ಸಫಲವಾಗಲಿಲ್ಲ.

**ವಿದ್ಯಾಸಂಸ್ಥೆಗೆ ಲಗ್ಗೆ :**

ಅಪಪ್ರಚಾರ ಮಾಡುವ ತಂಡ ತನ್ನ ವಾಮಮಾರ್ಗದ ಚಟುವಟಿಕೆಗಳನ್ನು

ಮುಂದುವರೆಸಿಕೊಂಡು ಹೋದಂತೆ ಇತ್ತ ವಿದ್ಯಾನಂದರು ಶ್ರವಣಬೆಳಗೊಳದ ಕೆಲವು ವ್ಯಕ್ತಿಗಳನ್ನು ಉಪಯೋಗಿಸಿಕೊಂಡು ಚಂದ್ರಯ್ಯನವರಿಗೆ ಕಿರುಕುಳಕೊಡಲು ತೊಡಗಿದರು. ವಿದ್ಯಾನಂದರು ಈ ಕಾರ್ಯಕ್ರಮದ ಪ್ರಥಮ ಹಂತವಾಗಿ, ಮೈಸೂರಿನ ಶ್ರೀ ಗೋಮಟೇಶ್ವರ ಎಜುಕೇಷನ್ ಸೊಸೈಟಿಯ ಆಸ್ತಿಪಾಸ್ತಿಗಳನ್ನೂ, ಅದರ ವ್ಯವಹಾರಗಳನ್ನೂ ಅಕ್ರಮ ವಿಧಾನಗಳಿಂದ ಕೈವಶಮಾಡಿಕೊಳ್ಳಲು ಪ್ರಯತ್ನಿಸಿದರು ವಿದ್ಯಾನಂದರ ಈ ಕಾನೂನು ಬಾಹಿರವಾದ ಕ್ರಮಕ್ಕೆ ಚಂದ್ರಯ್ಯನವರು ಆ ವಿದ್ಯಾಸಂಸ್ಥೆಯ ಕಾರ್ಯದರ್ಶಿಯಾಗಿದ್ದುದು ಮತ್ತು ಶಾಂತರಾಜ್‌ರವರು ಉಪಾಧ್ಯಕ್ಷರಾಗಿದ್ದುದೇ ಕಾರಣವಾಗಿತ್ತು !

ತಾ॥ 11–8–80 ರಂದು " ಶ್ರವಣಬೆಳಗೊಳ ಜೈನ ಸಮಾಜದ ನಿರ್ಣಯ " ಎಂಬ ಶೀರ್ಷಿಕೆಯುಳ್ಳ ಹಸ್ತಪತ್ರಿಕೆಯಲ್ಲಿ ಪ್ರಕಟವಾದ ಮೂರನೇ ನಿರ್ಣಯವನ್ನು ಇಲ್ಲಿ ಗಮನಿಸಬೇಕು ಶ್ರೀ ಹೆಚ್ ಎನ್ ರಾಜೇಂದ್ರಕುಮಾರರ ಅಧ್ಯಕ್ಷತೆಯಲ್ಲಿ ನಡೆದ ಒಂದು ಸಭೆಯಲ್ಲಿ ಈ ನಿರ್ಣಯವಾಗಿದೆ ನಿರ್ಣಯದ ಪಾಠ ಹೀಗಿದೆ

" ಶ್ರವಣಬೆಳಗೊಳದಲ್ಲಿ ಶ್ರೀ ಗೊಮ್ಮಟೇಶ್ವರ ಎಜುಕೇಷನ್ ಸೊಸೈಟಿಯವರು ಮಹಾವಿದ್ಯಾಲಯವನ್ನು ನಡೆಸುತ್ತಿದ್ದು ಶ್ರೀ ಗೊಮ್ಮಟೇಶ್ವರ ಎಜುಕೇಷನ್ ಸೊಸೈಟಿಯ ಆಡಳಿತ ಮಂಡಳಿ ಅಧ್ಯಕ್ಷರು, ಕಾರ್ಯದರ್ಶಿ ಇವರನ್ನು ಸೊಸೈಟಿಗೆ ಸಂಬಂಧಿಸಿದ ಎಲ್ಲ ವ್ಯವಹಾರವನ್ನು ಕ್ಷೇತ್ರ ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ ಈ ಕೂಡಲೇ ಶ್ರೀ ವಿದ್ಯಾನಂದಮುನಿಗಳ ಸಮಕ್ಷಮದಲ್ಲಿ ತಂದು ಒಪ್ಪಿಸಿ ಈ ಕಾಲೇಜು ಪುನಾರಾರಂಭಕ್ಕೆ ಸಹಾಯ-ಸಹಕಾರ ನೀಡಬೇಕೆಂದು ಶ್ರೀ ಗೊಮ್ಮಟೇಶ್ವರ ಎಜುಕೇಷನ್ ಸೊಸೈಟಿ ಆಡಳಿತ ಮಂಡಲಿಯಲ್ಲಿ ಈ ಸಭೆ ಸರ್ವಾನುಮತದಿಂದ ನಿರ್ಣಯವನ್ನು ತೆಗೆದುಕೊಂಡು ಒತ್ತಾಯಿಸುತ್ತಿದೆ ಪ ರ ಮ ಪೂ ಜ್ಯ ಏಲಾಚಾರ್ಯ ಶ್ರೀ ವಿದ್ಯಾನಂದ ಮುನಿ ಮಹಾರಾಜರ ಅಪೇಕ್ಷೆಯಂತೆ ಈ ಕಾರ್ಯವನ್ನು ಸಮಾಜ ಮತ್ತು ಕ್ಷೇತ್ರದ ಸುತ್ತಮುತ್ತಲಿನ ಜನತೆಯ ಹಿತದೃಷ್ಟಿಯಿಂದ ಅತಿಜಾಗ್ರತೆ ಕೈಗೊಳ್ಳುವಂತೆ ಸ ಭೆ ಯು ವಿನಂತಿಸಿಕೊಂಡಿದೆ "

ವಿದ್ಯಾನಂದ ಮುನಿಗಳ ಅಪೇಕ್ಷೆಯಂತೆ ಮಾಡಿರುವ ಈ ನಿರ್ಣಯದಲ್ಲಿ ಬೆದರಿಕೆ, ಒತ್ತಾಯ, ವಿನಂತಿ ಎಲ್ಲಾ ಸೇರಿದೆ ಮುನಿಗಳೆಂದರೆ ಸಾರ್ವಭೌಮರು ! ಅವರ ಮುಂದೆ ಕಾನೂನುಬದ್ಧವಾಗಿ ಸ್ಥಾಪಿತವಾಗಿರುವ ಸಂಘ ಸಂಸ್ಥೆಗಳು, ಆ ಸಂಘ ಸಂಸ್ಥೆಗಳಿಗಾಗಿ ಸರ್ಕಾರ ಮಾಡಿರುವ ನಿಯಮಗಳು, ಇವುಗಳಾವುವೂ ಅನ್ವಯಿಸುವುದಿಲ್ಲ ಎಂಬ ಪ್ರಶ್ನಾತೀತ ಧೋರಣೆಯಿಂದ ಈ ನಿರ್ಣಯವನ್ನು ವಿದ್ಯಾನಂದರು ಮಾಡಿಸಿದ್ದಾರೆ ಸೊಸೈಟಿ ಸರ್ಕಾರದ ನಿಯಂತ್ರಣಕ್ಕೊಳಪಟ್ಟಿದೆ. ಸಂಸ್ಥೆಯ ಆಗು ಹೋಗುಗಳನ್ನೆಲ್ಲಾ ನಿರ್ಧರಿಸುವ ಸರ್ವಸದಸ್ಯರಿದ್ದಾರೆ ಎಂಬ ಪ್ರಾಥಮಿಕ ತಿಳುವಳಿಕೆಯೂ ಸಹ

ಈ ನಿರ್ಣಯವನ್ನು ಮಾಡಿಸುವ ಸಂದರ್ಭದಲ್ಲಿ ವಿದ್ಯಾನಂದರಿಗಿದ್ದಂತೆ ಕಂಡುಬರು ವುದಿಲ್ಲ. ಮೇಲಾಗಿ ಒಂದು ಸಂಸ್ಥೆಯ ಆಸ್ತಿಪಾಸ್ತಿಗಳನ್ನು ಕೇಳುವಾಗ ಹಾಗೆ ಕೇಳಲು ನಿಜವಾದ ಕಾರಣಗಳೇನು ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಿಲ್ಲ. ಜೊತೆಗೆ ಇರಲೇಬೇಕಾದ ಸೌಜನ್ಯವೂ ಸಹ ಇಲ್ಲಿ ಕಂಡುಬರುವುದಿಲ್ಲ.

ವಿದ್ಯಾನಂದರ ಅಪೇಕ್ಷೆಯಂತೆ ನಿರ್ಣಯವನ್ನು ಮಾಡಿಸಿದ ಹೆಚ್ ಎನ್ ರಾಜೇಂದ್ರಕುಮಾರ್‌ರವರು ವಿದ್ಯಾನಂದರ ಪರವಾಗಿ ತಾ॥ 17–8–80 ರಂದು ಚಂದ್ರಯ್ಯನವರಿಗೆ ಮಾಡಿದ ತಂತಿ ಸಂದೇಶದಲ್ಲಿ, ಸೊಸೈಟಿಯ ಎಲ್ಲಾ ದಾಖಲೆಗಳನ್ನು ಮತ್ತು ಲೆಕ್ಕಪತ್ರಗಳನ್ನು ತಾ॥ 20–8–80 ರ ಮಧ್ಯಾಹ್ನ ಮೂರುಗಂಟೆಯೊಳಗಾಗಿ ವಿದ್ಯಾನಂದಜಿಯವರಿಗೆ ಒಪ್ಪಿಸುವಂತೆಯೂ ತಿಳಿಸಿದ್ದಾರೆ ಮತ್ತು ಚಂದ್ರಯ್ಯನವರು ಮಠ ಮತ್ತು ಸ್ವಾಮೀಜಿಯವರ ಮೇಲೆ ಮಾಡಿರುವ ಆಪಾದನೆಗಳನ್ನು ಹಿಂದಕ್ಕೆ ಪಡೆ ಯಲು ತಿಳಿಸಿದ್ದಾರೆ ಕಡೆಗೆ ಚಂದ್ರಯ್ಯನವರು ಈ ಕಾರ್ಯಗಳನ್ನು ಮಾಡದೆ ಹೋದರೆ ಅವರ ಮೇಲೆ ಮುಂದಿನ ಕ್ರಮಗಳನ್ನು ತೆಗೆದುಕೊಳ್ಳುವುದಾಗಿಯೂ ಬೆದರಿಸಿದ್ದಾರೆ

ಇದು ಎಷ್ಟೊಂದು ಹಾಸ್ಯಾಸ್ಪದವಾದ ತಂತಿಸಂದೇಶ ! ವಿದ್ಯಾನಂದರು ತಮ್ಮ ಶಿಷ್ಯರೊಬ್ಬರ ಮೂಲಕ ತಮ್ಮ ಅವಿವೇಕವನ್ನು ಹೇಗೆ ಪ್ರದರ್ಶಿಸಿದ್ದಾರೆ ! ಹಾಗೆಯೇ ಚಂದ್ರಯ್ಯನವರಿಂದ ಕಾನೂನು ಬಾಹಿರವಾದ ಕೆಲಸವನ್ನು ಮಾಡಿಸಲು ಹೇಗೆ ಮುನ್ನುಗ್ಗಿದ್ದಾರೆ !

ಚಂದ್ರಯ್ಯನವರು ಸೊಸೈಟಿಯ ಕಾರ್ಯದರ್ಶಿಯೇ ಹೊರತು ಸರ್ವಾಧಿಕಾರಿ ಯಲ್ಲ ಅವರಿಗೆ ಶಿಕ್ಷಣಸಂಸ್ಥೆಯನ್ನೇ ಇನ್ನೊಬ್ಬರಿಗೆ ವಹಿಸುವ ಯಾವ ಹಕ್ಕೂ ಇಲ್ಲ ಹೀಗಿರುವಾಗ ಚಂದ್ರಯ್ಯನವರನ್ನು ಕಾನೂನಿಗೆ ವಿರುದ್ಧವಾಗಿ ನಡೆದುಕೊಳ್ಳುವಂತೆ ವಿದ್ಯಾನಂದರು ಮಧ್ಯವರ್ತಿಗಳ ಮೂಲಕ ಅವರನ್ನು ಬೆದರಿಸುತ್ತಿದ್ದಾರೆ ತಂತಿಸಂದೇಶ ದಂತೆ ನಡೆದುಕೊಳ್ಳದಿದ್ದರೆ ಮುಂದಿನ ಕ್ರಮದ ಬೆದರಿಕೆಯೂ ಉಂಟು ! ಮೊದಲನೆಯ ಕ್ರಮವೇ ಬೆದರಿಕೆಯ ಕ್ರಮವಾಗಿರುವಾಗ ನಂತರದ ಕ್ರಮ ಬೆದರಿಕೆಯನ್ನೂ ಮೀರಿಸಿದ ಕ್ರಮವಾಗಿರಬೇಕು ಅಲ್ಲವೆ !

ತಾ॥ 1–5–80ರ 'ಗೊಮ್ಮಟವಾಣಿ'ಯ ಸ್ವಾಗತ ಪುರವಣಿಯಲ್ಲಿ ಶ್ರೀ ಜಿ ಬ್ರಹ್ಮಪ್ಪನವರು ವಿದ್ಯಾನಂದರನ್ನು "ಈ ಶತಮಾನದಲ್ಲಿ ಪೂಜ್ಯ ವಿದ್ಯಾನಂದರಷ್ಟು ಎತ್ತರಕ್ಕೆ ಏರಿದ ಜೈನಮುನಿಗಳು ಯಾರೂ ಇಲ್ಲ" ಎಂದು ಕೊಂಡಾಡಿದ್ದಾರೆ ಮೇಲಿನ ನಿರ್ಣಯ ಮತ್ತು ತಂತಿ ಸಂದೇಶವನ್ನು ಅನುಸರಿಸಿ "ಈ ಶತಮಾನದಲ್ಲಿ ವಿದ್ಯಾನಂದರ ಹಾಗೆ ಸುಳ್ಳು ಅಪಾದನೆಗಳನ್ನು ಹೊರಿಸಿ ಅವರನ್ನು ಮಧ್ಯವರ್ತಿಗಳ

ಮೂಲಕ ಬೆದರಿಸುವ ಜೈನಮುನಿಗಳು ಯಾರೂ ಇಲ್ಲ " ಎಂದು ಯಾರು ಬೇಕಾದರೂ ಕೊಂಡಾಡಬಹುದಲ್ಲವೆ ?

ಎತ್ತರಕ್ಕೆ ಏರಿದ ಜೈನಮುನಿಗಳ ಅಪೇಕ್ಷೆ ಹೇಗಿರಬೇಕು ? ಹೇಗಿರಬಾರದು ? ನಿಜವಾಗಿ ಆಲೋಚಿಸಿದರೆ ಪರಿಗ್ರಹಗಳಿಂದ ಲೋಕವ್ಯವಹಾರದಿಂದ ದೂರವಾಗಿ, ಆರ್ತಧ್ಯಾನ ರೌದ್ರಧ್ಯಾನಗಳಿಂದ ಮುಕ್ತರಾಗಿರಬೇಕಾದ ಮುನಿಗಳ ಅಪೇಕ್ಷೆ ಸೊಸೈಟಿಯ ಹಣಕಾಸಿನ ಕಡೆಗಿರಬಾರದು ! ಆದರ ವ್ಯವಹಾರವನ್ನು ಒಪ್ಪಿಸಿಕೊಳ್ಳುವ ಕಡೆಗಿರ ಬಾರದು. ಬದಲಾಗಿ ಅವರ ಅಪೇಕ್ಷೆ ಆತ್ಮಚಿಂತನೆಯ ಕಡೆಗಿರಬೇಕು ಧರ್ಮ ಪ್ರವ ರ್ತನೆಯ ಕಡೆಗಿರಬೇಕು ಜನರೂ ಅಷ್ಟೆ ! ಮುನಿಗಳು ಅಪೇಕ್ಷಿಸುತ್ತಾರೆಂದು ಅವರಿಗೆ ವ್ಯವಹಾರಗಳನ್ನು ಒಪ್ಪಿಸಲು ಹೋಗಬಾರದು ಅವರಿಗೊಪ್ಪಿಸಿ ಎಂದು ಇತರರನ್ನು ಬೆದರಿಸಲು ಹೋಗಬಾರದು ನಿಜವಾಗಿ ಮುನಿಗಳಿಗೆ ಒಪ್ಪಿಸಬೇಕಾದ್ದು ಕೇವಲ ವಂದನೆಗಳನ್ನು ಮಾತ್ರ ಮತ್ತು ಅವರು ಆಹಾರಕ್ಕಾಗಿ ಮನೆಗೆ ಬಂದಾಗ ಆಹಾರವನ್ನಲ್ಲದೆ ಬೇರೆ ಸಂಪತ್ತನ್ನಲ್ಲ

ವಿದ್ಯಾನಂದ ಮುನಿಗಳ ಮಧ್ಯವರ್ತಿಗಳ ಮೂಲಕ ಬಂದ ತಂತಿ ಸಂದೇಶಕ್ಕೆ ಚಂದ್ರಯ್ಯನವರು ಮಣಿಯಲಿಲ್ಲ ಅವರು ಈ ಬೆದರಿಕೆಯನ್ನು ಉಪೇಕ್ಷೆ ಮಾಡಿದರು

ಈ ಸಮಯದಲ್ಲಿ ವಿದ್ಯಾನಂದ ಮುನಿಗಳು ಸಮಾಜದಲ್ಲಿ ನಿರ್ಮಿಸಿದ ಅಶಾಂತಿಯ ವಾತಾವರಣವನ್ನು ನಿವಾರಿಸುವ ಒಂದು ಪ್ರಯತ್ನ ನಡೆಯಿತು ಸಮಾಜದಲ್ಲಿ ಪ್ರಮುಖರಾದವರಲ್ಲಿ ಕೆಲವರು ಶಾಂತರಾಜ್ ಮತ್ತು ಚಂದ್ರಯ್ಯನವರ ಮನವೊಲಿಸಿ ಅವರನ್ನು ವಿದ್ಯಾನಂದ ಮುನಿಗಳ ಹತ್ತಿರ ವಿಚಾರವಿನಿಮಯಕ್ಕಾಗಿ ಬಲವಂತ ಮಾಡಿ ಕರೆದುಕೊಂಡು ಹೋದರು ತಾ॥ 22-8-80 ರಂದು ನಡೆದ ಈ ಭೇಟಿಯಲ್ಲಿ ವಿದ್ಯಾನಂದರ ಹಿಂದಾದುದನ್ನೆಲ್ಲಾ ಮರೆತು ಧಾರ್ಮಿಕ ಕಾರ್ಯದಲ್ಲಿ ಎಲ್ಲರೂ ಸಹಕರಿ ಸೋಣ ಎಂಬ ಶಾಂತಿಸ್ಥಾಪಿಸುವ ಆಶ್ವಾಸನೆಯಿಂದಾಗಿ ತಮ್ಮ ಮೇಲೆ ನಡೆಯುತ್ತಿರುವ ಅಪಪ್ರಚಾರ ನಿಲ್ಲಬಹುದೆಂಬ ನಿರೀಕ್ಷೆಯಿಂದ ಚಂದ್ರಯ್ಯನವರೂ ಶಾಂತರಾಜರೂ ಮೈಸೂರಿಗೆ ಹಿಂತಿರುಗಿದರು ಆದರೆ ಅವರ ನಿರೀಕ್ಷೆ ಹುಸಿಯಾಗಲು ಬಹಳ ದಿನಗಳು ಬೇಕಾಗಲಿಲ್ಲ !

**ಅಸಹ್ಯ ಕರಪತ್ರಗಳು :**

ತಾ॥ 26-8-80 ರಂದು ಮೈಸೂರಿನ ಎಂ ಡಿ. ಬ್ರಹ್ಮಪ್ಪ ಎಂಬುವರು " ಶ್ರೀ ಮಹಾವೀರ ಭಗವಾನ ಕಿ ಜೈ " ಎಂಬ ಶಿರೋನಾಮೆಯಲ್ಲಿ ಒಂದು ಕರಪತ್ರ ಹೊರಡಿಸಿದರು. ಈ ಕರಪತ್ರ ಶ್ರೀ ವಿದ್ಯಾನಂದರಿಗೆ, ಶ್ರೀ ಚಾರುಕೀರ್ತಿಸ್ವಾಮಿಜಿಗೆ

ಮತ್ತು ಕರ್ನಾಟಕದ ಜೈನ ಸಮಾಜಕ್ಕೆ ಮಾಡಿಕೊಂಡ ಮನವಿ ರೂಪದಲ್ಲಿದೆ ಇದರಲ್ಲಿ ಚಂದ್ರಯ್ಯ, ಶಾಂತರಾಜ್, ನಾಗಕುಮಾರ್, ಮಹಾವೀರಪ್ರಸಾದ್ ಮತ್ತು ನಿರ್ಮಲ್ ಕುಮಾರ್ - ಇವರುಗಳನ್ನು ಪ್ರಧಾನವಾಗಿ ಹೆಸರಿಸಿ ಅವಹೇಳನ ಮಾಡಲಾಗಿದೆ ಈ ಅಸಹ್ಯಕರಪತ್ರವನ್ನು ಕರ್ನಾಟಕದಾದ್ಯಂತ ಕಳುಹಿಸಲಾಗಿದೆ "ಮಹಾವೀರಭಗವಾನ ಕಿಜೈ" ಎಂಬ ಶಿರೋನಾಮೆ ಕಂಡಕೂಡಲೇ ಇದನ್ನು ದೇವಸ್ಥಾನದ ಗೋಡೆಯ ಮೇಲೆ ಎಷ್ಟೋಜನ ಪುರೋಹಿತರು ನೇತುಹಾಕಿದರು! ಆಧಾರರಹಿತವಾದ ಈ ಅಸಭ್ಯ ಕರಪತ್ರವನ್ನು ವಿದ್ಯಾನಂದ ಮುನಿಗಳಾಗಲೀ ಅಥವಾ ಚಾರುಕೀರ್ತಿಸ್ವಾಮಿಜಿಯವರಾಗಲೀ ಖಂಡಿಸದೇ ಇರುವುದು ಆಶ್ಚರ್ಯಕರವಾಗಿದೆ!

ವಿದ್ಯಾನಂದ ಮುನಿಗಳು ತಾ॥ 2–9–80 ರಂದು ಶ್ರವಣಬೆಳಗೊಳದ ಒಂದು ಸಮಾರಂಭದಲ್ಲಿ ಮಾತನಾಡುತ್ತಾ "ಬಾಯಿಂದ ಬಾಣವಂತೆ ಬಿರುನುಡಿಗಳನ್ನು ಆಡುವುದು ಸಲ್ಲದು ಯಾರಿಗೇ ಆಗಲಿ, ಎಂತಹ ಸಂದರ್ಭದಲ್ಲಿಯೇ ಆಗಲಿ ಅಪಶಬ್ದ ನುಡಿಯಬಾರದು" ಎಂದು ಹೇಳಿದ್ದಾರೆ ಈ ಮಾತುಗಳನ್ನು ವಿದ್ಯಾನಂದರು ಆಡುವಾಗ ತಾವು ಈ ಹಿಂದೆ ತಾ॥ 14–7–80 ರಂದು ಬೆಳ್ಳೂರಿನಲ್ಲಿ ಆಡಿದ್ದ ಬಿರುನುಡಿಗಳು ಮತ್ತು ಅಪಶಬ್ದಗಳನ್ನು ಬಹುಶಃ ಮರೆತಿದ್ದರೆಂದು ಕಾಣುತ್ತದೆ! ಹಾಗೆಯೇ ತಾ॥ 26–8–80 ರಂದು ಎಂ ಡಿ ಬ್ರಹ್ಮಪ್ಪನವರು ತಮಗೆ ಅರ್ಪಿಸಿದ ಕರಪತ್ರದಲ್ಲಿ ಉಪಯೋಗಿಸಿರುವ ಬಿರುನುಡಿಗಳು ಮತ್ತು ಅಪಶಬ್ದಗಳು ವಿದ್ಯಾನಂದರಿಗೆ ಮೃದುವಚನಗಳಾಗಿಯೇ ಕಂಡಿರಬೇಕು! ಏಕೆಂದರೆ ತಾವು ಖಂಡಿಸಿರುವ ವ್ಯಕ್ತಿಗಳನ್ನೇ ಎಂ ಡಿ ಬ್ರಹ್ಮಪ್ಪನವರೂ ಖಂಡಿಸುತ್ತಿದ್ದಾರೆ ಅಲ್ಲವೆ! ವಿದ್ಯಾನಂದರು ಆ ಕರಪತ್ರವನ್ನು ಮುದ್ರಿಸಿದವರಿಗೆ ಹಿತವಾದ ಹೇಳದಿದ್ದರೆ ಹೋಗಲಿ, ಚಂದ್ರಯ್ಯನವರು ಸುಮ್ಮನಿರಲಾಗುತ್ತದೆಯೆ? ತಮ್ಮ ವಿರುದ್ಧ ಮಾನನಷ್ಟಕ್ಕೆ ಸಮನಾದ ಕರಪತ್ರ ಮುದ್ರಿಸಿದವರ ವಿರುದ್ಧ ಕೋರ್ಟಿನಲ್ಲಿ ಮೊಕದ್ದಮೆಯನ್ನು ಹೂಡಿದರು

ಈ ಕರಪತ್ರದ ಹಾವಳಿ ಇಲ್ಲಿಗೆ ನಿಲ್ಲಲಿಲ್ಲ! ತಾ॥ 4–9–80 ರಂದು ಎಸ್ ಸುರೇಶ್ ಕುಮಾರ್ ಜೈನ್ ಮತ್ತು ಪ್ರಕಾಶ್ ಎಂಬುವರು 'ಸ್ಪೆಷಲ್ ಪಾರ್ಟಿ ಮುಂದೂಡಿಕೆ—ಒಂದು ಪ್ರಕಟಣೆ' ಎಂಬ ಶಿರೋನಾಮೆಯಲ್ಲಿ ಒಂದು ಕರಪತ್ರ ಹೊರಡಿಸಿದರು ಇದು ಬಹಳ ಬಾಲಿಶತನದಿಂದಲೂ ಮತ್ತು ಕುಚೇಷ್ಟೆತನದಿಂದಲೂ ಕೂಡಿದೆ, ಇದರಲ್ಲಿ ಪ್ರಧಾನವಾಗಿ ತಾ॥ 22–8–80 ರಂದು ಶಾಂತರಾಜರು ಮತ್ತು ಚಂದ್ರಯ್ಯನವರು ಇವರಿಬ್ಬರೂ ವಿದ್ಯಾನಂದರು ಮತ್ತು ಚಾರುಕೀರ್ತಿಯವರಲ್ಲಿ 'ತಾವು ಅರಿಯದೆ ಮಾಡಿದ ತಪ್ಪಿಗಾಗಿ ಸಾಷ್ಟಾಂಗವಾಗಿ ಕ್ಷಮೆಯಾಚಿಸಿದರು' ಎಂದು ಬರೆಯಲಾಗಿದೆ ತಕ್ಷಣವೇ ಈ ಸುದ್ದಿ ಶುದ್ಧ ಸುಳ್ಳು, ಕ್ಷಮಾಯಾಚನೆಯ ಪ್ರಶ್ನೆಯೇ ಉದ್ಭವಿಸಲಿಲ್ಲ ಅಪಪ್ರಚಾರದ ಉದ್ದೇಶದಿಂದ ಎಸ್ ಸುರೇಶ್ ಕುಮಾರ್ ಜೈನ್‌ರವರ ಕರಪತ್ರ

ಕೊಡಿದೆ ಎಂದು ಚಂದ್ರಯ್ಯನವರು ಪ್ರತಿಯಾಗಿ ಕರಪತ್ರ ಮುದ್ರಿಸಿ ಸಾರ್ವಜನಿಕರ ಗಮನಕ್ಕೆ ತಂದರು

**ಸೇವಾಸಮಿತಿಗೆ ಲಗ್ಗೆ :**

ಈ ಸಂದರ್ಭದಲ್ಲಿ ಚಂದ್ರಯ್ಯನವರ ಮೇಲೆ ಬೇರೊಂದು ಮೂಲದಿಂದ ಇನ್ನೊಂದು ಬಗೆಯ ಧಾಳಿ ಆರಂಭವಾಯಿತು.

ಕಳೆದ ಅನೇಕ ವರ್ಷಗಳಿಂದಲೂ ಚಂದ್ರಯ್ಯನವರನ್ನು ಅಧ್ಯಕ್ಷರನ್ನಾಗಿ ಶಾಂತ ರಾಜ್‌ರವರನ್ನು ಉಪಾಧ್ಯಕ್ಷರನ್ನಾಗಿ ಹೊಂದಿ ಕಾರ್ಯನಿರ್ವಹಿಸಿಕೊಂಡು ಬರು ತ್ತಿದ್ದ '' ಶ್ರೀ ಗೋಮಟಗಿರಿ ಕ್ಷೇತ್ರ ಸೇವಾ ಸಮಿತಿ ''ಯ ಆಡಳಿತವನ್ನು ಕ ಸಿ ದು ಕೊಳ್ಳುವ ಪ್ರಯತ್ನ ಪ್ರಾರಂಭವಾಯಿತು ವಿದ್ಯಾನಂದರ ಮಾತುಗಳಿಂದ ಪ್ರಚೋದಿತ ರಾದ ಕೆಲವರು ಸೇರಿ ಮೊದಲಿನಿಂದಲೂ ಇದ್ದ ಸಮಿತಿಗೆ ಪ್ರತಿಯಾಗಿ ''ಶ್ರೀ ಗೋಮಟ ಗಿರಿ ಕ್ಷೇತ್ರ ಸೇವಾ ಸಮಿತಿ (ರಿ) '' ಎಂಬ ಇನ್ನೊಂದು ಸಂಸ್ಥೆಯನ್ನು ಸ್ಥಾಪಿಸಿದರು ಇದರ ಉದ್ಘಾಟನಾ ಸಮಾರಂಭವು ತಾ|| 14-9-80 ರಂದು ಮೈಸೂರಿನ ಎಂ ಎಲ್ ಜೈನ್ ಬೋರ್ಡಿಂಗ್ ಹೋ‌ನಲ್ಲಿ ನಡೆಯಿತು ಉದ್ಘಾಟನೆಯನ್ನು ಶ್ರವಣಬೆಳಗೊಳದ ಚಾರುಕೀರ್ತಿಯವರು ನೆರವೇರಿಸಿದರು ಈ ಸಂದರ್ಭದಲ್ಲಿ ಅವರು ಮಾತನಾಡುತ್ತಾ '' ಧರ್ಮದ ತಳಹದಿ ಮೇಲೆ ಭಾರತದ ಸಂಸ್ಕೃತಿ ನಿಂತಿದೆ ಅದನ್ನು ಉಳಿಸಲು ಸರ್ವರೂ ಸರ್ವರೀತಿಯಲ್ಲೂ ಪ್ರಯತ್ನ ಮಾಡಬೇಕು ಗೋಮಟಗಿರಿ ಕ್ಷೇತ್ರದ ಉನ್ನತಿಗಾಗಿ ಎಲ್ಲರೂ ಶ್ರಮಿಸಬೇಕು '' ( ತಾ|| 15-9-80 ರ ಅಶೋಕಾ ಪತ್ರಿಕೆಯ ವರದಿ ) ಎಂಬ ಉಪದೇಶ ನೀಡಿದರು

ಧರ್ಮ, ಸಂಸ್ಕೃತಿಯ ಮೇಲೆ ಯಾರು ಬೇಕಾದರೂ ಮಾತನಾಡುವುದು ಸುಲಭ. ಆದರೆ ಅನುಸರಣೆ ಕಷ್ಟ ! ಚಾರುಕೀರ್ತಿಯವರು ಉದ್ಘಾಟಿಸುತ್ತಿರುವ ಸಂಸ್ಥೆ ಧರ್ಮಕ್ಕೆ ಸಂಸ್ಕೃತಿಗೆ ಅನುಗುಣವಾಗಿದೆಯೆ ? ಎಂಬುದು ಮುಖ್ಯ

ಈಗಾಗಲೇ ಗೋಮಟಗಿರಿ ಕ್ಷೇತ್ರದಲ್ಲಿ 30 ವರ್ಷಗಳಿಂದಲೂ ಒಂದು ಸಂಸ್ಥೆಯು ಸೇವಾಕಾರ್ಯಗಳನ್ನು ನಡೆಸುತ್ತಿರುವಾಗ, ಕ್ಷೇತ್ರದ ಆಡಳಿತವನ್ನು ಅದರಿಂದ ಕಸಿದು ಕೊಳ್ಳುವ ಏಕೈಕ ಉದ್ದೇಶದಿಂದ ಈ ಹೊಸಾ ಸಂಸ್ಥೆಯ ರಚನೆಯಾಗಿದೆ ಈಗಾಗಲೇ ಅಸ್ತಿತ್ವದಲ್ಲಿರುವ ಸಮಿತಿ ಸೇವಾಕಾರ್ಯಗಳ ವಿಚಾರವಾಗಿ ತನ್ನ ಅಸಹಾಯಕತೆಯನ್ನು ತೋರ್ಪಡಿಸಿಕೊಂಡಿಲ್ಲ. ಪರಿಸ್ಥಿತಿ ಹೀಗಿರುವಾಗ, ಹುಟ್ಟುವಾಗಲೇ ದಾಯಾದಿತನದ ಮಾತ್ಸರ್ಯದಿಂದ ಹುಟ್ಟಿರುವ, ಕಿರುಕುಳವನ್ನು ಕೊಡುವ ಸಂಸ್ಕೃತಿಯನ್ನು ಪಡೆದು ಕೊಂಡಿರುವ, ಈ ಹೊಸ ಸಮಿತಿಯನ್ನು ಚಾರುಕೀರ್ತಿಯವರು ಬೆಂಬಲಿಸುವಾಗ

ಮೇಲಿನ ವಿಚಾರಗಳೆಲ್ಲಾ ಅವರಿಗೆ ತಿಳಿದಿರಲಿಲ್ಲವೆ ? ಇದರಿಂದ ಸಮಾಜದಲ್ಲಿ ಎರಡು ಗುಂಪುಗಳಾಗುತ್ತವೆ ದ್ವೇಷಾಸೂಯೆ ಅಂತಃಕಲಹಗಳಿಗೆ ಇದರಿಂದ ನಾಂದಿ ಹಾಡಿದಂತಾಗುತ್ತದೆ ಎಂಬುದು ಅವರಿಗೆ ಹೊಳೆಯಲೇ ಇಲ್ಲವೇ ?

## ಸ್ವಪ್ನದಲ್ಲಿಯೂ ಎಣಿಸಿರಲಿಲ್ಲ !

ಸಮಾಜದಲ್ಲಿ ಅಶಾಂತಿಯನ್ನು ಮೂಡಿಸುವ ಈ ಉದ್ಘಾಟನಾ ಕಾರ್ಯವನ್ನು ಚಾರುಕೀರ್ತಿಯವರು ಏಕೆ ಮಾಡಿದರು ? ಇದಕ್ಕೆ ಕಾರಣವಿಲ್ಲದೆ ಇಲ್ಲ ! ಧರ್ಮ ಏನಾದರೂ ಆಗಲೀ, ಸಂಸ್ಕೃತಿಗೆ ಯಾವ ಗತಿ ಬಂದರೂ ಸರಿ, ಚಂದ್ರಯ್ಯನವರನ್ನು ಸದೆಬಡಿಯಲೇಬೇಕೆಂಬ ಏಕೈಕ ಉದ್ದೇಶದಿಂದ ಮೇಲಿನ ಉದ್ಘಾಟನಾ ಕಾರ್ಯವನ್ನು ಚಾರುಕೀರ್ತಿಯವರು ಮಾಡಿದರು !

ಚಂದ್ರಯ್ಯನವರ ವಿರುದ್ಧ ಅಸಹನೆಯನ್ನು ಚಾರುಕೀರ್ತಿಸ್ವಾಮಿಗಳು 1979ನೇ ಇಸವಿಯಿಂದಲೂ ಬೆಳೆಸಿಕೊಂಡಿದ್ದರು ಇದಕ್ಕೆ ಬೇರೆ ಬೇರೆ ಘಟನೆಗಳ ಕಾರಣಗಳು ಉಂಟು ಈ ವಿಚಾರವನ್ನು ಸ್ಪಷ್ಟಪಡಿಸುವ ಅನೇಕ ದಾಖಲೆಗಳಿವೆ ಚಾರುಕೀರ್ತಿಯವರ ಕಾವಿಯ ಮರೆಯಲ್ಲಿ ಅಡಗಿರುವ ಅವರ ರಾಗದ್ವೇಷಗಳನ್ನು ಶ್ರುತಪಡಿಸುವ ಒಂದು ದಾಖಲೆಯನ್ನು ಇಲ್ಲಿ ಓದುಗರ ಗಮನಕ್ಕೆ ತರುತ್ತೇನೆ ತಾ|| 20-12-79 ರಂದು ಚಾರುಕೀರ್ತಿ ಭಟ್ಟಾರಕರು ಚಂದ್ರಯ್ಯನವರ ಮೇಲೆ ಕಿಡಿಕಾರುವ ಒಂದು ಪತ್ರವನ್ನು ಬರೆದರು ಅದರ ಕೆಲವು ವಾಕ್ಯಗಳನ್ನು ನೋಡಿ

“ ನೀವು ಕಮಿಟಿಯ ಸಿಬ್ಬಂದಿಯ ಮೇಲೆ, ಮಠದ ಮೇಲೆ ಹಾಗೂ ಕಮಿಟಿಯ ಸದಸ್ಯರ ಮೇಲೆ ದೋಷಾರೋಪಣೆಯ ಕೆಲವು ಪತ್ರಗಳನ್ನು ನೋಡಿದರೆ ನೀವು ಎಷ್ಟು ಕೀಳಾಗಿ ವರ್ತಿಸುತ್ತಿದ್ದೀರೆಂದು ಅರಿವಾಗುತ್ತದೆ, ನೀವು ಇಷ್ಟೊಂದು ಅಕೃತ್ಯವನ್ನು ಮಾಡುತ್ತೀರೆಂದು ಯಾರೂ ಸ್ವಪ್ನದಲ್ಲಿಯೂ ಎಣಿಸಿರಲಿಲ್ಲ ”

ಆಪಾದನೆಗೊಳಗಾದವರಿಗೆ ಚಾರುಕೀರ್ತಿಗಳು ಹೇಗೆ ರಕ್ಷಣೆ ಕೊಡುತ್ತಿದ್ದಾರೆ ನೋಡಿ ! ಆಪಾದನೆಗಳನ್ನು ಮಾಡಿದರೆ ಅದಕ್ಕೆ ದಾಖಲೆಗಳನ್ನೊದಗಿಸಿ ವಿಚಾರಣೆ ಮಾಡಿಸೋಣ ಎನ್ನಬೇಕು ದೋಷಾರೋಪಣೆಗಳು ಸ್ಥಿರಪಟ್ಟರೆ ಅದಕ್ಕೆ ಕ್ರಮತೆಗೆದುಕೊಳ್ಳಬೇಕು ಅದರ ಬದಲಾಗಿ ಲಿಖಿತ ಮೂಲಕ ದೋಷಾರೋಪಣೆ ಮಾಡಿದವರ ನಡವಳಿಕೆಯನ್ನೇ ' ಕೀಳುವರ್ತನೆ ' ' ಅಕೃತ್ಯ ' ಎಂದು ನೀತಿಬೋಧನೆಯನ್ನೇ ಜೀವನದ ಗುರಿಯಾಗುಳ್ಳ ಚಾರುಕೀರ್ತಿಯವರು ಕರೆಯುವುದಾದರೆ, ಚಾರುಕೀರ್ತಿಯವರು ಅಲಂಕರಿಸಬೇಕಾದ್ದು ಧರ್ಮಸಿಂಹಾಸನವನ್ನಲ್ಲ, ಅವರು ಕುಳಿತುಕೊಳ್ಳಬೇಕಾದ ಸ್ಥಳವೇ ಬೇರೆ ಇದೆ ಎನ್ನಬೇಕಾಗುತ್ತದೆ ! ಆಪಾದನೆ ಮಾಡಿದವರನ್ನೇ ವಿಚಾರಿಸದೆ ಖಂಡಿಸುವುದು, ಖಂಡಿತವಾಗಿಯೂ ಧರ್ಮಪೀಠದಲ್ಲಿ ಕುಳಿತಿರುವವರ ನಡವಳಿಕೆಯಲ್ಲ !

ಯಾರೇ ಆಗಲಿ ತಪ್ಪು ಮಾಡಿದ್ದರೆ ಅವರ ಮೇಲೆ ದೋಷಾರೋಪಣೆ ಮಾಡು ವುದನ್ನು ಸ್ವಪ್ನದಲ್ಲಿಯೂ ಎಣಿಸಬಾರದು ಎಂದರೆ ಯಾರುಬೇಕಾದರೂ ಎಂತಹ ಅಪರಾಧವನ್ನಾದರೂ ಮಾಡಬಹುದು ಎಂದು ಅರ್ಥವಾಗುತ್ತದೆ, ಎಂಬ ಕಟುಸತ್ಯ ಚಾರುಕೀರ್ತಿಯವರಿಗೆ ಏಕೆ ಅರ್ಥವಾಗಲಿಲ್ಲ ! ಹೋಗಲಿ ಅವರು ಪತ್ರ ಬರೆಯುವಾಗ ಉತ್ತಮ ಸಲಹೆಗಾರರನ್ನಾದರೂ ಇಟ್ಟುಕೊಳ್ಳಬೇಡವೆ ?

**ಈಡೇರದಿದ್ದ ಬಯಕೆ:**

ಹಿಂದೊಮ್ಮೆ ಚಾರುಕೀರ್ತಿ ಸ್ವಾಮಿಯವರೇ ಶ್ರೀ ಗೋಮಟಗಿರಿ ಕ್ಷೇತ್ರವನ್ನು ತಮ್ಮ ನೇರ ಹತೋಟಿಗೊಳಪಡಿಸಿಕೊಳ್ಳುವ ಇಚ್ಛೆ ವ್ಯಕ್ತಪಡಿಸಿದ್ದರು. ಶ್ರೀ ಗೋಮ ಗಿರಿ ಕ್ಷೇತ್ರ ಸೇವಾ ಸಮಿತಿಯು ಕ್ಷೇತ್ರವನ್ನು ಸ್ವಾಮಿಗಳಿಗೆ ವಹಿಸಿದರೆ ಅದು ಒಬ್ಬರ ಆಡಳಿತಕ್ಕೆ ಒಳಪಡುತ್ತದೆ ಅದರಿಂದ ಲೋಪದೋಷಗಳುಂಟಾಗಲು ಅವಕಾಶವಾಗ ಬಹುದು ಎಂದು ಭಾವಿಸಿತು ಬದಲಾಗಿ ಸರ್ಕಾರದ ನಿಯಂತ್ರಣವುಳ್ಳ, ಆಡಿಟಿಂಗ್ ವ್ಯವಸ್ಥೆಗೊಳಪಟ್ಟ ಮತ್ತು ಭಾರತದಾದ್ಯಂತ ಸದಸ್ಯರನ್ನೊಳಗೊಂಡ ಎಸ್, ಡಿ ಜೆ. ಎಂ ಐ ಮೇನೇಜಿಂಗ್ ಕಮಿಟಿಗೆ ಕ್ಷೇತ್ರವನ್ನು ವಹಿಸಲು ಸಿದ್ಧವಾಯಿತು ಇದಕ್ಕೆ ಸಂಬಂಧಪಟ್ಟ ಹಾಗೆ ತಾ॥ 18–5–1980 ನೇ ಭಾನುವಾರ ಶ್ರೀ ಚಾಮುಂಡಿ ವಸತಿ ಗೃಹದಲ್ಲಿ ನಡೆದ ಮೀಟಿಂಗಿನಲ್ಲಿ ಸೇವಾ ಸಮಿತಿಯಿಂದಾದ ನಿರ್ಣಯ ಹೀಗಿದೆ

' ಶ್ರವಣಬೆಳಗೊಳದ ಎಸ್ ಡಿ ಜೆ ಎಂ ಐ ಕಮಿಟಿ ಛೇರ್ಮನ್ ರವರು ಶ್ರೀ ಎಸ್ ಪಿ ಶಾಂತರಾಜ್‌ರವರಿಗೆ ಸೂಚಿಸಿರುವಂತೆ ಶ್ರೀ ಗೋಮಟಗಿರಿ ಕ್ಷೇತ್ರವನ್ನು ವಹಿಸಿ ಕೊಂಡು 1981 ರ ಮಸ್ತಕಾಭಿಷೇಕದೊಳಗಾಗಿ ಸದರೀ ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಪಡಿಸಿ ಬರುವ ಯಾತ್ರಿಕರ ಸಕಲ ಸೌಲಭ್ಯಗಳನ್ನು ಒದಗಿಸಿಕೊಡುವುದಾಗಿ ಹೇಳಿದ್ದರ ಮೇರೆ ಈ ವಿಷಯವನ್ನು ವಿಮರ್ಶಿಸಿ ಶ್ರೀ ಗೋಮಟಗಿರಿ ಕ್ಷೇತ್ರವನ್ನು ಎಸ್.ಡಿ ಜೆ ಎಂ ಐ ಕಮಿಟಿಗೆ ವಹಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟರು ತತ್ಸಂಬಂಧವಾಗಿ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯವರಿಂದ ಪತ್ರ ಬಂದಲ್ಲಿ ಅದನ್ನು ಸಮಿತಿಯ ಸ್ಪೆಷಲ್ ಮೀಟಿಂಗಿನಲ್ಲಿಟ್ಟು ನಿರ್ಧರಿಸಬೇಕೆಂದು ತೀರ್ಮಾನಿಸ ಲಾಯಿತು "

ಇದೊಂದು ಅತ್ಯಂತ ಪ್ರಮುಖನಿರ್ಣಯ. ಇದು ಚಂದ್ರಯ್ಯ ಮತ್ತು ಶಾಂತ ರಾಜ್ ರವರನ್ನೊಳಗೊಂಡತೆ ಸಮಿತಿಯ ಎಲ್ಲಾ ಸದಸ್ಯರ ನಿಸ್ವಾರ್ಥತೆಯನ್ನೂ, ಶ್ರೀ ಗೋಮಟಗಿರಿ ಕ್ಷೇತ್ರಾಭಿವೃದ್ಧಿಯ ಬಗೆಗೆ ಇರುವ ಕಳಕಳಿಯನ್ನೂ ಸ್ಪಷ್ಟ ಪಡಿಸುತ್ತದೆ ಈ ಒಂದೆ ತಾ॥ 20–12–79 ರಲ್ಲಿ ಶ್ರೀ ಚಾರುಕೀರ್ತಿಸ್ವಾಮಿಜಿ ಯವರಿಂದ ತಮ್ಮ ಮೇಲೆ ಕಿಡಿಕಾರುವ ಪತ್ರ ಬಂದಿದ್ದರೂ ಸಹ ಅದನ್ನು ಮನಸ್ಸಿ

ನಲ್ಲಿಡದೆ ಚಾರುಕೀರ್ತಿಯವರೇ ಛೇರ್ಮನ್ನರಾಗಿರುವ ಕಮಿಟಿಯ ಮಡಿಲಿಗೆ ತಾವು ಹಲವಾರು ವರ್ಷಗಳಿಂದ ರಕ್ಷಿಸಿರುವ ಕ್ಷೇತ್ರವನ್ನು ಒಪ್ಪಿಸಲು ಇಲ್ಲಿ ಚಂದ್ರಯ್ಯನವರು ಹೊರಟಿದ್ದಾರೆ ಇವರ ಮಾನಸಿಕ ಔದಾರ್ಯ ದೊಡ್ಡದಲ್ಲವೆ ?

ಮೇಲಿನ ನಿರ್ಣಯಕ್ಕೆ ಅನುಗುಣವಾಗಿ ಸಮಿತಿಯ ಅಧ್ಯಕ್ಷರಾದ ಚಂದ್ರಯ್ಯನವರು ತಾ॥ 19–5–1980 ರಂದು ಎಸ್ ಡಿ ಜೆ ಎಂ ಐ ಕಮಿಟಿಯ ಕಾರ್ಯದರ್ಶಿಯವರಿಗೆ ಒಂದು ಪತ್ರ ಬರೆದು ಸಮಿತಿಯ ನಿರ್ಣಯವನ್ನು ತಿಳಿಸಿ ಕ್ಷೇತ್ರವನ್ನು ವಹಿಸಿಕೊಳ್ಳುವುದರ ಬಗ್ಗೆ ಮೇನೇಜಿಂಗ್ ಕಮಿಟಿಯ ಪ್ರತಿಕ್ರಿಯೆಯನ್ನು ಕೇಳಿದರು ಪತ್ರದ ನಕಲುಗಳನ್ನು ಛೇರ್ಮನ್ನರಿಗೂ, ವೈಸ್-ಛೇರ್ಮನ್ನರಿಗೂ ಮತ್ತು ಕಮಿಟಿಯ ಎಲ್ಲ ಸದಸ್ಯರಿಗೂ ಕಳುಹಿಸಿಕೊಟ್ಟರು ಶೀಘ್ರವಾಗಿ ಉತ್ತರ ನೀಡುವಂತೆ ಪತ್ರದಲ್ಲಿ ಕೋರಿದ್ದರು ಗೋಮಟಗಿರಿ ಕ್ಷೇತ್ರವನ್ನು ಶ್ರವಣಬೆಳಗೊಳದ ಕಮಿಟಿಗೆ ವಹಿಸುವ ಉತ್ಸಾಹ ಹೀಗೆ ಸೇವಾಸಮಿತಿಯವರಲ್ಲಿ ಪ್ರಕಟವಾದಾಗ ಕಮಿಟಿಯ ಕಾರ್ಯದರ್ಶಿಯವರಿಂದ ಇದಕ್ಕೆ ಉತ್ತರವೇ ಬರಲಿಲ್ಲ ! ವಾಸ್ತವವಾಗಿ ಇಲ್ಲಿ ಕಾರ್ಯದರ್ಶಿಯವರು ಚಂದ್ರಯ್ಯನವರಿಂದ ಬಂದ ಪತ್ರವನ್ನು ಕಮಿಟಿಯ ಸಭೆಯಲ್ಲಿಟ್ಟು ಅದರ ತೀರ್ಮಾನವನ್ನು ತಿಳಿಸಬೇಕಾಗಿತ್ತು ಆದರೆ ಕಾರ್ಯದರ್ಶಿಯವರು ತಮ್ಮ ಈ ಮಾಮೂಲು ಕರ್ತವ್ಯವನ್ನು ಮಾಡಲಿಲ್ಲ, ಸೇವಾಸಮಿತಿಯವರಿಗೆ ಒಂದು ತಾತ್ಕಾಲಿಕವಾದ ಉತ್ತರವನ್ನೂ ಬರೆಯಲಿಲ್ಲ, ಕಾರ್ಯದರ್ಶಿಯವರನ್ನು ಈ ವಿಚಾರನಲ್ಲಿ ತಡೆದವರಾದರೂ ಯಾರು ?

ಕಾರ್ಯದರ್ಶಿಯವರು ಉತ್ತರ ಕೊಡುವುದನ್ನು ತಡೆಹಿಡಿದ ರೀತಿಯಲ್ಲಿ, ಚಾರುಕೀರ್ತಿಯವರಿಂದ ಈ ವಿಚಾರವಾಗಿ ಶಾಂತರಾಜರಿಗೆ ಒಂದು ಪತ್ರ ಬಂತು ಇದನ್ನು ತಾ॥ 22–5–1980 ರಂದು ಬರೆಯಲಾಗಿದೆ ಪತ್ರದ ವಿವರ ಹೀಗಿದೆ

" ಧರ್ಮಬಂಧು ಶ್ರೀ ಎಸ್ ಪಿ ಶಾಂತರಾಜರಿಗೆ

ತರುವಾಯ ಶ್ರೀ ಗೋಮಟಗಿರಿ ಕ್ಷೇತ್ರ ಸೇವಾ ಸಮಿತಿಯಿಂದ ಗೋಮಟಗಿರಿ ಕ್ಷೇತ್ರವನ್ನು ಇಲ್ಲಿನ ಎಸ್ ಡಿ ಜೆ ಎಂ ಐ ಮ್ಯಾನೇಜಿಂಗ್ ಕಮಿಟಿಗೆ ಸೇರಿಸುವ ವಿಚಾರವಾಗಿ ತಾ॥ 19-5-80 ರ ಪತ್ರ ಬಂದಿರುತ್ತೆ ಅಲ್ಲದೆ ಆ ಪತ್ರದೊಂದಿಗೆ ಗೋಮಟಗಿರಿ ಕ್ಷೇತ್ರ ಸಮಿತಿಯ ಇತ್ತೀಚೆಗಿನ ಸಭೆಯಲ್ಲಿ ನೀವು ಮಂಡಿಸಿರುವ ವಿಚಾರದ ಬಗ್ಗೆ ನಿರ್ಣಯಿಸಿದ ಪ್ರಸ್ತಾವದ ಪ್ರತಿ ಲಿಪಿಯೂ ಸಹಾ ಬಂದಿರುತ್ತೆ

ಗೋಮಟಗಿರಿ ಹಾಗೂ ಇತರ ಕ್ಷೇತ್ರಗಳ ಬಗ್ಗೆ ನಾವು ನಿಮ್ಮಲ್ಲಿ ಮಾತನಾಡಿರುವುದು ನಿಜ ಆದರೆ ಎಸ್. ಡಿ ಜೆ ಎಂ ಐ ಮ್ಯಾನೇಜಿಂಗ್ ಕಮಿಟಿಗೆ ಗೋಮಟ

ಗಿರಿ ಕ್ಷೇತ್ರವನ್ನು ವಹಿಸಬೇಕೆಂದು ನಾವು ನಿಮ್ಮಲ್ಲಿ ತಿಳಿಸಿಲ್ಲ ಶ್ರೀ ಮಠದ ಸ್ವಸ್ತಿಶ್ರೀ ಸ್ವಾಮಿಗಳಿಗೆ ಈ ಕ್ಷೇತ್ರವನ್ನು ವಹಿಸಿದಲ್ಲಿ ಅದರ ಅಭಿವೃದ್ಧಿಯನ್ನು ಮಾಡಲಾಗುವುದು ಎಂದು ತಿಳಿಸಿದ್ದು. ಇದರಿಂದ ನಿಮ್ಮ ಅಭಿಪ್ರಾಯವನ್ನು ಸರಿಯಾದ ರೀತಿಯಲ್ಲಿ ತಿ ಳಿ ದು ಕೊ ೦ ಡು ನಿರ್ಣಯ ತೆಗೆದುಕೊಂಡರೆ ಬಹಳ ಉತ್ತಮ. ಈ ಬಗ್ಗೆ ತಿದ್ದಿಕೊಳ್ಳುವುದು

ಸಮಿತಿಯಿಂದ ಬಂದಿರುವ ಪತ್ರವನ್ನು ನಿಮ್ಮ ಅವಗಾಹನೆಗಾಗಿ ಇದರೊಂದಿಗೆ ಲಗತ್ತಿಸಿದೆ

ಪತ್ರ ತಲ್ಪಿದ್ದಕ್ಕೆ ಬರೆಯಿರಿ

ಆಶೀರ್ವಾದಗಳು

(ಸಹಿ)

**ಸ್ವಸ್ತಿಶ್ರೀ ಚಾರುಕೀರ್ತಿ ಸ್ವಾಮಿಗಳು."**

ಗೋಮಟಗಿರಿ ಕ್ಷೇತ್ರದ ಬಗೆಗೆ ಸ್ವಾಮಿಗಳ ನಿಲುವು ಇಲ್ಲಿ ಸ್ಪಷ್ಟವಾಗಿದೆ ಕ್ಷೇತ್ರವನ್ನು ತಾವೇ ಸದಾಕಾಲ ಧರ್ಮನ್ನರಾಗಿರುವ ಸಂಸ್ಥೆಗೆ ವಹಿಸಿಕೊಳ್ಳಲು ಅವರು ಸಿದ್ಧರಿಲ್ಲ ! ಬದಲಾಗಿ ಅದನ್ನು ತಮ್ಮ ಒಂದು ಸ್ವಂತ ಆಸ್ತಿಯನ್ನಾಗಿ ಮಾಡಿಕೊಳ್ಳಲು ಅವರು ಕಾತರಪಟ್ಟಿರುವುದು ಸ್ವಯಂವೇದ್ಯವಾಗುತ್ತದೆ ಕ್ಷೇತ್ರವನ್ನು ಸಮಾಜದ ಜನರ ಹತೋಟಿಯಿಂದ ಬಿಡಿಸಿಕೊಂಡು ಅದನ್ನು ತಮ್ಮ ಏಕಸ್ವಾಮ್ಯದ ಆಸ್ತಿಯನ್ನಾಗಿ ಮಾಡಿಕೊಳ್ಳುವುದು ಸ್ವಾಮಿಗಳ ದೃಷ್ಟಿಯಲ್ಲಿ ಸರಿಯಾದ ಮತ್ತು ಉತ್ತಮವಾದ ಹಾದಿಯಾಗಿದೆ ಈ ಸಂದರ್ಭದಲ್ಲಿ ಗಮನಿಸಬೇಕಾದ ಒಂದು ಮುಖ್ಯಸಂಗತಿಯೆಂದರೆ, ಪರಿಗ್ರಹಗಳಿಗೆ ಸಹಜವಾಗಿ ಒಳಗಾಗಬಹುದಾದ ಸೇವಾ ಸಮಿತಿಯ ಸದಸ್ಯರು ಕ್ಷೇತ್ರದ ಆಡಳಿತದ ಪರಿಗ್ರಹವನ್ನು ಬಿಟ್ಟು ಕೊಡಲು ಹೊರಟಿದ್ದಾರೆ ಅದೇ ಸಂದರ್ಭದಲ್ಲಿ ಪರಿಗ್ರಹಗಳಿಂದ ಸಹಜವಾಗಿ ದೂರ ದೂರವಾಗುತ್ತಾ ಹೋಗಬೇಕಾದ ಸ್ವಾಮಿಗಳು ಇನ್ನೊಂದು ಕ್ಷೇತ್ರದ ಆಡಳಿತ ನಡೆಸುವ ಪರಿಗ್ರಹವನ್ನು ಕಟ್ಟಿಕೊಳ್ಳಲು ಆಸೆಯಿಂದ ಹೊರಟಿದ್ದಾರೆ ಶ್ರವಣಬೆಳಗೊಳಕ್ಷೇತ್ರದ ಆಡಳಿತಕ್ಕೆ ಸಂಬಂಧಿಸಿದಂತೆ ಅಷ್ಟುಹೊತ್ತಿಗಾಗಲೇ ಸಾರ್ವಜನಿಕರಿಂದ ಆಪಾದನೆಗೊಳಗಾಗಿದ್ದ ಸ್ವಾಮೀಜಿಯವರು ಆ ಆಪಾದನೆಗಳನ್ನು ನಿವಾರಿಸಿಕೊಳ್ಳದೆ, ಇನ್ನೊಂದು ಕ್ಷೇತ್ರದ ಆಡಳಿತ ವ್ಯವಹಾರಗಳನ್ನು ಬಯಸಿರುವುದು ಇನ್ನೂ ಕುತೂಹಲವನ್ನುಂಟು ಮಾಡುತ್ತದೆ

ಸ್ವಾಮೀಜಿಯವರ ಈ ಬಗೆಯ ಮನಸ್ಸಿನ ನಾಡಿಯನ್ನು ಹಿಡಿದ ಶ್ರೀ ಗೋಮಟಗಿರಿ ಕ್ಷೇತ್ರ ಸೇವಾ ಸಮಿತಿಯವರು ಅವರಿಗೆ ಕ್ಷೇತ್ರದ ಸರ್ವಾಧಿಕಾರವನ್ನೊಪ್ಪಿಸಿಕೊಡುವ ಕಾರ್ಯವನ್ನು ಮಾಡಲಿಲ್ಲ

ಈ ಘಟನೆಯಾದ ನಾಲ್ಕು ತಿಂಗಳ ನಂತರ ಅಂದರೆ ತಾ॥ 14-9-80 ರಂದು ಇದುವರೆಗೂ ಸಾರ್ವಜನಿಕ ಕ್ಷೇತ್ರದಲ್ಲಿ ಅಗೋಚರರಾಗಿದ್ದ ಯಾರೋ ಕೆಲವರು, ಶ್ರೀ ಗೋಮಟಗಿರಿ ಕ್ಷೇತ್ರಕ್ಕೆ ಪ್ರತಿಸಮಿತಿಯನ್ನು ರಚಿಸಿಕೊಂಡಾಗ ಅದರ ಉದ್ಘಾಟನೆ ಮಾಡಲು ಚಾರುಕೀರ್ತಿಸ್ವಾಮೀಜಿಯವರ ಆತ್ಮಸಾಕ್ಷಿ ಹೇಗೆ ಒಪ್ಪಿತು ? ಈ ಬಗ್ಗೆ ಮೊದಲಿನಿಂದಲೂ ಇರುವ ಸಮಿತಿಯವರ ಅಭಿಪ್ರಾಯವನ್ನು ಏಕೆ ಪಡೆದುಕೊಳ್ಳಲಿಲ್ಲ ! ( ಚಾರುಕೀರ್ತಿಸ್ವಾಮಿಗಳು ಹಿಂದೆ ಶ್ರೀ ಗೋಮಟಗಿರಿ ಕ್ಷೇತ್ರ ಸೇವಾ ಸಮಿತಿಯವರಿಂದ ಸನ್ಮಾನ ಪತ್ರವನ್ನೂ ಸಹ ಪಡೆದವರಾಗಿದ್ದಾರೆ) ಸಮಾಜದ ಜನರಲ್ಲಿ ಕಚ್ಚಾಟಕ್ಕೆ ಕಾರಣವಾಗುವ ಈ ಉದ್ಘಾಟನೆ ಸ್ವಾಮಿಗಳಿಗೆ ಅಷ್ಟೊಂದು ಪ್ರಮುಖವೆ ? ಅಥವಾ ಈ ಮೊದಲೇ ಗೋಮಟಗಿರಿ ಕ್ಷೇತ್ರವನ್ನು ತಮ್ಮ ವಶಕ್ಕೆ ಸಮಿತಿಯವರು ಕೊಡಲಿಲ್ಲ ವೆಂಬ ಮಾತ್ಸರ್ಯದಿಂದ ಈ ಕಲಹಕಾರಕವಾದ ವ್ಯವಹಾರಕ್ಕೆ ಜ್ಯೋತಿ ಬೆಳಗಿಸುವುದರ ಮೂಲಕ ಶುಭ ಕೋರಿದರೆ ?

ಈಗಾಗಲೇ ಈ ವ್ಯವಹಾರವೂ ಮುಜರಾಯಿ ಕೋರ್ಟಿನ ಕಟ್ಟೆ ಹತ್ತಿರುವುದ ರಿಂದ ಚಾರುಕೀರ್ತಿಸ್ವಾಮೀಜಿಯವರು ಸಮಾಜದಲ್ಲಿ ಧರ್ಮ, ಸಂಸ್ಕೃತಿ, ಶಾಂತಿಗಳ ಉದ್ಘಾಟನೆ ಮಾಡುತ್ತಿದ್ದಾರೋ ಅಥವಾ ಪರಸ್ಪರ ಗುದ್ದಾಟ ಮತ್ತು ಕೋರ್ಟು ವ್ಯವಹಾರಗಳ ಉದ್ಘಾಟನೆ ಮಾಡುತ್ತಿದ್ದಾರೋ ಎಂಬುದನ್ನು ಪ್ರಶ್ನಿಸಬೇಕಾಗಿದೆ ಚಾರುಕೀರ್ತಿಸ್ವಾಮೀಜಿಯವರ ಮನೋಧರ್ಮವನ್ನೇ ಎಲ್ಲರೂ ಮೈಗೂಡಿಸಿಕೊಂಡು ಬಿಟ್ಟರೆ ಸಮಾಜದಲ್ಲಿ ದೇವಸ್ಥಾನಗಳಿಗೆ ಬದಲು ಕೋರ್ಟುಗಳನ್ನೇ ಕಟ್ಟುತ್ತಾ ಹೋಗಬೇಕಾಗುತ್ತದೆ !

**ವ್ಯವಹಾರ ವಹಿಸಿಕೊಡಿ :**

ಸ್ವಾಮೀಜಿಯವರಿಂದ ಬೆನ್ನುತಟ್ಟಿಸಿಕೊಂಡು ಸ್ಥಾಪನೆಯಾದ ' ಶ್ರೀ ಗೋಮಟ ಗಿರಿ ಕ್ಷೇತ್ರ ಸೇವಾ ಸಮಿತಿ (ರಿ) ' ಸಂಸ್ಥೆಯು ತನ್ನ ಮೊಟ್ಟಮೊದಲನೆಯ ಕಾರ್ಯದ ಕಡೆ ಗಮನ ಕೊಟ್ಟಿತು. ಸಮಿತಿಯ ಅಧ್ಯಕ್ಷರೆಂದು ಕರೆದುಕೊಂಡಿರುವ ಎ ಪಿ ನೇಮಿ ರಾಜಯ್ಯ ಮತ್ತು ಕಾರ್ಯದರ್ಶಿಯೆಂದು ಕರೆದುಕೊಂಡಿರುವ ಸಿ ಪಿ ನಾಗೇಂದ್ರ ಕುಮಾರ್ ಎಂಬುವರು ತಾ॥ 19-9-80 ರಂದು ಮೊದಲಿನಿಂದಲೂ ಇರುವ ಸಮಿತಿಗೆ ಒಂದು ಪತ್ರ ಬರೆದು ತಮ್ಮ ಮೊದಲ ಕಾರ್ಯ ಮಾಡಿದ್ದಾರೆ ಪತ್ರ ವಿಷಯ ಹೀಗಿದೆ

" ಸೆಕ್ರೆಟರಿ ಮತ್ತು ಸದಸ್ಯರುಗಳು ಇವರಿಗೆ ತಿಳಿಸುವುದೇನೆಂದರೆ ತಾ॥ 12-9-80 ರಂದು ನಮ್ಮ ಮೇಲ್ಕಂಡ ಸೇವಾಸಮಿತಿಯು ರಿಜಿಸ್ಟರ್ಡ್ ಆಗಿರುತ್ತೆ

ಈ ಮೂಲಕ ತಮಗೆ ತಿಳಿಸುವುದೇನೆಂದರೆ ಶ್ರೀ ಗೋಮಟಗಿರಿ ಕ್ಷೇತ್ರಕ್ಕೆ ಸಂಬಂಧ ಪಟ್ಟ ಎಲ್ಲಾ ವ್ಯವಹಾರ ಮತ್ತು ದಾಖಲಾತಿಗಳನ್ನು ನಮಗೆ ವಹಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇವೆ

ಮುಂಬರುವ ಎಲ್ಲಾ ಪೂಜಾಕಾರ್ಯಕ್ರಮಗಳನ್ನು ನಮ್ಮ ಸಮಿತಿಯ ಪರವಾಗಿ ನಡೆಸಿಕೊಂಡು ಹೋಗಲು ತಮ್ಮಗಳೆಲ್ಲರ ಸಹಕಾರವನ್ನು ಕೋರುತ್ತೇವೆ ''

ಈ ಪತ್ರ ಯಾರೋ ಕೆಲವರು ಇತರರಿಗೆ ಪತ್ರ ಬರೆದು ನಿಮ್ಮ ಆಸ್ತಿಪಾಸ್ತಿ ಯನ್ನು ವಹಿಸಿಕೊಡಿ ಅದರ ಜವಾಬ್ದಾರಿಯನ್ನು ನಾವು ನೋಡಿಕೊಂಡು ಹೋಗುತ್ತೇವೆ ಎಂದು ಕೇಳಿದಂತಿದೆ ತಮ್ಮಗಳೆಲ್ಲರ ಸಹಕಾರವನ್ನು ಕೋರುತ್ತೇವೆ ಎಂಬ ಮಾತಿನಲ್ಲಿ ಸೌಜನ್ಯಕ್ಕೆ ಬದಲಾಗಿ ಅದರ ಆಭಾಸ ಮಾತ್ರವಿದೆ ಚಂದ್ರಯ್ಯನವರು ಅಧ್ಯಕ್ಷರಾಗುಳ್ಳ ಸೇವಾಸಮಿತಿಗೆ ತಾವು ಏಕೆ ಸಹಕಾರವನ್ನು ಕೊಡುತ್ತಿಲ್ಲ ಎಂಬುದನ್ನು ವಿವರಿಸಿಲ್ಲ ಪ್ರಥಮತಃ ಬೇರೆಯವರಿಗೆ ಸಹಕಾರ ಕೊಡುವ ಪಾಠವೇ ಗೊತ್ತಿಲ್ಲದವರು ಅವರಿಂದ ತಮ್ಮ ಮೂಗಿನ ನೇರಕ್ಕೆ ಸಹಕಾರವನ್ನು ಬಯಸುವುದು ವಿಚಿತ್ರವಾದ ಸಂಗತಿಯಾಗು ತ್ತದೆ

ಈ ವ್ಯವಹಾರ ಈಗಾಗಲೇ ಮುಜರಾಯಿಕೋರ್ಟಿನ ಮುಂದಿದೆಯೆಂದು ಹಿಂದೆಯೇ ತಿಳಿಸಲಾಗಿದೆ, ಇದರ ತೀರ್ಮಾನ ಇನ್ನೂ ಬರಬೇಕಾಗಿದೆ

ಇತ್ತ ವಿದ್ಯಾನಂದ ಮುನಿಗಳು ಸೊಸೈಟಿಯ ಆಸ್ತಿಪಾಸ್ತಿಗಳನ್ನು ವಶಪಡಿಸಿ ಕೊಳ್ಳುವ ತಮ್ಮ ಪ್ರಯತ್ನವನ್ನು ನಿಲ್ಲಿಸಲಿಲ್ಲ ಈ ಸಂದರ್ಭದಲ್ಲಿ ಶ್ರವಣಬೆಳಗೊಳದ ಪಾತ್ರೆ ಪಾ ಪಾರಿಗಳಾದ ಶ್ರೀ ಎಸ್ ಡಿ ಮಹಾವೀರ್ ಎಂಬುವರನ್ನು ತಮ್ಮ ಕೈಯಿನ ಆಯುಧವನ್ನಾಗಿ ಮಾಡಿಕೊಂಡು ಶ್ರೀ ಗೋಮಟೇಶ್ವರ ಎಜುಕೇಷನ್ ಸೊಸೈಟಿಯ ಅಧ್ಯಕ್ಷರನ್ನು ತಿವಿಯಲು ಹೊರಟರು ತಾ॥ 10–9–1980 ರಲ್ಲಿ ಜೈನಮಠದ ಕನ್ನಡ ಟೈಪ್‌ರೈಟರ್‌ನಲ್ಲಿ ಟೈಪಾದ ಶ್ರ ದೇ ಮಹಾವೀರ್ ಎಂದು ಸಹಿಯುಳ್ಳ ಈ ಪತ್ರ ಸರ್ವಾಧಿಕಾರದ ದುರ್ವಾಸನೆಯಿಂದ ಕೂಡಿದೆ ! ಗೋಮಟೇಶ್ವರನ ಹೆಸರಿ ನಲ್ಲಿರುವ ಸಂಸ್ಥೆಯ ಹಣವನ್ನು ಎಸ್ ಡಿ ಜೆ ಎಂ ಐ ಕಮಿಟಿಗೆ ತಕ್ಷಣವೇ ವರ್ಗಾಯಿಸ ದಿದ್ದರೆ ಕಾನೂನು ಪ್ರಕಾರ ಕ್ರಮ ತೆಗೆದುಕೊಳ್ಳುವ ಬೆದರಿಕೆಯೂ ಸಹ ಪತ್ರದಲ್ಲಿದೆ ಕಾನೂನಿನ ತತ್ವಗಳನ್ನೆಲ್ಲಾ ಕರತಲಾಮಲಕ ಮಾಡಿಕೊಂಡಿರುವ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಿಗೆ, ಕಾನೂನಿನ ಗಂಧವೇ ಗೊತ್ತಿಲ್ಲದ ವಿದ್ಯಾನಂದ ಮುನಿಗಳು ಬರೆಸಿದ ಅವಿವೇಕದ ಪರಮಾವಧಿಯ ಪತ್ರ ಇದಾಗಿದೆ ಈ ಪತ್ರದ ಕೊನೆಯ ಎರಡು ಪ್ಯಾರಾ ಗಳನ್ನು ಗಮನಿಸಿ

' ನೀವು ಈ ಬಗ್ಗೆ ಸಮಂಜಸ ಹಾಗೂ ಸಮರ್ಪಕ ಕ್ರಮ ತೆಗೆದುಕೊಳ್ಳದ ಪಕ್ಷ ದಲ್ಲಿ ಮುಂದಿನ ತಿಂಗಳು ಅಕ್ಟೋಬರ್‌ನಲ್ಲಿ ಅಖಿಲ ಕರ್ನಾಟಕ ಜೈನ ಸಮಾಜದ ಭಾರೀ ಸಭೆಯನ್ನು ಶ್ರವಣಬೆಳಗೊಳದಲ್ಲಿ ಕರೆದು ನಿಮ್ಮ ವಿರುದ್ಧ ಪ್ರಸ್ತಾವ ಪಾಸ ಮಾಡಲು ಕ್ರಮ ತೆಗೆದುಕೊಳ್ಳಬೇಕೆಂದು ತೀರ್ಮಾನಿಸಿರುತ್ತೇವೆ

ಈ ಪತ್ರವನ್ನು ಪರಮಪೂಜ್ಯ ಶ್ರೀ ವಿದ್ಯಾನಂದಮುನಿ ಮಹಾರಾಜರ ಗಮನಕ್ಕೆ ತಂದು ಬರೆದಿದೆ ಎಂದು ತಿಳಿಯುವುದು ''

ವಿದ್ಯಾನಂದ ಮುನಿಗಳು ಬರೆಸಿದ ಅಪ್ಪಟ ಐಲುತನದ ಈ ಪತ್ರಕ್ಕೆ ಸೊಸೈಟಿಯ ಅಧ್ಯಕ್ಷರು ಗಮನವೀಯಲಿಲ್ಲ !

ವಿದ್ಯಾನಂದ ಮುನಿಗಳು ಇದುವರೆಗೂ ತಮ್ಮ ಸಮಕ್ಷಮಕ್ಕೆ ಹಣವನ್ನು ತಂದೊಪ್ಪಿಸಿ ಎಂದು ಕೇಳುತ್ತಿದ್ದವರು, ಈ ಪತ್ರದಲ್ಲಿ ಹಣವನ್ನು ಎಸ್ ಡಿ.ಜೆ.ಎಂ ಐ ಕಮಿಟಿಗೆ ಒಪ್ಪಿಸಿ ಎಂದು ತಮ್ಮ ಮಾತನ್ನು ಬದಲಾಯಿಸಿರುವುದು ಈ ಪತ್ರದ ಒಂದು ವಿಶೇಷವೇ ಸರಿ !

ವಿದ್ಯಾನಂದ ಮುನಿಗಳು ಬೆಳ್ಳೂರಿನಲ್ಲಿ ಮಾತನಾಡಿದ ನಂತರ ಆ ಮಾತುಗಳನ್ನನುಸರಿಸಿ ಇಷ್ಟೆಲ್ಲಾ ವಿದ್ಯಮಾನಗಳು ನಡೆದುವು ವಿದ್ಯಾನಂದರು ಕರ್ನಾಟಕಕ್ಕೆ ಕಾಲಿಟ್ಟು ಸಮಾಜದಲ್ಲಿ ಇಷ್ಟೆಲ್ಲಾ ಅಶಾಂತಿಗಳಿಗೆ ಕಾರಣರಾದರಲ್ಲ ! ಎಂದು ಜನರು ಕಳವಳಗೊಂಡರು

## ನನ್ನ ಗಮನಕ್ಕೆ :

ಈ ಹಂತದಲ್ಲಿ ನಾನು 1980 ರ ಅಕ್ಟೋಬರ್ ತಿಂಗಳ ಕಡೆಯವಾರದಲ್ಲಿ ಮೈಸೂರಿಗೆ ಭೇಟಿಕೊಟ್ಟಾಗ ಮೇಲಿನ ಘಟನಾವಳಿಗಳೆಲ್ಲಾ ನನ್ನ ಗಮನಕ್ಕ ಬಂದವು ವಿದ್ಯಾನಂದರ ಭಾಷಣದಿಂದಾಗಿ ಸಮಾಜದಲ್ಲಿ ಅಶಾಂತಿ ಹರಡಿ ಅದು ದ್ವೇಷಾಸೂಯೆ ವೈಮನಸ್ಯಗಳಿಗೆ ಅವಕಾಶ ಮಾಡಿದುದನ್ನು ತಿಳಿದು ನನ್ನ ಮನಸ್ಸಿಗೆ ಆಘಾತವಾಯಿತು

ಅದುವರೆಗೂ ವಿದ್ಯಾನಂದರ ಸಾಧನೆಯ ವಿಚಾರವನ್ನು ದೂರದಿಂದಲೇ ಕೇಳಿ ಅಭಿಮಾನವಿಟ್ಟುಕೊಂಡವರಲ್ಲಿ ನಾನೂ ಒಬ್ಬನಾಗಿದ್ದ ಆದರೆ ವಿದ್ಯಾನಂದರು ಉಂಟು ಮಾಡಿದ ಈ ಅಹಿತಕರ ಸನ್ನಿವೇಶಗಳನ್ನು ತಿಳಿದು, ಅವರ ಬಗ್ಗೆ ಇದ್ದ ಅಭಿಮಾನವನ್ನು ನಾನು ಕೆದಕಿ ನೋಡುವಂತಾಯಿತು ವಿದ್ಯಾನಂದರನ್ನು ಕೂಡಲೆ ತಪ್ಪಿತಸ್ಥರನ್ನಾಗಿ ಪರಿಗಣಿಸಲು ನನ್ನ ಅಂತರಂಗ ಒಪ್ಪದಾಯಿತು. ಬೇರೆ ಯಾರೋ ಸ್ವಾರ್ಥಿಗಳು ನಿಸ್ಪೃಹರಾದ ಚಂದ್ರಯ್ಯನವರು ಮತ್ತು ಶಾಂತರಾಜರ ವಿರುದ್ಧ ತಪ್ಪು ಅಭಿಪ್ರಾಯ

ವನ್ನು ವಿದ್ಯಾನಂದರಲ್ಲಿ ಉಂಟು ಮಾಡಿರಬಹುದು ವಿದ್ಯಾನಂದರು ಪೂರ್ಣವಿವರ ತಿಳಿಯದೆ ಹೇಳಿಕೆ ಕೊಟ್ಟಿರಲೂ ಸಾಧ್ಯ ಎಂದು ಆಲೋಚಿಸಿದೆ ವಿದ್ಯಾನಂದರನ್ನು ಕಂಡು ಕಾಲೇಜಿನ ವಿಚಾರವಾಗಿ ಅವರು ಕೊಟ್ಟಿರುವ ತಪ್ಪು ಹೇಳಿಕೆಯನ್ನು ಚರ್ಚಿಸಿ ನಿಜಸಂಗತಿಯನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕೆಂದು ನಿರ್ಧರಿಸಿದೆ

## ವಿದ್ಯಾನಂದರೊಂದಿಗೆ ಭೇಟಿ :

ವಿದ್ಯಾನಂದರನ್ನು ನಾನು ಅವರ ವಿಹಾರ ಕಾಲದಲ್ಲಿ ತಾ॥ 29–6–80 ರಲ್ಲಿ ಹೊಸದುರ್ಗದಲ್ಲಿ ಪ್ರಪ್ರಥಮ ಬಾರಿಗೆ ನೋಡಿದ್ದೆ ಮೊದಲ ಸಲ ಅಂದು ಅವರ ಪ್ರವಚನವನ್ನು ಕೇಳಿದಾಗ ಅಭಿಮಾನವನ್ನು ತುಂಬಿಕೊಂಡಿದ್ದೆ

ಎರಡನೆಯ ಬಾರಿ ಅವರನ್ನು ಕಾಣುವ ಮತ್ತು ಭೇಟಿಮಾಡುವ ಉದ್ದೇಶದಿಂದ ನಾನು ತಾ॥ 2–11–80 ರಂದು ಶ್ರವಣಬೆಳಗೊಳಕ್ಕೆ ಕಾಲಿರಿಸಿದೆ ಈ ಸಮಯದಲ್ಲಿ ಅವರ ಬಗ್ಗೆ ನನ್ನಲ್ಲಿದ್ದ ಅಭಿಮಾನದ ಸ್ಥಾನವನ್ನು ಸಂಶಯ ಆಕ್ರಮಿಸಿಕೊಂಡಿತ್ತು

ತಾ॥ 3–11–80 ರ ಸೋಮವಾರ ಸು ಹನ್ನೊಂದು ಘಂಟೆಗೆ ಅವರನ್ನು ಕಾಣಬೇಕೆಂದು ಹೊರಟೆ ನಾನು ಅವರನ್ನು ಭೇಟಿಮಾಡಿದ ಪ್ರಸಂಗ ಮುಂದಿದೆ

ನಾನೊಬ್ಬನೇ ನೇರವಾಗಿ ಹೋಗಿ ಭೇಟಿ ಮಾಡಿದರೆ, ಪೂರ್ವಭಾವಿ ಪರಿಚಯ ವಿಲ್ಲದ ನನ್ನೊಂದಿಗೆ ಅವರು ಮುಕ್ತವಾಗಿ ಮಾತನಾಡದೆ ಇರಬಹುದು ಎಂದು ಭಾವಿಸಿ, ಅವರ ನಿಕಟವರ್ತಿಯಾಗಿರುವ ನನ್ನ ಶಿಷ್ಯರೊಬ್ಬರನ್ನು ಪರಿಚಯ ಮಾಡಿಸಲು ಕರೆದು ಕೊಂಡು ಹೋದೆ ತ್ಯಾಗಿನಿವಾಸದ ಗೇಟಿನಲ್ಲಿ ನಿಂತಿದ್ದ ದ್ವಾರಪಾಲಕನನ್ನು ದಾಟಿದ ಮೇಲೆ, ನನ್ನ ಶಿಷ್ಯರು ಮುನಿಗಳ ಸಮಯವನ್ನು ತಿಳಿದು, ಅನುಮತಿಯನ್ನು ಪಡೆದು ಬರಲು ತ್ಯಾಗಿನಿವಾಸದ ಮಹಡಿಗೆ ಹೋದರು ಮುನಿಗಳಿಂದ ಅನುಮತಿ ಪಡೆದು ಬಂದ ಅವರು ನನ್ನನ್ನು ಮಹಡಿಗೆ ಕರೆದುಕೊಂಡು ಹೋದರು ನನ್ನ ಶಿಷ್ಯರು ನನ್ನನ್ನು ವಿದ್ಯಾನಂದ ಮುನಿಗಳಿಗೆ ಪರಿಚಯಿಸಿದರು ನಾನು ವಂದಿಸಿ ಕುಳಿತುಕೊಂಡೆ

ವಿದ್ಯಾನಂದರು ದಿನದ ಅಂಚೆಪತ್ರಗಳನ್ನು ನೋಡುತ್ತಿದ್ದರು ಅಲ್ಲಿಯೇ ಇಬ್ಬರು ಪುರುಷರೂ, ಇಬ್ಬರು ಸ್ತ್ರೀಯರೂ ಕುಳಿತಿದ್ದರು ಮುನಿಗಳಿಂದ ಅಂಚೆಪತ್ರಗಳ ಪರಿಶೀಲನೆ ನಡೆಯುತ್ತಿರುವಾಗ, ಅಲ್ಲಿ ಕುಳಿತಿದ್ದ ಸ್ತ್ರೀಯರಿಬ್ಬರು ಮುನಿಗಳಿಗೆ ವಂದಿಸಿ ಹೊರಡಲನುವಾದರು ಮುನಿಗಳು ತಕ್ಷಣ ಅವರ ಕಡೆ ದೃಷ್ಟಿ ಹರಿಸಿ ಏಕೆ ಹೊರಟಿರಿ ಕುಳಿತುಕೊಳ್ಳಿ ಎಂದು ಹಿಂದಿಯಲ್ಲಿ ಸೂಚಿಸಿದರು ಇನ್ನು ಹತ್ತು ನಿಮಿಷ ಬಿಟ್ಟು ಬರುತ್ತೇವೆ ಎಂದು ಅವರು ಹೇಳುತ್ತಾ ಮುನಿಗಳ ಅನುಮತಿಗೂ ಕಾಯದೆ ಹೊರಟುಹೋದರು ! ಮುನಿಗಳಿಂದ ಪತ್ರ ವೀಕ್ಷಣೆ ಮುಂದುವರೆಯಿತು ಎರಡು

ಮೂರು ನಿಮಿಷದಲ್ಲೇ ಈ ಕಾರ್ಯ ಮುಗಿಯಿತು ವಿದ್ಯಾನಂದರು ನನ್ನ ಕಡೆ ದೃಷ್ಟಿ ಹಾಯಿಸಿ 'ಮುಂದೆ ಭೆಟ್ಟಿಯಾಗೋಣ' ಎಂದು ನನಗೆ ನಿರ್ಗಮಿಸುವ ಸೂಚನೆ ನೀಡಿದರು

ವಿದ್ಯಾನಂದರ ಸೂಚನೆಯಿಂದಾಗಿ ನನಗೆ ನಿರಾಶೆಯುಂಟಾಯಿತು ! ವಂದಿಸಿ ಹೊರಟ ಸ್ತ್ರೀಯರಿಬ್ಬರನ್ನು ಅವರು ಉಳಿಸಿಕೊಳ್ಳಲು ಪ್ರಯತ್ನಿಸಿದರು ಅದೇ ಸಮಯದಲ್ಲಿ ಅಲ್ಲಿಯೇ ಕುಳಿತಿದ್ದ ನನ್ನನ್ನು ಬಂದಕಾರಣವೇನು ಎಂದೂ ಸಹ ಕೇಳದೆ ನಿರ್ಗಮಿಸುವ ಸೂಚನೆ ಕೊಟ್ಟರಲ್ಲ ? ಎಂಬ ಭಾವನೆ ಆ ಸಂದರ್ಭದಲ್ಲಿ ನನ್ನ ಮನಸ್ಸಿನಲ್ಲಿ ನೆಲೆಯೂರಿತು ಮುಂದಿನ ಮಾತುಗಳನ್ನಾಡಲು ಮನಸ್ಸಾಗಲಿಲ್ಲ ವಿದ್ಯಾನಂದರು ಪತ್ರಗಳನ್ನು ಹೇಗೂ ಆಸಕ್ತಿಯಿಂದ ಗಮನಿಸುತ್ತಾರೆ ಅವರಿಗೆ ಪತ್ರ ಬರೆಯುವುದರ ಮೂಲಕವೇ ಅವರಿಗೆ ನಾನು ಹೇಳಬೇಕೆಂದಿರುವ ಮಾತುಗಳನ್ನೂ ಮತ್ತು ಕೇಳಬೇಕೆಂದಿರುವ ಪ್ರಶ್ನೆಗಳನ್ನೂ ಅವರ ಗಮನಕ್ಕೆ ತರೋಣವೆಂದುಕೊಂಡು ನಾನು ಹಿಂತಿರುಗಿದೆ ಶ್ರವಣಬೆಳಗೊಳವನ್ನು ಅಂದು ಸಂಜೆ ಬಿಟ್ಟು ಹೊರಡುವಾಗ ಒಂದು ಚಿಂತೆ ನನ್ನ ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತು

**ಚಿತ್ತಕಲಕಿದ ಭಿತ್ತಿಬರಹ :**

ನಾನು ಶ್ರವಣಬೆಳಗೊಳಕ್ಕ ಬಂದು ಎರಡು ದಿವಸಗಳ ಕಾಲ ಅಲ್ಲಿದ್ದ ಸಂದರ್ಭದಲ್ಲಿ ಸಾರ್ವಜನಿಕ ಗೋಡೆಗಳ ಮೇಲಿದ್ದ ಬರಹಗಳು ನನ್ನ ಗಮನ ಸೆಳೆದುವು ಚಂದ್ರಯ್ಯನವರನ್ನು ನಿಂದಿಸುವ ಅಸಭ್ಯ ಬರಹಗಳು ಅಲ್ಲಿ ಮೂರು ತಿಂಗಳುಗಳಿಂದಲೂ ಹಾಗೆಯೇ ಇದ್ದವು ಈ ಎಲ್ಲಾ ಬರವಣಿಗೆಗಳಿಗೆ ವಿದ್ಯಾನಂದರ ಪ್ರವಚನವೇ ಮೂಲಕಾರಣವೆಂಬುದರಲ್ಲಿ ಸಂಶಯವೇ ಇರಲಿಲ್ಲ ಪರಿಸ್ಥಿತಿ ಹೀಗಿದ್ದರೂ ನಿತ್ಯವೂ ಆ ಬರಹಗಳಿರುವ ರಸ್ತೆಯಲ್ಲಿ ವಿದ್ಯಾನಂದರು ಹೇಗೆ ಓಡಾಡಿಕೊಂಡಿದ್ದಾರೆ ? ಚಾರುಕೀರ್ತಿ ಸ್ವಾಮೀಜಿಯವರೂ ಆ ರಸ್ತೆಯಲ್ಲಿಯೇ ಸಂಚರಿಸುತ್ತಾರೆ ಅವರೂ ಸಹ ಇದನ್ನು ಹೇಗೆ ಸಹಿಸಿಕೊಂಡಿದ್ದಾರೆ ?

ಮುನಿಧರ್ಮಕ್ಕೆ ಅನುಗುಣವಾಗಿ ಮುನಿಗಳಾದವರು ಇತರರನ್ನು ಪರೋಕ್ಷವಾಗಿಯೂ ನಿಂದಿಸಬಾರದು ಆದರೆ ವಿದ್ಯಾನಂದರು ಬೆಳ್ಳೂರಿನಲ್ಲಿ ಪ್ರತ್ಯಕ್ಷವಾಗಿಯೇ ಅನ್ಯರನ್ನು ನಿಂದಿಸಿದರು ಈ ನಿಂದೆಯ ಮಾತುಗಳನ್ನು ಅನುಸರಿಸಿ ಅಸಭ್ಯ ಗೋಡೆ ಬರಹಗಳು ಕಾಣಿಸಿಕೊಂಡುವು ಸಮಾಜದ ಜನರನ್ನು ನಿಂದಿಸಿ ಭಿತ್ತಿಶಾಸನಗಳನ್ನು ಬರೆಸುವುದಕ್ಕಾಗಿಯೇ ಚಾರುಕೀರ್ತಿ ಸ್ವಾಮಿಗಳು ವಿದ್ಯಾನಂದರನ್ನು ದೆಹಲಿಯಿಂದ ಕರೆಸಿದರೆ ? ಎಂಬ ಚಿಂತೆ ನನ್ನಲ್ಲಿ ಮೂಡಿತು ಈ ಎಲ್ಲಾ ಕಹಿ ಅನುಭವ ಚಿಂತೆಗಳನ್ನು ಹೊತ್ತು ನಾನು ಶ್ರವಣಬೆಳಗೊಳವನ್ನು ಅಂದು ಬಿಟ್ಟು ಹೊರಟೆ

**ಬಹಿರಂಗ ಪತ್ರಗಳು :**

ಶ್ರವಣಬೆಳಗೊಳದಲ್ಲಿ ನನಗುಂಟಾದ ಅನುಭವಗಳು ನಾನು ವಿದ್ಯಾನಂದರಿಗೆ ಪತ್ರಬರೆಯುವ ಹಾಗೆ ಮಾಡಿದುವು ಅಂತರಂಗದ ಪ್ರೇರಕೆಯಂತೆ ನಾನು ಮೊದಲ ನೆಯ ಪತ್ರವನ್ನು ಬರೆದೆ ನನ್ನ ಮೊದಲ ಪತ್ರಕ್ಕೆ ಚಾರುಕೀರ್ತಿಗಳು ವಿನಾಕಾರಣ ಆ ಕ್ರೋಶ ತಾಳಿದ್ದರಿಂದ, ನನ್ನ ವ್ಯಂಗ್ಯಪೂರಿತ ಎರಡನೆ ಪತ್ರ, ನಂತರ ಮೂರನೆಯ ಮತ್ತು ನಾಲ್ಕನೆಯ ಪತ್ರಗಳು ಪ್ರಕಟವಾದುವು

ನನ್ನ ನಾಲ್ಕನೆಯ ಪತ್ರ ಪ್ರಕಟವಾದ ನಂತರ ಮತ್ತಾವ ಪತ್ರವನ್ನೇ ಆಗಲಿ ನಾನು ವಿದ್ಯಾನಂದರಿಗೆ ಬರೆದೇ ಇಲ್ಲ ಸಂಗತಿ ಹೀಗಿರುವಾಗ ವಿದ್ಯಾನಂದರ ಹಿತವನ್ನು ವಕ್ರಮಾರ್ಗಗಳಿಂದ ರಕ್ಷಿಸಲು ಪ್ರಯತ್ನಿಸುವ ಯಾರೋ ದುಷ್ಕರ್ಮಿಗಳು ನನ್ನ ಹೆಸರು ಮತ್ತು ವಿಳಾಸಗಳನ್ನುಪಯೋಗಿಸಿ ' ಐದನೆಯ ಬಹಿರಂಗ ಪತ್ರ ' ಎಂಬ ಒಂದು ಪ್ರಚೋದನಾಕಾರಿ ಕೋಟಾ ಪತ್ರವನ್ನು ಮುದ್ರಿಸಿ ಹಂಚಿದರು ಈ ವಿಚಾರ ನನ್ನ ಗಮನಕ್ಕೆ ಬಂದ ಕೂಡಲೇ ನಾನು ತಾ॥ 12–2–81 ರಂದು ಒಂದು ಹಸ್ತಪತ್ರಿಕೆ ಯನ್ನು ಹೊರಡಿಸಿ ಈ ವಂಚನೆಯ ಪ್ರಕರಣವನ್ನು ಬೆಳಕಿಗೆ ತಂದೆ ನಾನು ಪ್ರಕಟಿಸಿದ ಹಸ್ತಪತ್ರಿಕೆ ಕೆಳಗಿನಂತಿದೆ

## ಕುತಂತ್ರದ ಪರಾಕಾಷ್ಠತೆ !

ಶ್ರೀ ವಿದ್ಯಾನಂದ ಮುನಿಗಳು ತಾ॥ 14–7–80 ರಂದು ಬೆಳ್ಳೂರಿನ ಬಹಿರಂಗ ಸಭೆಯೊಂದರಲ್ಲಿ, ನಾಲ್ಕು ವರ್ಷಗಳ ಹಿಂದೆ ಶ್ರವಣಬೆಳಗೊಳದಲ್ಲಿ ಮುಚ್ಚಲಾದ ಶ್ರೀ ಗೋಮಟೇಶ್ವರ ಕಾಲೇಜಿನ ಆಡಳಿತ ಮಂಡಲಿಯ ಗಣ್ಯರ ಮೇಲೆ ಆಕ್ಷೇಪಾರ್ಹವಾಗಿ ಮಾತನಾಡಿ ಸುಳ್ಳು ಆಪಾದನೆಗಳನ್ನು ಹೊರಿಸಿದರು ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದ ನಾನು ತಾ॥ 11–11–80 ರಲ್ಲಿ ಶ್ರೀ ವಿದ್ಯಾನಂದ ಮುನಿಗಳಿಂದ ಸ್ಪಷ್ಟೀಕರಣವನ್ನು ಕೇಳಿ ಪತ್ರ ಬರೆದೆ ಮುನಿಗಳಿಂದ ಸ್ಪಷ್ಟೀಕರಣ ಬರದೇ ಹೋದಾಗ ನಾನು ಪತ್ರವನ್ನು ಬಹಿರಂಗ ಪಡಿಸಿದೆ ಕೂಡಲೇ ಶ್ರೀ ವಿದ್ಯಾನಂದ ಮುನಿಗಳ ಬೆಂಬಲಿಗರಾದ ಶ್ರೀ ಚಾರುಕೀರ್ತಿಸ್ವಾಮೀಜಿಯವರಿಂದ ನನಗೆ ಬೆದರಿಕೆಯ ಒಂದು ಟೆಲಿಗ್ರಾಂ ಬಂದಿತು ಇದನ್ನು ಹಿಂಬಾಲಿಸಿ ಶ್ರೀಮಠದ ಶ್ರೀ ವಿಶ್ವಸೇನ್ ಎಂಬುವರಿಂದಲೂ ಇನ್ನೊಂದು ಟೆಲಿಗ್ರಾಂ ಸಹ ನನ್ನ ಕೈಸೇರಿತು

ನಿಜಸಂಗತಿಯನ್ನು ಗ್ರಹಿಸಿ ಹೇಳಿಕೆಯನ್ನು ಸ್ಪಷ್ಟಪಡಿಸಿ ಎಂದು ಮುನಿಗಳನ್ನು ಪ್ರಾರ್ಥಿಸಿದ ನನಗೆ, ಅವರ ಸಮೀಪವರ್ತಿಗಳಿಂದ ಬೆದರಿಕೆಯ ಪದಗಳು ಹಾರಿಬಂದವು ಈ ಸೌಜನ್ಯಶೂನ್ಯ ಪದಗಳೇ ನನ್ನ ಎರಡನೆಯ ಮತ್ತು ಮೂರನೆಯ ಪತ್ರಗಳಿಗೆ ಕಾರಣ

ಗಳಾದವು. ಶ್ರೀ ವಿದ್ಯಾನಂದರು ಮೂರನೆಯ ಪತ್ರವನ್ನು ಸ್ವೀಕರಿಸಲು ನಿರಾಕರಿಸಿದ್ದರಿಂದ ಆ ನಿರಾಕರಣೆಯೇ ಮೂಲಕಾರಣವಾಗಿ ನಾಲ್ಕನೆಯ ಬಹಿರಂಗ ಪತ್ರದ ರಚನೆಯಾಯಿತು ಹೀಗೆ ರೂಪು ತಳೆದ ನನ್ನ ನಾಲ್ಕು ಪತ್ರಗಳು ಆಧಾರಯುಕ್ತವಾಗಿವೆ ಧರ್ಮಕ್ಕೆ ಅನುಗುಣವಾಗಿವೆ ಮತ್ತು ಅವುಗಳಿಗೆ ಕಾನೂನಿನ ಸಮರ್ಥನೆಯಿದೆ ನನ್ನ ಪತ್ರಗಳಲ್ಲಿ ಹೇಳಿರುವ ವಿಚಾರಗಳ ಆಧಾರಗಳ ಬಗೆಗೆ ಮತ್ತು ಅವುಗಳ ಕಾನೂನು ಬದ್ಧತೆಯ ಬಗೆಗೆ ಯಾರೇ ಆಗಲಿ ನನ್ನಿಂದ ಅಧಿಕೃತವಾಗಿ ಸ್ಪಷ್ಟೀಕರಣವನ್ನು ಪಡೆಯಬಹುದು ತಾ॥ 24–12–80 ರಂದು ಪ್ರಕಟವಾದ ನನ್ನ ನಾಲ್ಕನೆಯ ಬಹಿರಂಗ ಪತ್ರದ ನಂತರ ಇದುವರೆಗೂ ನಾನು ಪುನಃ ಶ್ರೀ ವಿದ್ಯಾನಂದ ಮುನಿಗಳನ್ನುದ್ದೇಶಿಸಿ ಯಾವ ಬಹಿರಂಗ ಪತ್ರವನ್ನೂ ಪ್ರಕಟಪಡಿಸಿಲ್ಲ

ವಾಸ್ತವ ಸಂಗತಿ ಹೀಗಿರುವಾಗ ಅನೀತಿಯುತವಾಗಿ ಜನ್ಮ ತಾಳಿ ಈ ಲೋಕದಲ್ಲಿ ಕಣ್ಣು ಬಿಟ್ಟಿರಬಹುದಾದ ಮಹಾಕುತಂತ್ರಿಗಳಾದ ಯಾರೋ ಒಬ್ಬರು ಅಥವಾ ಹಲವರು, ನನ್ನ ಹೆಸರು ಮತ್ತು ವಿಳಾಸವನ್ನುಪಯೋಗಿಸಿ ಶ್ರೀ ವಿದ್ಯಾನಂದ ಮುನಿಗಳಿಗೆ ಬರೆದ ಹಾಗೆ ' ಐದನೆಯ ಬಹಿರಂಗ ಪತ್ರ ' ಎಂಬ ಅಂಕಿತವುಳ್ಳ ತಾ॥ 5-2-81 ರಲ್ಲಿ ಅತಿಹೀನವಾದ ಶೈಲಿಯಲ್ಲಿ ಅನೈತಿಕವಾದ ಪತ್ರವೊಂದನ್ನು ಮುದ್ರಿಸಿ ಶ್ರವಣಬೆಳಗೊಳದಲ್ಲಿ ಹಂಚಿರುವ ಸಂಗತಿ ನನಗೆ ತಿಳಿದುಬಂದಿದೆ ಸಮಾಜದ್ರೋಹಿಗಳಾದ ಲಫಂಗ ಜನರಿಂದ ಸೃಷ್ಟಿಯಾದ ನಾಲ್ಕು ಪುಟಗಳ ಈ ಹಸ್ತಪತ್ರದಲ್ಲಿ, ಈಗ ಶ್ರವಣಬೆಳಗೊಳದಲ್ಲಿ ಮಹಾಮಸ್ತಕಾಭಿಷೇಕಕ್ಕಾಗಿ ಬಿಡಾರ ಮಾಡಿರುವ ಪರಮಪೂಜ್ಯರೂ ಪವಿತ್ರಾತ್ಮರೂ ಆದ ಆಚಾರ್ಯರು, ಮುನಿಗಳು, ಆರ್ಯಿಕೆಯರು ಮುಂತಾದ ತ್ಯಾಗಿವೃಂದವನ್ನು ಅನೈತಿಕ ಪದಗಳನ್ನುಪಯೋಗಿಸಿ ಅವಹೇಳನ ಮಾಡಲಾಗಿದೆ ಹಾಗೆಯೇ ಸಮಾಜದ ಕೆಲವರು ಗಣ್ಯವ್ಯಕ್ತಿಗಳನ್ನು ಮತ್ತು ಸರ್ಕಾರದ ಪ್ರತಿಷ್ಠಿತ ಉನ್ನತಾಧಿಕಾರಿಯೊಬ್ಬರನ್ನು ಹೆಸರಿಸಿ ಸಭ್ಯತೆಯ ಎಲ್ಲೆ ಮೀರಿ ಅವರನ್ನು ನಿಂದಿಸಲಾಗಿದೆ ಆಚಾರವಂತರಾದ ತ್ಯಾಗಿಸಮೂಹವನ್ನೂ ಕ್ಷೇತ್ರಾಭಿಮಾನಿಗಳಾದ ಗಣ್ಯರನ್ನೂ, ಉನ್ನತಾಧಿಕಾರಿಗಳನ್ನೂ ನನ್ನ ವಿರುದ್ಧ ಎತ್ತಿಕಟ್ಟಿ ತಮ್ಮ ಹುಳುಕನ್ನು ಮುಚ್ಚಿಕೊಳ್ಳುವ ಹೇಯವಾದ ದುರುದ್ದೇಶದಿಂದ ಆ ಪತ್ರ ಕೂಡಿದೆ

ಪಟ್ಟಭದ್ರಹಿತಾಸಕ್ತಿಗಳು ಚೆಲ್ಲುವ ಹಣದ ಅಂಕೆಗೊಳಪಟ್ಟ ಕುವ್ಯವಸ್ಥಿತವಾದ ಕೈಗಳು ನನ್ನ ವಿರುದ್ಧ ಅಶ್ಲೀಲವಾದ ಕರಪತ್ರಗಳನ್ನು ಹಂಚಿ ಹಂಚಿ ಸುಸ್ತಾಗಿ, ಕಡೆಗೆ ಹತಾಶರಾಗಿ ಹೀಗೆ ಸಭ್ಯಜನರ ಮನಕಲಕುವಂತೆ ಮಾಡಿ ಅವರನ್ನು ಪ್ರಚೋದಿಸುವ ಈ ವಕ್ರಮಾರ್ಗಕ್ಕಿಳಿದಿದ್ದಾರೆ ಲಫಂಗರು ಹೊರಡಿಸುವ ಇಂತಹ ದಾರಿತಪ್ಪಿಸುವ ಅಕ್ರಮಪತ್ರಗಳಿಂದ ಮೋಸಹೋಗಬಾರದೆಂದು ನಾನು ಸಾರ್ವಜನಿಕರನ್ನು ಪ್ರಾರ್ಥಿಸುತ್ತೇನೆ ಸುಳ್ಳು, ಕಪಟತನ, ವಂಚನೆ ಮುಂತಾದ ಈ ಅಸಭ್ಯ ಸಿದ್ಧಾಂತಗಳಲ್ಲಿ

ಚಕ್ರವರ್ತಿಯೆಂದು ಕರೆಸಿಕೊಂಡಿರುವ ಯಾರೋ ಒಬ್ಬ ಆಷಾಢಭೂತಿಯ ಕೈವಾಡ ಇಂತಹ ಕಪಟಪತ್ರಗಳ ರಚನೆಯಲ್ಲಿದೆಯೆಂದು ನನ್ನ ಭಾವನೆ !

ನನ್ನ ಹೆಸರು ವಿಳಾಸಗಳನ್ನುಪಯೋಗಿಸಿ ಹೀಗೆ ಅಸಹ್ಯಪತ್ರವನ್ನು ಪ್ರಚುರ ಪಡಿಸಿರುವ ಈ ತೆರೆಮರೆಯ ವ್ಯಕ್ತಿಯನ್ನೂ, ಅವನ ಅಂಕೆಯಲ್ಲಿರುವ ಕುಪ್ರಸಿದ್ಧ ವ್ಯಕ್ತಿಗಳನ್ನೂ ಬಯಲಿಗೆಳೆಯುವವರಿಗೆ ನಾನು ಕೃತಜ್ಞನಾಗಿರುತ್ತೇನೆ

ಬಿ ಎಸ್ ನಂದಕುಮಾರ್,
ಅಧ್ಯಾಪಕ,
ಸರ್ ಎಂ ವಿ ಕಾಲೇಜು, ಭದ್ರಾವತಿ

ತಾ॥ 12-2-81

ಈ ಹಸ್ತಪತ್ರಿಕೆಯನ್ನು ಹೊರಡಿಸಿದ ನಂತರ ತಾ॥ 18-2-81 ರಂದು ಹಾಸನಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್‌ರವರಿಗೆ ಒಂದು ದೂರನ್ನು ಸಹ ಸಲ್ಲಿಸಿದೆ

ಈ ಕೋಟಾ ಪತ್ರ ರಚನೆಯ ಪ್ರಕರಣ ನನ್ನನ್ನು ಜಾಗೃತಗೊಳಿಸಿತು. ವಿದ್ಯಾನಂದರು ಸುಳ್ಳಾಡಿದುದಕ್ಕೆ ಕಾರಣವಾದ ಪ್ರಸಂಗಗಳನ್ನು ವಿವರಿಸುವ ಈ ಗ್ರಂಥ ಆದಷ್ಟು ಬೇಗ ಓದುಗರ ಕೈಸೇರುವುದಕ್ಕೆ ಕಾರಣವಾಯಿತು

## ಅಧ್ಯಾಯ ೨

# ದೋಷಾರೋಪಣೆಯ ಮಾತುಗಳ ಹಿನ್ನೆಲೆ

ವಿದ್ಯಾನಂದರಿಂದ ತಾ॥ 14-7-80ರಂದು ಸಿಡಿದು ಬಂದ ದೋಷಾರೋಪಣೆಯ ಮಾತುಗಳು ಕೇವಲ ಆಕಸ್ಮಿಕವಲ್ಲ, ಅಥವಾ ತಪ್ಪು ಮಾಹಿತಿಯನ್ನು ಪಡೆದು ಆಡಿದ ಮಾತುಗಳಲ್ಲ ಎಂಬುದು ಹಿಂದಿನ ಅಧ್ಯಾಯದಿಂದ ಸ್ಪಷ್ಟವಾಗುತ್ತದೆ ಬೆಳ್ಳೂರಿನಲ್ಲಿ ವಿದ್ಯಾನಂದರು ಹಾಗೆ ಮಾತನಾಡುವುದಕ್ಕೆ ಮುಂಚೆ ಏನೇನೋ ಘಟನೆಗಳು ಬಹಳ ಹಿಂದಿನಿಂದಲೂ ನಡೆದಿವೆ ಎಂಬುದರ ಸುಳಿವು ಇದರಿಂದ ಸಿಗುತ್ತದೆ ಹಿಂದೆಲ್ಲಾ ಚಂದ್ರಯ್ಯನವರು, ಶಾಂತರಾಜರು ಮತ್ತು ಚಾರುಕೀರ್ತಿಸ್ವಾಮಿಗಳು – ಈ ಮೂವರಲ್ಲಿ ಮುಖ್ಯವಾಗಿ ನಡೆದಿರುವ ವ್ಯವಹಾರಗಳನ್ನೆಲ್ಲಾ ನಾನು ಗಮನಿಸಿದಾಗ, ದಾಖಲೆಗಳನ್ನು ಪರಿಶೀಲಿಸಿದಾಗ ಈ ಮೂವರ ವ್ಯವಹಾರ ವಿಚಾರಗಳಲ್ಲಿ ವಿದ್ಯಾನಂದ ಮುನಿಗಳು ಹಸ್ತಕ್ಷೇಪ ನಡೆಸಿರುವ ಸಂಗತಿಯೂ ನನ್ನ ಗಮನಕ್ಕೆ ಬಂತು

ವಿದ್ಯಾನಂದರ ಬೆಳ್ಳೂರು ಪ್ರವಚನಕ್ಕೆ, ಮೇಲಿನ ವ್ಯವಹಾರಗಳಲ್ಲಿ ನಾನ ಕಾರಣಗಳನ್ನು ಹುಡುಕಿದಾಗ, ವಿದ್ಯಾನಂದರ ಪ್ರವಚನ ಅವರು ನಿಯೋಜಿಸಿದ ಒಂದು ವ್ಯವಸ್ಥಿತ ಪಿತೂರಿಯ ಅಂಗವೆಂಬುದು ನನಗೆ ಮನವರಿಕೆಯಾಯಿತು ! ಅವರ ಪಿತೂರಿಯ ಮುಖ್ಯಗುರಿ ಚಂದ್ರಯ್ಯನವರೆಂಬುದೂ ಪತ್ತೆಯಾಯಿತು ! ವಿದ್ಯಾನಂದರು ಹೂಡಿದ ಪಿತೂರಿಗೆ ಶಾಂತರಾಜರು ಬೆಂಬಲ ನೀಡದೇ ಹೋದಾಗ ತಕ್ಷಣವೇ ವಿದ್ಯಾನಂದರು ಶಾಂತರಾಜರನ್ನು ತಮ್ಮ ಪಿತೂರಿಯ ಎರಡನೆಯ ಗುರಿಯನ್ನಾಗಿ ಮಾಡಿಕೊಂಡರು ಎಂಬುದೂ ಸಹ ಅರಿವಾಯಿತು !

ನನ್ನ ಮುಂದಿನ ಬರವಣಿಗೆ ಮೇಲಿನ ಮಾತುಗಳನ್ನೆಲ್ಲಾ ದಾಖಲೆಗಳ ಸಮೇತವಾಗಿ ವಿವರಿಸುತ್ತದೆ

### ನೇಪಥ್ಯದಲ್ಲಿ ನಡೆದದ್ದೇನು ?

ವಿದ್ಯಾನಂದ ಮುನಿಗಳು ತಾ॥ 13–7–80 ರಂದು ಬೆಳ್ಳೂರಿಗೆ ಪದಾರ್ಪಣ ಮಾಡಿದರು ಶ್ರೀ ಬಿ ಜೆ ನಾಭಿರಾಜಯ್ಯನವರ ಮನೆಯಲ್ಲಿ ಅವರ ವಸತಿಯ ಏರ್ಪಾಟಾಯಿತು, ಆ ದಿನ ವಿದ್ಯಾನಂದರ ಆಹಾರವಾದ ಮೇಲೆ, ಬೆಳ್ಳೂರಿನ ಗಣ್ಯರಾದ ಶ್ರೀ ಬಿ ಜೆ ಜೀವಂಧರಯ್ಯನವರೂ, ಮೈಸೂರಿನಿಂದ ಆಗಮಿಸಿದ್ದ ಶಾಂತರಾಜರೂ ಅವರನ್ನು ಕಾಣಲು ಹೋಗಿದ್ದರು ಈ ಸಂದರ್ಭದಲ್ಲಿ ಒಂದು ಪ್ರಸಂಗ ನಡೆಯಿತು

ಶ್ರವಣಬೆಳಗೊಳದಿಂದ ಆಗಮಿಸಿದ್ದ ಚಾರುಕೀರ್ತಿ ಸ್ವಾಮಿಗಳು ಅಲ್ಲಿ ಹಾಜರಿಲ್ಲದ ಚಂದ್ರಯ್ಯನವರ ಮೇಲೆ ಒಂದು ಸುಳ್ಳು ಆಪಾದನೆಯನ್ನು ಮಾಡಿದರು ಚಂದ್ರಯ್ಯನವರು ವಿದ್ಯಾನಂದ ನಿಲಯಕ್ಕೆ ಪ್ರವೇಶಮಾಡಿ ಅಲ್ಲಿನ ವ್ಯವಸ್ಥಾಪಕರ ವಶದಲ್ಲಿದ್ದ, ವಂತಿಗೆಯ ವಿವರಗಳಿರುವ ಒಂದು ಪುಸ್ತಕದಿಂದ ಒಂದೆರಡು ಹಾಳೆಗಳನ್ನು ಬಲಾತ್ಕಾರವಾಗಿ ಹರಿದುಕೊಂಡು ಹೋಗಿದ್ದಾರೆ ಎಂಬುದು ಅವರ ಆಪಾದನೆಯಾಗಿತ್ತು ಈ ಮಾತುಗಳನ್ನು ಕೇಳಿದ ವಿದ್ಯಾನಂದರು ಕೋಪಗೊಂಡವರ ಹಾಗೆ ಶಾಂತರಾಜರ ಕಡೆ ನೋಡುತ್ತಾ ಈ ಸುದ್ದಿ ಮೊದಲೇ ತಮಗೆ ತಿಳಿದಿದ್ದರೆ, ಚಂದ್ರಯ್ಯನವರ ಮೇಲೆ ಕ್ರಿಮಿನಲ್ ಕೇಸ್ ಹಾಕಿಸುತ್ತಿದ್ದುದಾಗಿಯೂ ಕೈಕೋಳ ಹಾಕಿಸುತ್ತಿದ್ದುದಾಗಿಯೂ, ಇಂದಿರಾಗಾಂಧಿಯವರಿಗೆ ಹೇಳಿ ಅರೆಸ್ಟ್ ಮಾಡಿಸುತ್ತಿದ್ದುದಾಗಿಯೂ ಗುಡುಗಿದರು !

ಈ ಸಂದರ್ಭದಲ್ಲಿ ಶಾಂತರಾಜರೂ ಸಹ ತಮ್ಮಂತೆ ಪೂರ್ವಾಪರ ವಿಚಾರಮಾಡದೆ ಚಂದ್ರಯ್ಯನವರು ತಪ್ಪಿತಸ್ಥರು ಎಂದು ಒಪ್ಪಿಕೊಂಡುಬಿಡಬೇಕೆಂಬುದು ವಿದ್ಯಾನಂದರ ಆಕಾಂಕ್ಷೆಯಾಗಿತ್ತು ! ಆದರೆ ಶಾಂತರಾಜರು ತಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿಯೂ, ಧರ್ಮಕ್ಕೆ ಅನುಸಾರವಾಗಿಯೂ ನಡೆದುಕೊಂಡರು

ವಿದ್ಯಾನಂದರ ಕ್ರೋಧಕ್ಕೆ ಪ್ರತಿಯಾಗಿ ಶಾಂತರಾಜರು " ಸ್ವಾಮಿಜಿಯವರೆ ತಾವು ಚಂದ್ರಯ್ಯನವರ ವಿಚಾರವಾಗಿ ತಪ್ಪು ತಿಳಿದುಕೊಂಡಿದ್ದೀರಿ ಚಂದ್ರಯ್ಯನವರು ಯಾವ ಸಂದರ್ಭದಲ್ಲೂ ಹಾಗೆ ನಡೆದುಕೊಳ್ಳುವ ಮನುಷ್ಯರಲ್ಲ ಅವರು ಒಮ್ಮೆ ವಿದ್ಯಾನಂದ ನಿಲಯಕ್ಕೆ ಹೋಗಿ ಬೇರೆಯವರ ಪರವಾಗಿ ಕಾಣಿಕೆ ನೀಡಿ ವ್ಯವಸ್ಥಾಪಕರಿಂದ ಒಂದು ರಶೀದಿ ಪಡೆದು, ನಂತರ ವ್ಯವಸ್ಥಾಪಕರ ಅನುಮತಿಯಿಂದ ಅವರ ವಶದಲ್ಲಿದ್ದ ವಂತಿಗೆಯ ಪುಸ್ತಕದಿಂದ ಕೆಲವು ವಿವರಗಳನ್ನು ಗುರುತುಹಾಕಿಕೊಂಡು ಬಂದಿದ್ದಾರೆ ಈ ವಿಷಯದಲ್ಲಿ ಅವರಿಂದ ಯಾವ ವಂಚನೆಯೂ ಆಗಿಲ್ಲ ಅಲ್ಲಿ ನಡೆದ ಪ್ರಸಂಗ ಇಷ್ಟೆ " ಎಂದು ನಡೆದ ಸಂಗತಿಯನ್ನು ವಿದ್ಯಾನಂದರಿಗೆ ವಿವರಿಸಿದರು

ಈ ಪ್ರಸಂಗ ಆಗ ಅಷ್ಟಕ್ಕೇ ನಿಂತಿತು ಬಿ ಜೆ ಜೀವಂಧರಯ್ಯನವರೂ, ಶಾಂತರಾಜರೂ ವಿದ್ಯಾನಂದರಿಗೆ ವಂದಿಸಿ ಹೊರಬಂದರು

ಬೆಳಿಗ್ಗೆ ಈ ಪ್ರಸಂಗವಾದ ನಂತರ ಅದೇ ದಿನ ಸಂಜೆ ಮೂರು ಘಂಟೆಗೆ ವಿದ್ಯಾನಂದರಿಂದ ಬಹಿರಂಗ ಪ್ರವಚನ ಸಭೆ ನಡೆಯಿತು ಸಭೆ ಮುಗಿಯುತ್ತಿದ್ದಂತೆಯೇ ಶಾಂತರಾಜರು ತಮ್ಮ ಸ್ವಸ್ಥಳ ಮೈಸೂರಿಗೆ ಪ್ರಯಾಣಬೆಳೆಸಿದರು ಪ್ರಯಾಣಕ್ಕೆ ಮುಂಚೆ ಇನ್ನೊಮ್ಮೆ ವಿದ್ಯಾನಂದರ ದರ್ಶನ ತೆಗೆದುಕೊಳ್ಳಲಿಲ್ಲ ಆ ದಿವಸ ಬೆಳಿಗ್ಗಿನಲ್ಲಿ ವಿಪರೀತ ಜನಸಂದಣಿಯಿದ್ದುದೂ, ಬೆಳಿಗ್ಗೆ ನಡೆದ ಘಟನೆಯೂ ಕಾರಣವಾಗಿ ಶಾಂತರಾಜರು ನೇರವಾಗಿ ಮೈಸೂರಿಗೆ ತೆರಳಿದರು

**ಆಹಾರ ನಿರಾಕರಣೆಯ ಬೆದರಿಕೆ :**

ಶಾಂತರಾಜರು ಆ ದಿನ ಸಂಜೆ ಮೈಸೂರಿಗೆ ಹೊರಟ ಸ್ವಲ್ಪ ಹೊತ್ತಿನಲ್ಲಿಯೇ ಈ ಸುದ್ದಿ ವಿದ್ಯಾನಂದರಿಗೆ ತಿಳಿಯಿತು ಇದರಿಂದ ಅವರ ಕೋಪ ಇಮ್ಮಡಿಯಾಯಿತು ಶಾಂತರಾಜರು ತಮ್ಮನ್ನು ಕಾಣದೆ ಹೋದುದು, ತಮ್ಮನ್ನು ಕಡೆಗಣಿಸಿದಂತೆ ಎಂದು ಭಾವಿಸಿದರು ವಿದ್ಯಾನಂದರ ಸಹನೆ ಮೀರಿತು ! ಶಾಂತರಾಜರನ್ನು ಮತ್ತೆ ಕರೆಸಲು ಉದ್ಯುಕ್ತರಾದರು ಕೋಪದ ಕೈಗೆ ಬುದ್ಧಿಯನ್ನೊಪ್ಪಿಸಿದವರು ಸರಿಯಾದ ಹಾದಿಯಲ್ಲಿ ಹೋಗುವುದು ಸಾಧ್ಯವೆ ? ವಿದ್ಯಾನಂದರು ಶಾಂತರಾಜರನ್ನು ಪುನಃ ಕರೆಸಲು ಈ ಸಂದರ್ಭದಲ್ಲಿ ಒಂದು ತೀರಾ ಅನುಚಿತವಾದ ಮಾರ್ಗವನ್ನು ಹಿಡಿದರು

ಶಾಂತರಾಜರನ್ನು ಮೈಸೂರಿನಿಂದ ಕರೆಸಬೇಕೆಂದೂ ಇಲ್ಲದೆ ಹೋದರೆ ನಾಳೆ ತಾವು ಆಹಾರವನ್ನು ಸ್ವೀಕರಿಸುವುದಿಲ್ಲವೆಂದೂ ಬೆದರಿಕೆ ಹಾಕಿದರು !

ವಿದ್ಯಾನಂದ ಮುನಿಗಳಿಂದ ಬಂದ ಈ ಬೆದರಿಕೆ ಅಂದು ಅಗತ್ಯವಿತ್ತೆ ಎಂಬುದು ಇಲ್ಲಿ ವಿಚಾರಣೀಯ ಶಾಂತರಾಜರಿಗೆ ನೇರವಾಗಿಯೇ ಕರೆಕಳುಹಿಸಿದ್ದರೆ ಅವರು ಆ ಮಾತನ್ನು ಮೀರಿ ನಡೆಯುವಂತಹ ಮನುಷ್ಯರೇನಲ್ಲ ವಿದ್ಯಾನಂದರಿಗೆ ಶಾಂತರಾಜರ ಪರಿಚಯ 1970 ನೇ ಇಸವಿಯಿಂದಲೂ ನಿಕಟವಾಗಿ ಉಂಟು ಚಾರುಕೀರ್ತಿಸ್ವಾಮಿಜಿಯವರನ್ನು ಸುಮಾರು ಹತ್ತು ವರ್ಷಗಳ ಹಿಂದೆ ಇಂದೂರಿಗೆ ಕರೆದುಕೊಂಡುಹೋಗಿ ಪ್ರಪ್ರಥಮವಾಗಿ ಅವರನ್ನು ವಿದ್ಯಾನಂದರಿಗೆ ಪರಿಚಯ ಮಾಡಿಸಿದವರು ಶಾಂತರಾಜರೇ ಆದುದರಿಂದ ಶಾಂತರಾಜರ ಬಗೆಗೆ ವಿದ್ಯಾನಂದ ಮುನಿಗಳು ವಿಶೇಷ ವಾತ್ಸಲ್ಯವನ್ನು ತಾಳಿದ್ದರು ಅನೇಕ ಸಂದರ್ಭಗಳಲ್ಲಿ ವಿದ್ಯಾನಂದರು "ಚಾರುಕೀರ್ತಿಸ್ವಾಮಿಗಳಿಗೆ ನೀವಿಬ್ಬರೂ ತಂದೆ ತಾಯಿಗಳೋಪಾದಿಯಲ್ಲಿ ಓತ ಬಯಸಿದ್ದೀರಿ ಅವರನ್ನು ಚೆನ್ನಾಗಿ ನೋಡಿಕೊಳ್ಳಿ " ಎಂದು ಶಾಂತರಾಜ್ ದಂಪತಿಗಳನ್ನು ಮೆಚ್ಚಿ ಪ್ರೋತ್ಸಾಹಿಸಿದ್ದೂ ಉಂಟು

ಶಾಂತರಾಜರು ಸರಳಸ್ವಭಾವದ ವ್ಯಕ್ತಿಗಳೂ ಆದುದರಿಂದ ಇಂಥವರನ್ನು ಬೆಳ್ಳೂರಿಗೆ ಮತ್ತೆ ಬರುವಂತೆ ನೇರವಾಗಿ ಹೇಳಿಕಳುಹಿಸಿದ್ದರೆ, ಅವರು ತಪ್ಪದೆ ಖಂಡಿತವಾಗಿಯೂ ಬರುವ ವ್ಯಕ್ತಿಯಾಗಿದ್ದರು ಈ ಸ್ವಭಾವವುಳ್ಳವರನ್ನು, ಅವರು ಬರದೇ ಹೋದರೆ ನಾನು ಆಹಾರ ತೆಗೆದುಕೊಳ್ಳುವುದೇ ಇಲ್ಲ ! ಎಂದು ಬೆದರಿಸುವುದು ಅನಗತ್ಯವಾಗಿತ್ತು. ಜನರನ್ನು ಬೆದರಿಸಿ ಜಗಳವಾಡಿ ಆಹಾರ ತೆಗೆದುಕೊಳ್ಳುವುದು ಮುನಿಧರ್ಮಕ್ಕೆ ವಿರುದ್ಧವಾದ ನಡವಳಿಕೆಯೆಂಬುದನ್ನಾದರೂ ವಿದ್ಯಾನಂದರು ಆ ಸಮಯದಲ್ಲಿ ಆಲೋಚಿಸಬೇಕಿತ್ತು

ಭಗವಾನ್ ಕುಂದಕುಂದಾಚಾರ್ಯರು ತಮ್ಮ ರಯಣಸಾರ ಗ್ರಂಥದಲ್ಲಿ " ಕೋಪದಿಂದ, ಜಗಳದಿಂದ, ಯಾಚನೆಯಿಂದ, ಕ್ಲೇಶಾದಿ ದುಷ್ಪರಿಣಾಮಗಳಿಂದ, ರೌದ್ರದಿಂದ, ರೋಷದಿಂದ ಭಿಕ್ಷುವು ಆಹಾರವನ್ನು ಸೇವಿಸಿದರೆ ಪಿಶಾಚಿಗೆ ಸಮಾನನಾಗುತ್ತಾನೆ " (ಶ್ಲೋಕ–118) ಎಂದು ಹೇಳಿದ್ದಾರೆ ಅಭಿನವ ಕುಂದಕುಂದಾಚಾರ್ಯರೆಂದು ಪ್ರಶಂಸೆಯನ್ನು ಪಡೆದಿರುವ ವಿದ್ಯಾನಂದರು, ಮೇಲಿನ ಘಟನೆಯ ಸಂದರ್ಭದಲ್ಲಿ, ಕುಂದಕುಂದಾಚಾರ್ಯರು ವಿಧಿಸಿರುವ ಮುನಿಚಾರಿತ್ರ್ಯದ ನಿಯಮಗಳನ್ನು ಏಕೆ ಧಿಕ್ಕರಿಸಿದರು ? ಅದೂ ಅಲ್ಲದೆ ಲೋಕವ್ಯವಹಾರದಿಂದ ಸಂಪೂರ್ಣವಾಗಿ ದೂರಾಗಿರಬೇಕಾದ ಮುನಿಗಳಿಗೆ, ಹೇಗಾದರೂ ಆಗಲಿ, ಪರಮಾಡಿಯಾಗಲೀ ಚಂದ್ರಯ್ಯನವರನ್ನು ಅಪರಾಧಿ ಕಟ್ಟೆಯಲ್ಲಿ ನಿಲ್ಲಿಸುವ ರೌದ್ರಧ್ಯಾನ ಏತಕ್ಕಾದರೂ ಉಂಟಾಯಿತು ?

## ಶಾಂತರಾಜರ ಮರುಪ್ರಯಾಣ :

ಬಹಳ ಪ್ರಚಾರ ಪಡೆದು ದೊಡ್ಡವರೆನಿಸಿಕೊಂಡು ಊರಿಗೆ ಆಗಮಿಸಿದ್ದ ಅತಿಥಿಮುನಿಗಳು ಹೀಗೆ ಮೂಂಡು ಹಿಡಿದು ಕುಳಿತಾಗ, ಬಿ ಜೆ ಜೀವಂಧರಯ್ಯನವರು ಸುಮ್ಮನೆ ಇರಲಾಗಲಿಲ್ಲ ! ಅವರು ಶಾಂತರಾಜರನ್ನು ಕರೆಸಲು ತಕ್ಷಣ ಕಾರ್ಯೋನ್ಮುಖರಾದರು

ಶಾಂತರಾಜರು ಕಾರಿನಲ್ಲಿ ಮೈಸೂರು ತಲುಪುವ ಮುಂಚೆಯೇ ಅವರ ಮನೆಗೆ ಬೆಳ್ಳೂರಿನಿಂದ ದೂರವಾಣಿ ಕರೆ ತಲುಪಿತ್ತು ಶಾಂತರಾಜರು ಮನೆ ತಲುಪಿದನಂತರ ದೂರವಾಣಿ ಬಂದ ಸುದ್ದಿ ತಿಳಿಯಿತು ರಾತ್ರಿ ಸುಮಾರು 8-30 ರ ಸಮಯದಲ್ಲಿ ಜೀವಂಧರಯ್ಯನವರು ಕಳುಹಿಸಿದ್ದ ವ್ಯಕ್ತಿಯೊಬ್ಬರು ಶಾಂತರಾಜರ ಮನೆಗೆ ಪತ್ರಸಮೇತ ಬಂದು ವಿದ್ಯಾನಂದರು ಹಾಕಿದ್ದ ಆಹಾರ ನಿರಾಕರಣೆಯ ಬೆದರಿಕೆಯನ್ನು ನಿವೇದಿಸಿಕೊಂಡರು

ಶಾಂತರಾಜರು ವಿದ್ಯಾನಂದರಿಂದ ಈ ನಡವಳಿಕೆಯನ್ನೆಲ್ಲಾ ನಿರೀಕ್ಷಿಸಿರಲಿಲ್ಲ ! ಮುನಿಗಳ ಮನೋಧರ್ಮದಿಂದ ಅವರಿಗೆ ಆಶ್ಚರ್ಯವುಂಟಾಯಿತು ! ಎಲ್ಲಾ ಹೊಸ ತೆರನಾಗಿ ಕಂಡಿತು ರಾತ್ರಿಯಿಡೀ ಬೆಳ್ಳೂರಿನಿಂದ ಆಗಾಗ್ಗೆ ಬರುತ್ತಿದ್ದ ದೂರವಾಣಿ ಕರೆಯಿಂದಾಗಿ ಶಾಂತರಾಜರು ಮತ್ತಷ್ಟು ಚಕಿತರಾದರು

ಮರುದಿವಸ ಬೆಳಿಗ್ಗೆ ಅಂದರೆ 14–7–1980 ರಂದು ಶಾಂತರಾಜರು ಪುನಃ ಬೆಳ್ಳೂರಿಗೆ ಪ್ರಯಾಣಮಾಡಿದರು. ಮೈಸೂರಿನಿಂದ ಬೆಳ್ಳೂರು 50 ಮೈಲಿಗಳ ದೂರದಲ್ಲಿದೆ ಸೂಕ್ತ ಸಮಯಕ್ಕೆ ಅವರು ಬೆಳ್ಳೂರನ್ನು ತಲುಪಿದರು

ತಮ್ಮ ಬೆದರಿಕೆಯ ಮಾತುಗಳಿಗೆ ಮಣಿದು ಶಾಂತರಾಜರು ಬಂದ ಸುದ್ದಿಯನ್ನು ವಿದ್ಯಾನಂದರು ಖಚಿತಪಡಿಸಿಕೊಂಡು ಆಹಾರ ಸ್ವೀಕರಿಸಿದರು ಆಹಾರದಾನವಾಗು

ತ್ತಿದ್ದಂತೆಯೇ ಶಾಂತರಾಜರೂ, ಚಂದ್ರಯ್ಯನವರೂ ಮುನಿಗಳ ದರ್ಶನಕ್ಕೆ ಬಂದರು. ದಿನದ ವೃತ್ತಪತ್ರಿಕೆಯನ್ನು ನೋಡುತ್ತಿದ್ದ ವಿದ್ಯಾನಂದರು ಇವರಿಬ್ಬರೂ ವಂದಿಸಿ ಕುಳಿತರೂ, ಇವರಕಡೆ ಸ್ಪಷ್ಟವಾಗಿ ಗಮನ ಹರಿಸಲಿಲ್ಲ. ಅಸಮಾಧಾನಗೊಂಡವರಂತೆ ಇವರಿಬ್ಬರನ್ನೂ ಉಪೇಕ್ಷೆ ಮಾಡಿದರು. ಬಿಗುಮಾನದಿಂದ ಬೆಸೆದ ಅವರ ಮೌನ ಮಾತಾಗಿ ಮೂಡಿಬರಲಿಲ್ಲ !

ಶಾಂತರಾಜರನ್ನು ರಾತ್ರಿಯಿಡೀ ಒತ್ತಾಯ ಮಾಡಿ ಕರೆಸಿದ ವಿದ್ಯಾನಂದರು, ಆ ಸಂದರ್ಭದಲ್ಲಿ ಕರೆಸಿದ್ದೇಕೆ ಎಂಬುದನ್ನು ಪ್ರಸ್ತಾಪಿಸಲಿಲ್ಲ. ಹಿಂದಿನ ದಿನದ ಪ್ರಸಂಗದ ಕೋಪ ಉಪಶಾಂತಿ ಹೊಂದಿಲ್ಲವೆಂದು ಗ್ರಹಿಸಿದ ಜೀವಂಧರಯ್ಯನವರು ಆ ಸನ್ನಿವೇಶಕ್ಕೆ ತಕ್ಕಂತೆ ಉಚಿತವಾದ ಮಾತುಗಳನ್ನಾಡಿ, ಪರಿಸ್ಥಿತಿ ಏನೇ ಆಗಿರಲಿ ಎಲ್ಲವನ್ನೂ ಉದಾರವಾಗಿ ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಂಡರು. ವಿದ್ಯಾನಂದರ ಮೌನ ಕರಗಲಿಲ್ಲ ! ಕಡೆಗೆ ಇವರಿಬ್ಬರೂ ವಂದಿಸಿ ಹೊರಬಂದರು.

**ಉಪೇಕ್ಷೆ ಏಕೆ :**

ಶಾಂತರಾಜರನ್ನು ಮೈಸೂರಿನಿಂದ ಹಠಮಾಡಿ ಕರೆಸಿದ ವಿದ್ಯಾನಂದರು ಅವರ ಜೊತೆ ಏಕೆ ಮಾತನಾಡಲಿಲ್ಲ ? ತಮ್ಮ ಇಚ್ಛೆಯಂತೆ ಅವರು ಬಂದರೂ ಏಕ ಉಪೇಕ್ಷೆಯಿಂದ ಕಂಡರು ? ಸಮಸ್ಯೆಯೇನಿದ್ದರೂ ಆ ಸಂದರ್ಭದಲ್ಲಿ ಚರ್ಚಿಸಿ ಒಂದು ಪರಿಹಾರವನ್ನು ಕಂಡುಹಿಡಿಯಬಹುದಿತ್ತಲ್ಲ ? ಚಂದ್ರಯ್ಯನವರನ್ನು ಅಪರಾಧಿಗಳನ್ನಾಗಿ ಮಾಡಲೇಬೇಕೆಂದಿದ್ದರೆ ಅದಕ್ಕೆ ತಮ್ಮ ಬಳಿ ದಾಖಲೆಗಳಿದ್ದರೆ ಅವುಗಳನ್ನು ಶಾಂತರಾಜರ ಗಮನಕ್ಕೆ ತಂದು ಅಪರಾಧವನ್ನು ಮನವರಿಕೆ ಮಾಡಿಕೊಡಬಹುದಿತ್ತಲ್ಲ ? ಈ ರಾಜಮಾರ್ಗವನ್ನು ವಿದ್ಯಾನಂದರು ಆಗಲಾದರೂ ಏಕೆ ತುಳಿಯಲಿಲ್ಲ ? ಒಮ್ಮೆ ಹಿಡಿದ ತಪ್ಪು ಹಾದಿಯನ್ನು ಮುಂದುವರೆಸಿದರಲ್ಲ ಏಕೆ ? ಮೌನವೇ ಇದಕ್ಕೆಲ್ಲಾ ಉತ್ತರವೆ? ಇದರ ರಹಸ್ಯವೇನಿರಬಹುದು ? ಮುಂದೆ ನಡೆದ ವಿದ್ಯಾನಂದರ ಪ್ರವರ್ತನ ವಿಷಯವನ್ನು ಗಮನದಲ್ಲಿಟ್ಟುಕೊಂಡು ಈ ಅರ್ಥವಾಗದ ನಿಗೂಢ ಮೌನಕ್ಕೆ ಕಾರಣವನ್ನು ಹೇಳಬಹುದು. ವಿದ್ಯಾನಂದರ ಆಗಿನ ಅಂತರಂಗದ ಜಾಡನ್ನು ಗುರುತಿಸಬಹುದು.

**ಆತ್ಮಸಾಕ್ಷಿಯ ಮೇಲುಗೈ :**

ವಿದ್ಯಾನಂದರು ಸನ್ಯಾಸದೀಕ್ಷೆ ಸ್ವೀಕರಿಸುವುದಕ್ಕಿಂತ ಮೊದಲಿನಿಂದಲೂ ಶಾಂತರಾಜರು ಮತ್ತು ಚಂದ್ರಯ್ಯನವರ ಸ್ನೇಹ ಆತ್ಮೀಯವಾಗಿ ಬೆಸೆದು ಬಂದಿದೆ. ಇಷ್ಟೇ ಅಲ್ಲ ಶಾಂತರಾಜರ ತಂದೆಯವರಾದ ಎಸ್. ಎಸ್. ಪದ್ಮರಾಜಯ್ಯನವರಿಗೆ ಚಂದ್ರಯ್ಯನವರೆಂದರೆ ಪಂಚಪ್ರಾಣ. ಇವರಿಬ್ಬರೂ ಒಂದು ಜೀವ ಎರಡು ದೇಹಗಳಂತೆ ಅನ್ಯೋನ್ಯ

ವಾಗಿ ಬಾಳಿದವರು ಎಸ್ ಎಸ್ ಪದ್ಮರಾಜಯ್ಯನವರಿಗೆ ಚಂದ್ರಯ್ಯನವರಿಲ್ಲದಿದ್ದರೆ ಬೆಳಗಾಗುವುದಿಲ್ಲ ಎಂಬಂತೆ ಅವರ ಒಡನಾಟ ಪದ್ಮರಾಜಯ್ಯನವರು ಸ್ವರ್ಗಸ್ಥರಾದ ನಂತರವೂ ಚಂದ್ರಯ್ಯನವರು ಮತ್ತು ಪದ್ಮರಾಜಯ್ಯನವರ ಸ್ನೇಹಕ್ಕೆ ಧಕ್ಕೆಯೊದಗಲಿಲ್ಲ ! ಏಕೆಂದರೆ ಚಂದ್ರಯ್ಯನವರ ಪಾಲಿಗೆ ಶಾಂತರಾಜರೇ ಪದ್ಮರಾಜಯ ನವರಾದರು ! ಹೀಗೆ ಚಂದ್ರಯ್ಯ ಮತ್ತು ಶಾಂತರಾಜರ ಸ್ನೇಹ ವಂಶಪಾರಂಪರ್ಯದಿಂದ ಬೆಸೆದು ಬಂದದ್ದು

ಈ ರೀತಿಯ ಆತ್ಮೀಯ ಸ್ನೇಹದಲ್ಲಿ ಶಾಂತರಾಜರು ಚಂದ್ರಯ್ಯನವರ ಗುಣಾವ ಗುಣಗಳನ್ನೆಲ್ಲಾ ಆಮೂಲಾಗ್ರವಾಗಿ ಹತ್ತಿರದಿಂದ ತಿಳಿದವರು ಅವರ ಅಮೂಲ್ಯವಾದ ಸಾಧನೆಗಳಿಗೆಲ್ಲಾ ತುಂಬುಹೃದಯದಿಂದ ಪ್ರೋತ್ಸಾಹ, ಬೆಂಬಲ ಕೊಟ್ಟವರಾದರೆ, ಹಾಗೆಯೇ ನಿರ್ದಾಕ್ಷಿಣ್ಯವಾಗಿ ಅವರ ದೌರ್ಬಲ್ಯಗಳನ್ನು ಖಂಡಿಸಿದವರೂ ಹೌದು ! ಸಮಾಜಸೇವಾಕಾರ್ಯಗಳಲ್ಲಿ ಚಂದ್ರಯ ನವರು ಎಷ್ಟೊಂದು ನಿಸ್ಪೃಹವ್ಯಕ್ತಿಯೆಂಬುದು ಶಾಂತರಾಜರ ಅಂತರಂಗಕ್ಕೆ ಚನ್ನಾಗಿ ಮನವರಿಕೆಯಾಗಿತ್ತು. ಚಂದ್ರಯ್ಯನವರ ಜೊತೆಯ ದೀರ್ಘಸ್ನೇಹದಲ್ಲಿ, ಅವರೊಡನಾಟದಲ್ಲಿ ಮೂರುದಶಕಗಳಿಗೆ ಮೀರಿ ಭಾಗ ವಹಿಸಿದ ಸಮಾಜಸೇವಾಕಾರ್ಯಗಳಲ್ಲಿ, ಚಂದ್ರಯ್ಯನವರ ಪ್ರಾಮಾಣಿಕತೆಯನ್ನು ಶಂಕಿ ಸುವ ಒಂದಾದರೂ ನಿದರ್ಶನವಿರಲಿಲ್ಲ

ಶಾಂತರಾಜರು ಮತ್ತು ಚಂದ್ರಯ್ಯನವರ ಸ್ನೇಹಬೆಸುಗೆ ಹೀಗಿರುವಾಗ ಇದು ವರೆಗೂ 17 ವರ್ಷಗಳಿಂದ ಕರ್ನಾಟಕದಲ್ಲೇ ಇರದಿದ್ದ ವಿದ್ಯಾನಂದ ಮುನಿಗಳು, ಒಂದು ಕಲ್ಪಿತ ಆಪಾದನೆಯನ್ನು ಆಧರಿಸಿ ಚಂದ್ರಯ್ಯನವರನ್ನು ತಪ್ಪಿತಸ್ಥರನ್ನಾಗಿ ಮಾಡಲು ತಮ್ಮ ಸಹಕಾರವನ್ನು ಬಯಸಿದಾಗ, ಶಾಂತರಾಜರ ಪರಿಶುದ್ಧ ಆತ್ಮಸಾಕ್ಷಿ ಅದನ್ನೊಪ್ಪ ಲಿಲ್ಲ ಇದನ್ನು ಗ್ರಹಿಸಿದ ವಿದ್ಯಾನಂದರು ಹೇಗಾದರೂ ಮಾಡಿ ಶಾಂತರಾಜರು ಮತ್ತು ಚಂದ್ರಯ್ಯನವರ ಸ್ನೇಹವನ್ನು ಭೇದಿಸಲೇಬೇಕೆಂದು ನಿರ್ಧಾರ ಮಾಡಿದರು ಅವರ ಕುರುಡುಹಠ ಅವರನ್ನು ಬೇರೊಂದು ದಿಕ್ಕಿಗೆ ಸೆಳೆದೊಯ್ಯಿತು

ಈ ಸ್ನೇಹವನ್ನು ಭೇದಿಸಲು ವಿದ್ಯಾನಂದರಿಗೆ ನೇರವಾದ ಮಾರ್ಗವೇ ಇರಲಿಲ್ಲ ವಾದ್ದರಿಂದ ಆಹಾರನಿರಾಕರಣೆಯ ಬೆದರಿಕೆಯ ತಂತ್ರಕ್ಕೆ ಶರಣುಹೋದರು ಶಾಂತ ರಾಜರು ಬೆದರಿಕೆಗೆ ಮಣಿದು ಬಂದಾಗ, ಅವರನ್ನು ಮತ್ತೆ ಬಿಡದಂತೆ ಮೌನದ ಉಪೇ ಕ್ಷೆಯ ಆಯುಧದಿಂದ ಮಣಿಸಲು ಪ್ರಯತ್ನಪಟ್ಟರು ಶಾಂತರಾಜರ ಆತ್ಮಸಾಕ್ಷಿ ಈ ಮೌನದ ಉಪೇಕ್ಷೆಯ ಆಯುಧಕ್ಕೂ ಜಗ್ಗದೇ ಹೋದಾಗ ವಿದ್ಯಾನಂದರ ರೋಷ ನೂರ್ಮಡಿಯಾಯಿತು ಅವರು ವಂದಿಸಿ ಹೊರಟಕೂಡಲೇ ಅದು ಮೇರೆ ಮೀರಲಾ ರಂಭಿಸಿತು ! ಅದೇ ದಿವಸ ಅಂದರೆ 14-7-80 ರಂದು ಸಂಜೆ ಮೂರುಗಂಟೆಯ ಪ್ರವಚನದ ಸಮಯದ ಹೊತ್ತಿಗೆ ಆ ರೋಷ ಭೋರ್ಗರೆಯಲಾರಂಭಿಸಿತ್ತು ! ಪ್ರವಚ ನದ ನಡುವ ಸಭಿಕರಲ್ಲಿ ಯಾರೋ ಕೆಲವರು ಮಾತನಾಡುತ್ತಿದ್ದುದು, ವಿದ್ಯಾನಂದರ

ಕೆರಳಿದ್ದ ರೋಷ ಬಹಿರಂಗ ಸಭೆಯನ್ನು ಅಪ್ಪಳಿಸಲು ನಿಮಿತ್ತಕಾರಣವಾಯಿತು

ವಿದ್ಯಾನಂದರು ಪ್ರವಚನ ವಿಷಯದಲ್ಲಿ ಪ್ರಸ್ತಾಪಿಸಿದ್ದ ರಾವಣನ ವಿಚಾರವನ್ನು ಅತ್ತ ಸರಿಸಿ, ಚಂದ್ರಯ್ಯನವರ ಮೇಲೂ ಶಾಂತರಾಜರ ಮೇಲೂ, ಮತ್ತು ಡಾ|| ಸುರೇಂದ್ರ ಎಂಬುವರ ಮೇಲೂ ದೋಷಾರೋಪಣೆಗಳನ್ನು ಮಾಡಲಾರಂಭಿಸಿದರು ರೋಷತಪ್ತವಾಗಿ ಅರುಣವರ್ಣಕ್ಕೆ ತಿರುಗಿದ್ದ ಅವರ ಮುಖವನ್ನು ಸಭಿಕರು ಗಮನಿಸಿದರು ಮುನಿಗಳಿಗೂ ಇಷ್ಟೊಂದು ಕೋಪವುಂಟೆ ಎಂದುಕೊಂಡರು

ಈ ಸಭೆಯಲ್ಲಿ ಹಾಜರಿದ್ದ ಶಾಂತರಾಜರಿಗೆ ವಿದ್ಯಾನಂದರ ಅನಿರೀಕ್ಷಿತ ಮಾತುಗಳಿಂದ ದಿಗ್ಭ್ರಮೆಯಾಗುವುದಕ್ಕೆ ಬದಲಾಗಿ ಪರಮಾಶ್ಚರ್ಯವಾಯಿತು ! ವಿದ್ಯಾನಂದರಲ್ಲಿ ಈ ಬಗೆಯ ಪರನಿಂದೆಯ ಸ್ವಭಾವವೂ ಆಶ್ರಯ ಪಡೆದಿದೆಯೇ ? ಎಂದುಕೊಂಡು ಸಮಚಿತ್ತವನ್ನು ನೆಮ್ಮಿ ಅವರು ಮೈಸೂರಿನ ಹಾದಿಯನ್ನು ಹಿಡಿದರು

ಕಾರು ಮುಂದರಿಯುತ್ತಿದ್ದಂತೆ ಹೊರಗಿನ ದೃಶ್ಯಾವಳಿಗಳು ಗೋಚರಿಸಿ ಕೂಡಲೆ ಹಿಂದೆ ಹಿಂದೆ ಸರಿಯುವಂತೆ, ಶ್ರವಣಬೆಳಗೊಳದಲ್ಲಿ ಒಂದು ದಶಕದಿಂದಲೂ ತಮ್ಮ ಪಾತ್ರವಿದ್ದ ದೃಶ್ಯಾವಳಿಗಳು ಶಾಂತರಾಜರ ಸ್ಮೃತಿಪಟಲದಲ್ಲಿ ಸುಳಿದು ಸುಳಿದು ಮರೆಯಾಗ ತೊಡಗಿದವು

ಪಟ್ಟಾಭಿಷೇಕಕ್ಕಾಗಿ ಓಡಾಡಿದ್ದು, ಚಾರುಕೀರ್ತಿಗಳ ಉನ್ನತ ವಿದ್ಯಾಭ್ಯಾಸಕ್ಕಾಗಿ ಹಂಬಲಿಸಿದ್ದು, ಅವರನ್ನು ವಿದ್ಯಾನಂದರಿಗೆ ಪರಿಚಯ ಮಾಡಿದ್ದು, ಸದಾಕಾಲ ಚಾರುಕೀರ್ತಿಗಳ ಹಿತವನ್ನೂ ಕ್ಷೇತ್ರದ ಅಭಿವೃದ್ಧಿಯನ್ನು ಎಣಿಸುತ್ತಾ ಮೈಸೂರಿನಿಂದ ಶ್ರವಣಬೆಳಗೊಳಕ್ಕೂ, ಶ್ರವಣಬೆಳಗೊಳದಿಂದ ಮೈಸೂರಿಗೂ ಹಗಲಿರುಳೆನ್ನದೆ ಒಂದೇ ಸಮನೆ ಕಾರಿನಲ್ಲಿ ಓಡಾಡಿದ್ದು ಇವೆಲ್ಲಾ ಈಗ ಇದ್ದಕ್ಕಿದ್ದಂತೆ ಇತರರ ದೃಷ್ಟಿಯಲ್ಲಿ ಅರ್ಥವನ್ನು ಕಳೆದುಕೊಂಡು ಬಿಟ್ಟುವೆ? ಸ್ವಪ್ನಲೋಕದ ಘಟನೆಗಳಾಗಿ ಬಿಟ್ಟುವೆ? ಇಷ್ಟೆಲ್ಲಾ ಶ್ರಮಪಟ್ಟುದಕ್ಕೆ ಸಮಾಜದ ಹಿತವೇ, ಆ ಸಮಯ ಈ ಸಮಯವೆನ್ನದೆ ನಿಷ್ಕಳಂಕ ಹೃದಯದಿಂದ ಓಡಾಡಿದುದಕ್ಕೆ ಸಿಕ್ಕ ಪ್ರಶಸ್ತಿ ಬಹಿರಂಗವಾಗಿ ದೋಷಾರೋಪಣೆಯೆ?

ಈ ಬಗೆಯ ಪ್ರಶ್ನೆಗಳು ಮನಸ್ಸಿನಲ್ಲಿ ಮೂಡುತ್ತಾ ಹೋದಂತೆ ಶ್ರವಣಬೆಳಗೊಳದ ಹಾದಿ ತಮಗೆ ಪೂರ್ಣವಾಗಿ ಮುಚ್ಚಿದಂತೆ ಭಾಸವಾಗಿ ಧಾರ್ಮಿಕ ಪ್ರಪಂಚದ ವಿಚಿತ್ರವಾದ ನಡವಳಿಕೆಗಳಿಗೆ ಅಚ್ಚರಿಪಡುತ್ತಾ ಶಾಂತರಾಜರು ಮೈಸೂರನ್ನು ಸೇರಿದರು

**ಟೇಪು ಸೆರೆ ಹಿಡಿದ ಕಿಡಿನುಡಿಗಳು :**

ತಾ|| 14-7-80 ರಂದು ವಿದ್ಯಾನಂದರು ಮಾಡಿದ ಪ್ರವಚನದಲ್ಲಿ ಚಂದ್ರಯ್ಯ

**ಮತ್ತು ಶಾಂತರಾಜ್ ರವರಿಗೆ ಸಂಬಂಧಿಸಿದಂತೆ ದೋಷಾರೋಪಣೆ ಹೊರಿಸಿದ ಮಾತು ಗಳೆ ಪೂರ್ಣಪಾಠ ಕೆಳಗಿದೆ ಇದನ್ನು ಅವರ ಪ್ರವಚನದ ಟೇಪ್ ನಿಂದ ಆಯ್ದು ಕೊಳ್ಳಲಾಗಿದೆ**

" ಶ್ರವಣಬೆಳಗೊಳದಲ್ಲಿ ಮೂವರು ವ್ಯಕ್ತಿಗಳು ತೊಂದರೆ ಕೊಡು ತ್ತಿದ್ದಾರೆ ಡಾ॥ ಸುರೇಂದ್ರ, ಮೈಸೂರು ಶಾಂತರಾಜರು ಇವರೊ ಡನೆ ಚಂದ್ರಯ್ಯ ಈ ಮೂವರು ನಮ್ಮ ಸಮಾಜದವರೆಲ್ಲರೂ ಸೇರಿ ಕೊಂಡು ಅವರನ್ನು ಸರಿಮಾಡಬೇಕು ಕಾಲೇಜ್ ಬಂದ್ ಮಾಡಿದ್ದಾರೆ ಅವರು ಅದರ ಲೆಕ್ಕ ಕೊಡುವುದಿಲ್ಲ ಉತ್ತರದೇಶದವರು ಅವರು ದುಡ್ಡು ಕೊಟ್ಟಿದ್ದಾರೆ ಯಾತಕ್ಕೆ ಬಂದು ಮಾಡಿದರು ಅಂತ, ಅವರನ್ನು ವಿಚಾರ ಮಾಡಬೇಕು ಬೆಳ್ಳೂರು, ಇಡೀ ಕರ್ನಾಟಕದ ತರುಣರು ಎಲ್ಲಾ ಬಂದು ಸೇರಿಕೊಂಡು 22ನೇ ತಾರೀಖು ವಿಚಾರ ಮಾಡಬೇಕು ಯಾಕೆಂದರೆ, ಶ್ರವಣಬೆಳಗೊಳದಲ್ಲಿ ಕಿತಾಪತಿ ನಡೀತಿದೆ ವಿಚಾರ ಮಾಡಬೇಕು ತಿಳಿತೇನ್ ಎಲ್ರೂ ಬಂದ್ ವಿಚಾರ ಮಾಡಬೇಕು ಶ್ರವಣಬೆಳಗೊಳವನ್ನು ಹಾಳು ಮಾಡುತ್ತಿದ್ದಾರೆ ಭಾರಿ ಕಿತಾಪತಿ ಮಾಡಿದ್ದಾರ ಮೈಸೂರಿನವರು ನಾನು ಕರ್ನಾಟಕಕ್ಕೆ ಬರುವುದಿಲ್ಲ ಮೊದು ಕುಳಿತೆ ಈಗ ಸ್ವಾಮಿಗಳಿಗೆ ತೊಂದರೆ ಕೊಡುತ್ತಿದ್ದಾರೆ ಮೈಸೂರು ನಗರದವರು ಶ್ರವಣಬೆಳಗೊಳವನ್ನು ನಾಶಮಾಡುತ್ತಿದ್ದಾರೆ ಮೈಸೂರು ನಗರದವರು. ನಾಳೆ ವಿಚಾರಮಾಡಬೇಕು ನಾನು ಬಿಡೋ ಹಾಗಿಲ್ಲ, ಬಿಡೋದಿಲ್ಲ 21ನೇ ತಾರೀಖು ಚೀಫ್ ಮಿನಸ್ಟರ್ ಬರು ತ್ತಾರೆ ಅವರ ಎದುರಿನಲ್ಲಿ ಎಲ್ಲಾ ಸ್ಪಷ್ಟವಾಗಿ ಹೇಳಿಬಿದ್ತೀನಿ ನಾನು ಬಿಡೋದಿಲ್ಲ ಯಾಕೆಂದರೆ, ಸಮಾಜದ್ರೋಹ ಮಾಡತಕ್ಕ ಜನರಲ್ಲಿ ಒಂದು ಹುಳು ಬಿದ್ದರೆ ಎಲ್ಲಕ್ಕೂ ಹುಳ ಆಗುತ್ತದೆ. ಈ ವಿಷಯದಲ್ಲಿ ಒಟ್ಟುಕೂಡಿ ನಾವು ನಡಸ್ತೀವಿ ಎಲ್ಲರನ್ನೂ ಭಟ್ಟಾಚಾರ್ ಮಾಡು ತ್ತಾರೆ ಬಿಟ್ಟುಕೊಡಿ ನಾವು ಮಾಡ್ತೀವಿ ವ್ಯವಸ್ಥೆಯ 22ನೇ ತಾರೀಖು ಮಧ್ಯಾಹ್ನದ ಹೊತ್ತಿಗೆ 4 ಜನ ಭಟ್ಟಾಚಾರ್‌ರೊಡನೆ ವಿಚಾರಿಸಿ ಕರೆದು ವಿಚಾರಣೆಮಾಡಿ ವಿವರಿಸ್ತೀನಿ ನಾನು ಬಿಡೋ ಹಾಗಿಲ್ಲ. ಕ್ಷಮೆ ಮಾಡೋದಾದರೂ, ಕ್ಷಮೆ ಮಾಡೋದಿಲ್ಲ ದುರ್ವ್ಯವಹಾರ, ಇದರಲ್ಲಿ ಕಳಂಕ ಇಡಿ ಮನಸ್ಸು. ಇಲ್ಲಿ ಮನಸ್ಸು ಕ್ಲೇಶ ತಳದಿದೆ. ಮನಸ್ಸು

ಸ್ವಚ್ಛ ನಾನು ನಿಮಗಾಗಿ ಹೇಳಬೇಕಾಗಿತ್ತು. ನಾನು ಸ್ಪಷ್ಟ ಅಂದರೆ ಸ್ಪಷ್ಟ ರಾಜನಾಗಲಿ, ಚಕ್ರವರ್ತಿಯಾಗಲಿ, ಶ್ರವಣಬೆಳಗೊಳ ಉದ್ಧಾರವಾಗಬೇಕಾದರೆ, ಕರ್ನಾಟಕ, ಉತ್ತರಭಾರತ ಉತ್ತರಭಾರತ ಪ್ರದೇಶದಿಂದ 32 ಲಕ್ಷ ರೂಪಾಯಿ ಕೊಟ್ಟಿದ್ದಾರೆ ಕುಮ್ಮಕ್ಕು ಮಾಡಿದ್ದಾರೆ ಇದರ ಬಗ್ಗೆ ಸಮಾಜ ವಿಚಾರಿಸಬೇಕು

ಶಾಂತರಾಜರು ಏನೋ ದುಡ್ಡಿದೇಂದು ಹೇಳಿ ಮೋಸಾನೆ ಮಾಡುತ್ತಿದ್ದಾರೆ, ಅವರು ಬಹಳ ಕಿತಾಪತಿ ಮಾಡುತ್ತಿದ್ದಾರೆ ಒಂದು ವರ್ಷದಿಂದ ಹಿಂಸೆ ಮಾಡುತ್ತಿದ್ದಾರೆ ಸ್ವಾಮಿಗಳಿಗೆ ನಿಮಗೆ ಯಾರಿಗೂ ಗೊತ್ತಿಲ್ಲ ಅವರು ಏನು ಮಾಡುತ್ತಿದ್ದಾರೆಂದರೆ ಅವರ ಹತ್ತಿರ ಇರತಕ್ಕಂಥ ಹಣವನ್ನೆಲ್ಲಾ ನಮ್ಮ ಕೈಯಲ್ಲಿ ಕೊಡಿ, ನಾನು ಬೇಕಾದ ಹಾಗೆ ಖರ್ಚು ಮಾಡಬೇಕೂಂತ ದುರ್ಬುದ್ಧಿ ಇಲ್ಲಿ ನೆರೆದಿರತಕ್ಕ ಪ್ರಮುಖರಿಗೆ ನಿಮ್ಮದಾಗಿ ಹೇಳುತ್ತೀನಿ, ನೀವು ಉತ್ತರಪ್ರದೇಶಕ್ಕೆ ಹೋಗಿ,

ವಿದ್ಯಾನಂದ ಮುನಿಗಳು ತಮ್ಮ ಪ್ರವಚನದಲ್ಲಿ ಚಂದ್ರಯ್ಯನವರಿಗಿಂತಲೂ ಹೆಚ್ಚಾಗಿ ಶಾಂತರಾಜರನ್ನು ದೂಷಿಸಲು ತಮ್ಮ ಇಷ್ಟಕ್ಕೆ ಅನುಗುಣವಾಗಿ ಅವರು ನಡೆದುಕೊಳ್ಳಲಿಲ್ಲ ಎಂಬುದೊಂದೇ ಕಾರಣವಲ್ಲ! ಆ ನಿಂದೆಯ ಮಾತುಗಳು ಪುಂಖಾನುಪುಂಖವಾಗಿ ಬರಲು ಬೇರೆ ಪ್ರಬಲವಾದ ಕಾರಣಗಳೂ ಉಂಟು ಇದುವರೆಗೂ ಬಹಿರಂಗವಾಗಿ ಪ್ರಕಟವಾಗದಿರುವ ಈ ಪ್ರಬಲ ಕಾರಣಗಳೇನೆಂಬುದು ವಿದ್ಯಾನಂದರ ಮನಸ್ಸಾಕ್ಷಿಗೂ ಚನ್ನಾಗಿ ಗೊತ್ತು! ಹಾಗೆಯೇ ಅವರ ಅಚ್ಚುಮೆಚ್ಚಿನ ಮಠಾಧಿಪತಿಗಳಿಗೂ ಗೊತ್ತು

ವಿದ್ಯಾನಂದರು ಮತ್ತು ಅವರ ಅಚ್ಚುಮೆಚ್ಚಿನವರು ಅವುಗಳನ್ನೆಲ್ಲಾ ಹೇಳದೇ ಹೋದರೂ ಅವುಗಳನ್ನೆಲ್ಲಾ ಹೇಳುವ ಅವಕಾಶವನ್ನು ಅವರು ತಮ್ಮ ದುಡುಕುತನಗಳಿಂದಾಗಿ ನನಗೆ ಒದಗಿಸಿಕೊಟ್ಟಿದ್ದಾರೆ ಇದಕ್ಕಾಗಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಿ ವಿದ್ಯಾನಂದ ಮುನಿಗಳು ಪ್ರವಚನದಲ್ಲಿ ಸುಳ್ಳು ಅಪಾದನೆಗಳನ್ನು ಹೊರಿಸಲು ಪ್ರಬಲವಾದ ಕಾರಣಗಳೇನೆಂಬುದನ್ನು ಇನ್ನು ಮುಂದೆ ವಿವರಿಸುತ್ತೇನೆ

**ಮಹತ್ವಪೂರ್ಣ ದಾಖಲೆ :**

ಕ್ಷೇತ್ರದ ಕಾರ್ಯಗಳಲ್ಲಿ ಶಾಂತರಾಜರಿಂದ ಅಪೂರ್ವ ಮಾರ್ಗದರ್ಶನವನ್ನು ಪಡೆಯುತ್ತಿದ್ದ ಚಾರುಕೀರ್ತಿ ಸ್ವಾಮಿಗಳು, ಶಾಂತರಾಜರ ತತ್ವನಿಷ್ಠ ನಡವಳಿಕೆಗಳಿಂದಾಗಿ

ಅವರೊಂದಿಗೆ ಭಿನ್ನಾಭಿಪ್ರಾಗಳನ್ನು ಬೆಳೆಸಿಕೊಂಡಿದ್ದನ್ನು, ವಿದ್ಯಾನಂದ ಮುನಿಗಳು ಹೊರಗಿದ್ದುಕೊಂಡೇ ಶ್ರವಣಬೆಳಗೊಳದ ಮುಜರಾಯಿ ಕಮಿಟಿಯ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡುತ್ತಾ, ತಮ್ಮ ಸ್ವಾಗತ ಸಮಾರಂಭಗಳಿಗಾಗಿ ಹಣ ಮಂಜೂರು ಮಾಡುವ ವಿಚಾರದಲ್ಲಿ ಆಸಕ್ತಿವಹಿಸಿದ್ದನ್ನೂ, ಈಗ ಮುಂದೆ ಕೊಡಲಿರುವ ಅತ್ಯಂತ ಪ್ರಮುಖವಾದ ಒಂದು ಪತ್ರದಾಖಲೆ ವಿವರಿಸುತ್ತದೆ

ಈ ದಾಖಲೆ ವಿವಾದಕ್ಕೆ ಕಾರಣವಾದ ಬೆಳ್ಳೂರಿನ ಪ್ರವಚನಕ್ಕೆ ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಎಲ್ಲಾ ಆಗುಹೋಗುಗಳನ್ನು ಸಂಕೇತಿಸುವಂತಿದೆ ತಾ॥ 26–8–1979 ರಂದು ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳು ತಮ್ಮ ದೆಹಲಿ ವಾಸ್ತವ್ಯದಿಂದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಅಧ್ಯಕ್ಷಸ್ಥಾನ ದಿಂದ ಶಾಂತರಾಜರಿಗೆ ಬರೆದ ಇಂಗ್ಲೀಷ್ ಭಾಷೆಯಲ್ಲಿರುವ ಒಂದು ಪತ್ರವೇ ಆ ಮಹತ್ವ ಪೂರ್ಣವಾದ ದಾಖಲೆಯಾಗಿದೆ ಪತ್ರದ ಪೂರ್ಣ ವಿವರ ಅನುವಾದವಾಗಿ ಮುಂದಿದೆ

ಪೂಜ್ಯ ಚಾರುಕೀರ್ತಿ ಭಟ್ಟಾರಕ ಸ್ವಾಮಿಜಿ ಛೇರ್ಮನ್ನರ ಕಛೇರಿ

ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ<br>
ಶ್ರವಣಬೆಳಗೊಳ,<br>
ಹಾಸನ ಜಿಲ್ಲೆ, ಕರ್ನಾಟಕ, ಇಂಡಿಯಾ<br>
ವಾಸ್ತವ್ಯ ದೆಹಲಿ<br>
26–8–79

ಧರ್ಮಬಂಧು ಶ್ರೀ ಎಸ್ ಪಿ ಶಾಂತರಾಜರಿಗೆ

ನಾವು ನಿಮಗೆ ಬರೆದ ಎಲ್ಲ ಪತ್ರಗಳು ಹಾಗೂ ' ತೀರಾ ವ್ಯಯುಕ್ತಿಕ ' ಪತ್ರವೂ ನಿಮಗೆ ತಲುಪಿದೆಯೆಂದು ಭಾವಿಸುತ್ತೇವೆ

ಮುನಿ ವಿದ್ಯಾನಂದಜಿ ಸ್ವಾಗತ ಸಮಿತಿಗೆ ನೀಡಬೇಕಾಗಿರುವ ವಂತಿಗೆಯ ವಿಚಾರ ದಲ್ಲಿ ಶ್ರೀ ಸಿ ಬಿ ಎಂ ಚಂದ್ರಯ್ಯನವರೊಡನೆ ದೀರ್ಘ ಚರ್ಚೆ ನಡೆದು ಶ್ರೀ ಎಸ್ ಪಿ ಜೈನ್‌ರವರನ್ನೊಳಗೊಂಡಂತೆ ಸಮಿತಿಯ ಎಲ್ಲಾ ಸದಸ್ಯರೂ, ಅವರಿಗೆ ವಂತಿಗೆಯ ವಿಚಾರವನ್ನು ಮನದಟ್ಟು ಮಾಡಿರುವುದರಿಂದ ಅವರು ಈ ವಿಚಾರದಲ್ಲಿ ಮಾಡಿದ್ದ ಆಕ್ಷೇಪಣೆಗಳನ್ನು ಸೌಜನ್ಯದಿಂದ ಹಿಂತೆಗೆದುಕೊಂಡಿದ್ದಾರೆ

ಈ ವಿಚಾರವಲ್ಲಿ ನಾವು ನಿಮಗೆ ತಾ॥ 14–8–79 ರಂದು ಬರೆದಿರುವ ' ತೀರಾ ವೈಯುಕ್ತಿಕ ' ಪತ್ರದಲ್ಲಿ ಪರಿಸ್ಥಿತಿಯನ್ನು ವಿವರವಾಗಿ ತಿಳಿಸಿದ್ದರೂ ಸಹ ಈ ವಿಚಾರದಲ್ಲಿ ನೀವು ಮಾಡಿರುವ ಆಕ್ಷೇಪಣೆಗಳನ್ನು ಸೌಜನ್ಯವಹಿಸಿ ಹಿಂತೆಗೆದುಕೊಳ್ಳದಿರುವುದು ನಮಗೆ

ವಿಸ್ಮಯವನ್ನುಂಟು ಮಾಡಿದೆ  ಈ ಕಾರಣದಿಂದಾಗಿ ನಾವು ವಿದೇಶಕ್ಕೆ ಪ್ರಯಾಣಿಸುವಾಗ ಮುನಿ ವಿದ್ಯಾನಂದಜೀಯವರ ದರ್ಶನ ಪಡೆಯದಿರುವಂತಾಯಿತು  ನೀವು ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳದಿದ್ದಲ್ಲಿ, ನಾವು ಕೆಲವು ಅನೈತಿಕ ಹಾಗು ನತದೃಷ್ಟಕರವಾದ ಸಂದರ್ಭಗಳನ್ನು ಪೂಜ್ಯ ಮುನಿಶ್ರೀಜಿಯವರ ಸಮ್ಮುಖದಲ್ಲಿ ಎದುರಿಸ ಬೇಕಾಗುತ್ತದೆ  ನಾವು ಅವರ ಬಳಿ ಹೋದಾಗ ಅವರು ನಮ್ಮನ್ನು ನಿಮ್ಮ ಆಕ್ಷೇಪಣೆಗಳ ಬಗೆಗೆ ಖಂಡಿತವಾಗಿ ಕೇಳುತ್ತಾರಾದ್ದರಿಂದ, ನಾವು ಅದನ್ನು ಅವರಿಗೆ ವಿವರವಾಗಿ ತಿಳಿಸುವ ದೊಡ್ಡ ಹೊಣೆಯನ್ನು ಹೊರಬೇಕಾಗುತ್ತದೆಯಲ್ಲದೆ, ಅವರನ್ನೊಪ್ಪಿಸಲು ಕಠಿಣವಾಗಿ ಹೋರಾಟವನ್ನು ನಡೆಸಬೇಕಾಗುತ್ತದೆ  ನಾವು ಈ ರೀತಿಯ ಸನ್ನಿವೇಶಗಳನ್ನು ಪೂಜ್ಯ ಮುನಿಶ್ರೀಜಿಯವರ ಸಮ್ಮುಖದಲ್ಲಿ ನಿರೀಕ್ಷಿಸಬೇಕೆಂದು ನೀವು ಇಷ್ಟಪಡುವಿರಾ ?

ನಾವು ನಿಮ್ಮನ್ನು ನಮ್ಮ ಪ್ರಮುಖ ಹಿತೈಷಿಗಳಲ್ಲೊಬ್ಬರೆಂದು ತಿಳಿದುಕೊಂಡು ನೀವು ನಿಮ್ಮ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳುವುದಕ್ಕೆ ಇನ್ನೂ ಸಮಯವಿರುವುದರಿಂದ, ನೀವು ಈ ವಿಷಯವನ್ನು ಮುಕ್ತಾಯ ಮಾಡಬಹುದೆಂದು ಕಟ್ಟಕಡೆಯವಾಗಿ ನಿಮಗೆ ತಿಳಿಸಲಿಚ್ಛಿಸುತ್ತೇವೆ

ಈ ಕೂಡಲೇ ನೀವು ನಿಮ್ಮ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳುವಿರೆಂದು ನಾವು ಭಾವಿಸುತ್ತೇವೆ

ಆಶೀರ್ವಾದಗಳೊಂದಿಗೆ

(ಸಹಿ)

ಚಾರುಕೀರ್ತಿ ಭಟ್ಟಾರಕ ಸ್ವಾಮಿಜಿ ''

ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರು ಕಮಿಟಿಯ ಅಧ್ಯಕ್ಷಸ್ಥಾನದಿಂದ ಕಮಿಟಿಯ ಸದಸ್ಯರೊಬ್ಬರಿಗೆ ಬರೆದಿರುವ ಈ ಪತ್ರ ಅಧ್ಯಕ್ಷಸ್ಥಾನವನ್ನು ದುರುಪಯೋಗಪಡಿಸಿಕೊಂಡಿರುವ ಪ್ರಕರಣವಲ್ಲದೆ ಬೇರಲ್ಲ ! ಸ್ವಾಮೀಜಿಯವರ ಸ್ಥಾನವೂ ಇಲ್ಲಿ ದುರುಪಯೋಗವಾಗಿರುವುದು ವಿವಾದಾತೀತ !

ಸದಸ್ಯರು ಯಾವುದಾದರೂ ಒಂದು ನಿರ್ಣಯಕ್ಕೆ ಆಕ್ಷೇಪಣೆಗಳನ್ನು ವ್ಯಕ್ತಪಡಿಸಿದಾಗ ಅದು ಕಮಿಟಿಯ ಸಭೆಯಲ್ಲಿ ಚರ್ಚೆಯಾಗಿ ತೀರ್ಮಾನವಾಗಬೇಕೇ ಹೊರತು, ಇತರ ವೇದಿಕೆಗಳಲ್ಲಲ್ಲ  ಚಾರುಕೀರ್ತಿಗಳು ಇಲ್ಲಿ ಶಾಂತರಾಜರ ಮೇಲೆ ಅನೇಕ ವಿಧಗಳಲ್ಲಿ ಒತ್ತಡ ಹೇರಿ ಅವರು ತಮ್ಮ ಆಕ್ಷೇಪಣೆಗಳನ್ನು ತತ್ವಬಾಹಿರರಾಗಿ ಹಿಂದಕ್ಕೆ ಪಡೆಯುವಂತೆ ಮಾಡಲು ಒಟ್ಟಾರೆ ಕಟ್ಟಕಡೆಯ ಪ್ರಯತ್ನ ನಡೆಸಿರುವುದು ಸುಸ್ಪಷ್ಟವಾಗಿದೆ




His Holiness
Charukeerthy Bhattarak
Swamiji

OFFICE OF THE CHAIRMAN
S D J M I MANAGING COMMITTEE
SHRAVANABELAGOLA
DISTRICT HASSAN KARNATAKA (INDIA)

Camp DELHI
26 3 79

Dharmathandhu
• Sri S P Shantaraj

We do hope that you might have already in receipt of our all letters including our "Purely Personal" letter

After detailed discussions in the Meeting Sri P B M Chandraiah who has been convinced by all other members including Sri S P Jain about the contribution to be made to Muni Vidyanandji Sivagni Samiti, he has been good enough to withdraw his objections regarding the above matter

In this connection, though we had talked and convinced you in person, and also we have narrated the situation in our "Purely Personal" letter dated 14th Aug '79, we have to surprise that you have not yet been good enough to withdraw your objections in the said matter. Because of which we were forced not to have the Darshan of Muni Vidyanandji during our departure to Abroad. Unless you withdraw your objections, we will have to face certain unmoral and unfortunate circumstances before

- 2



OFFICE OF THE
S D J M I MANAGING COMMITTEE
SHRAVANABELAGOLA
DISTRICT HASSAN KARNATAKA (INDIA)

-2-

H H Munisry If we go to him certainly he will ask me regarding your objections, and So we have to take the great task of explaining and should take hard struggle to convince him. Would you like this type of circumstances which we should expect in the presence of H H Munisry ?

We therefore finally would like to inform you, thinking that you are one of our well-wishers, that still there is time to get back your objections so that the matter will be come to put an end.

We do hope that you will withdraw your objections at once

With Blessings.

(Chamkirty Bhattarak Swamy)

ಶ್ರೀ ಚಾರುಕೀರ್ತಿ ಸ್ವಾಮಿಗಳು ತಾ|| 26-8-79 ರಂದು ದೆಹಲಿ ವಾಸ್ತವ್ಯದಿಂದ ಶಾಂತರಾಜರಿಗೆ ಬರೆದ ಮೂಲ ಪತ್ರದ ಪಡಿಯಚ್ಚು

**ಕಠಿಣ ಹೋರಾಟ :**

ಈ ಪತ್ರದಲ್ಲಿ ಬಹಳ ಮುಖ್ಯವಾದ ಭಾಗವೆಂದರೆ ವಿದ್ಯಾನಂದ ಮುನಿಗಳಿಗೆ ಸಂಬಂಧಪಟ್ಟದ್ದು ಈ ಭಾಗ ವಿದ್ಯಾನಂದರು ಬೆಳ್ಳೂರಿನಲ್ಲಿ ಮಾಡಿದ ನಿಂದೆಗೆ ನಿ ಜ ವಾ ದ ಕಾರಣಗಳನ್ನು ತಿಳಿದುಕೊಳ್ಳಲು ಹಾದಿ ಮಾಡಿಕೊಡುತ್ತದೆ ಮತ್ತು ವಿದ್ಯಾನಂದರ ವ್ಯಕ್ತಿತ್ವದ ಬಗ್ಗೆಯೇ ಸಂಶಯವನ್ನು ಮೂಡಿಸುತ್ತದೆ. ಅವರ ಪ್ರಸಿದ್ಧಿ ಕೃತಕವೇ ? ಎಂಬ ಪ್ರಶ್ನೆ ಸಹಜವಾಗಿ ಉಂಟಾಗುವಂತೆ ಮಾಡುತ್ತದೆ

ಈ ಪತ್ರದಲ್ಲಿ ಚಾರುಕೀರ್ತಿಯವರು ಬರೆದಿರುವ

" ನೀ ವು ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳದಿದ್ದಲ್ಲಿ ನಾ ವು ಕೆಲವು ಅನೈತಿಕ ಹಾಗೂ ನತದೃಷ್ಟಕರವಾದ ಸಂದರ್ಭಗಳನ್ನು ಪೂಜ್ಯ ಮುನಿಶ್ರೀಜಿಯವರ ಸಮ್ಮುಖದಲ್ಲಿ ಎದುರಿಸಬೇಕಾಗುತ್ತದೆ ನಾವು ಅವರ ಬಳಿ ಹೋದಾಗ ಅವರು ನಮ್ಮನ್ನು ನಿಮ್ಮ ಆಕ್ಷೇಪಣೆಗಳ ಬಗೆಗೆ ಖಂಡಿತವಾಗಿ ಕೇಳುತ್ತಾರಾದ್ದರಿಂದ ನಾವು ಅದನ್ನು ಅವರಿಗೆ ವಿವರವಾಗಿ ತಿಳಿಸುವ ದೊಡ್ಡ ಹೊಣೆಯನ್ನು ಹೊರಬೇಕಾಗುತ್ತದೆಯಲ್ಲದೆ, ಅವರ ನ್ನೊಪ್ಪಿಸಲು ಕಠಿಣ ಹೋರಾಟವನ್ನು ನಡೆಸಬೇಕಾಗುತ್ತದೆ ನಾವು ಈ ರೀತಿಯ ಸನ್ನಿವೇಶಗಳನ್ನು ಪೂಜ್ಯ ಮುನಿಶ್ರೀಜಿಯವರ ಸಮ್ಮುಖದಲ್ಲಿ ನಿರೀಕ್ಷಿಸಬೇಕೆಂದು ನೀವು ಇಷ್ಟಪಡುವಿರಾ?" ಎಂಬ ಮಾತುಗಳಂತೂ ವಿದ್ಯಾನಂದರು ತಾವೇ ತಮ್ಮ ಸ್ವಾಗತ ಸಮಾರಂಭಗಳಿಗಾಗಿ ಹಣವನ್ನು ಮಂಜೂರು ಮಾಡಿಕೊಳ್ಳುವ ವಿಚಾರದಲ್ಲಿ ಎಷ್ಟೊಂದು ಆಸಕ್ತಿವಹಿಸಿದ್ದಾರೆ ಎಂಬುವನ್ನು ನಿರ್ವಿವಾದವಾಗಿ ಸ್ಪಷ್ಟಪಡಿಸುತ್ತವೆ ಅಲ್ಲದೆ ಮೇಲಿನ ಮಾತುಗಳಿಂದ, ವಿದ್ಯಾನಂದರು ತಮ್ಮ ಸ್ವಾಗತದ ಹಣದ ಮಂಜೂರಾತಿಗೆ ಆಕ್ಷೇಪಣೆಗಳನ್ನು ವ್ಯಕ್ತಪಡಿಸಿರುವ ಶಾಂತರಾಜರ ಬಗೆಗೆ, ಆ ಸಂದರ್ಭದಲ್ಲಿ ಎಂತಹ ಭಾವನೆಯನ್ನು ಇಟ್ಟುಕೊಂಡಿರಬಹುದು ಎಂಬುವನ್ನು ಊಹಿಸಲೂ ದಾರಿ ಮಾಡಿಕೊಡುತ್ತವೆ

ತಮ್ಮ ಸ್ವಾಗತ ಸಮಾರಂಭಗಳಿಗೆ ಆಕ್ಷೇಪಣೆಗಳನ್ನು ಒಡ್ಡಿರುವ ಶಾಂತರಾಜರ ಮೇಲೆ ವಿದ್ಯಾನಂದರಿಗೆ ತೀವ್ರ ಅಸಮಾಧಾನ ವಿದೆಯೆಂಬುದು ಈ ಊಹೆಗೆ ನಿಲುಕುವ ಸಂಗತಿಯಾಗಿದೆ

ಚಾರುಕೀರ್ತಿಗಳು ಏನಾದರೂ ಮಾಡಿ, ಹೇಗಾದರೂ ಮಾಡಿ ಶಾಂತರಾಜರಿಂದ ಆಕ್ಷೇಪಣೆಗಳನ್ನು ಹಿಂದಕ್ಕೆ ಪಡೆಯುವ ಹಾಗೆ ಮಾಡದೇ ಹೋದರೆ, ವಿದ್ಯಾನಂದರು

ಚಾರುಕೀರ್ತಿಗಳನ್ನು ಸುಮ್ಮನೆ ಬಿಡುವುದಿಲ್ಲ ! ಅವರನ್ನು ಅನೈತಿಕವಾಗಿ ನಡೆಸಿಕೊಳ್ಳುತ್ತಾರೆ ಅವರಿಗೆ ನತದೃಷ್ಟಕರವಾದ ಸಂದರ್ಭವನ್ನು ಉಂಟುಮಾಡುತ್ತಾರೆ ಆಕ್ಷೇಪಣೆಗಳ ವಿಚಾರದಲ್ಲಿ ವಿದ್ಯಾನಂದರನ್ನೊಪ್ಪಿಸುವುದು ಸುಲಭವಲ್ಲ ! ಇದಕ್ಕಾಗಿ ಕಠಿಣವಾಗಿ ಹೋರಾಡುವ ದೊಡ್ಡ ಹೊಣೆಯನ್ನೇ ಚಾರುಕೀರ್ತಿಗಳು ಹೊರಬೇಕಾಗುತ್ತದೆ!

ನೀತಿ ಬೋಧನೆಯನ್ನೇ ಜೀವನದ ಗುರಿಯಾಗುಳ್ಳ ವಿದ್ಯಾನಂದರು ಅನೈತಿಕವಾಗಿ ನಡೆಸಿಕೊಳ್ಳುತ್ತಾರಂತೆ ! ವಿಶ್ವಧರ್ಮವನ್ನು ಪ್ರತಿಪಾದಿಸುವ ವಿದ್ಯಾನಂದರು ನತದೃಷ್ಟಕರವಾದ ಸಂದರ್ಭವನ್ನು ಉಂಟುಮಾಡುತ್ತಾರಂತೆ ! ಅಭಯ ಹಸ್ತವನ್ನು ನೀಡಿ ಜನರ ಭೀತಿಭಾವನೆಯನ್ನು ದೂರಮಾಡಬೇಕಾದ ಮುನಿಗಳಾದ ವಿದ್ಯಾನಂದರು, ಕಠಿಣವಾಗಿ ಹೋರಾಡುವ ದೊಡ್ಡ ಹೊಣೆಯನ್ನೇ ಉಂಟುಮಾಡುತ್ತಾರಂತೆ !

ವಿದ್ಯಾನಂದರು ತಮ್ಮ ಸ್ವಾಗತ ಸಮಾರಂಭಗಳಿಗೆ ಹಣ ಬಿಡುಗಡೆ ಮಾಡಲು ಒಪ್ಪದವರನ್ನು ಒಪ್ಪಿಸಲು ಅಸಮರ್ಥರಾದವರನ್ನು ಹೀಗೆಲ್ಲಾ ನಡೆಸಿಕೊಳ್ಳುವುದಾದರೆ, ಇನ್ನು ಒಪ್ಪದವರೇ ಮುಂದೆ ಬಂದಾಗ ಅವರನ್ನು ಇನ್ನೆಷ್ಟು ಅನೈತಿಕವಾಗಿ ಮತ್ತು ನತದೃಷ್ಟಕರವಾಗಿ ನಡೆಸಿಕೊಳ್ಳಬಹುದು ಎಂಬುದನ್ನು ನೀವೇ ಊಹಿಸಿ ! ಊಹಿಸುವುದೇನು ಬಂತು ಈಗಾಗಲೇ ಬೆಳ್ಳೂರಿನಲ್ಲಿ ನಡೆದಿರುವ ಪ್ರಸಂಗ ನಿಮ್ಮ ಗಮನಕ್ಕೆ ಬಂದಿದೆಯಲ್ಲವೆ !

ತಮ್ಮ ಸ್ವಾಗತಸಮಾರಂಭ ಮತ್ತು ಮೆರವಣಿಗೆಗಳಿಗೆ ಹಣ ಕೊಡುವುದನ್ನು ವಿರೋಧಿಸುವ ಜನರ ಬಗೆಗೆ ವಿದ್ಯಾನಂದ ಮುನಿಗಳು ಇಷ್ಟೊಂದು ವ್ಯಗ್ರರಾಗುವುದು ಉಚಿತವೇ ?

ಚಾರುಕೀರ್ತಿಗಳು ಶಾಂತರಾಜರಿಗೆ ಬರೆದಿರುವ ಪತ್ರವಿಷಯದ ಬಗ್ಗೆ ಸಂಶಯ ಪಡುವ ಹಾಗೆಯೇ ಇಲ್ಲ ! ಏಕೆಂದರೆ ಚಾರುಕೀರ್ತಿಸ್ವಾಮಿಗಳು ಮತ್ತು ವಿದ್ಯಾನಂದ ಮುನಿಗಳ ಪರಿಚಯ 1970 ರಿಂದಲೂ ಬಹು ನಿಕಟವಾಗಿದೆ ಇದರಿಂದಾಗಿ ವಿದ್ಯಾನಂದರ ಅಂತರಂಗದ ಸ್ವಭಾವಗಳ ಪರಿಚಯ ಮತ್ತು ಆ ಸ್ವಭಾವಗಳು ಸಂಚರಿಸುವ ದಾರಿಗಳೆಲ್ಲಾ ಚಾರುಕೀರ್ತಿ ಸ್ವಾಮಿಜಿಯವರಿಗೆ ಚೆನ್ನಾಗಿ ಗೊತ್ತಿದೆ ವಿದ್ಯಾನಂದ ಮುನಿಗಳ ಮನಸ್ಸೆಂಬ ಕಾರಿನ ಚಾಲಕರು ಚಾರುಕೀರ್ತಿಸ್ವಾಮಿಗಳು ಎಂದು ಅವರಿಬ್ಬರ ಆತ್ಮೀಯತೆಯನ್ನು ವರ್ಣಿಸಿದರೆ ತಪ್ಪೇನಿಲ್ಲ !

ಹೀಗೆ ಅವರ ಮನಸ್ಸನ್ನು ಚಾರುಕೀರ್ತಿಗಳು ಚೆನ್ನಾಗಿ ತಿಳಿದಿರುವುದರಿಂದಲೇ ಅದು ಸಂಚರಿಸುವ ಒಂದು ಹಾದಿಯನ್ನು ಅವರು ತಮ್ಮ 26-8-79 ರ ಪತ್ರದಲ್ಲಿ ತಿಳಿಸಿದ್ದಾರೆ ವಿದ್ಯಾನಂದರ ಬೆಳ್ಳೂರಿನ ಪ್ರವಚನವನ್ನು ಕೇಳಿದ ಮೇಲಂತೂ ಚಾರುಕೀ-

ತಿಗಳು ಪತ್ರದಲ್ಲಿ ವಿದ್ಯಾನಂದರ ಬಗ್ಗೆ ಬರೆದಿರುವ ಮಾತುಗಳನ್ನು ಸಂಶಯ ಪಡಲು ಖಂಡಿತವಾಗಿಯೂ ಅವಕಾಶವೇ ಆಗುವುದಿಲ್ಲ

**ಸತ್ಕಾರಗಳ ಬಯಕೆ :**

ನಿರ್ಗ್ರಂಥ ಯತಿಗಳಾದವರು ತಮ್ಮ ಸ್ವಾಗತದ ಕಡೆಗೆ, ಅದಕ್ಕಾಗಿ ಹಣ ಮಂಜೂರು ಮಾಡುವುದರ ಕಡೆಗೆ, ತಮ್ಮ ಮೆರವಣಿಗೆ ಯಾವ ರೀತಿ ಇರಬೇಕು, ಹೇಗೆ ಆಗಬೇಕು ಎಂಬ ಮುಂತಾದ ವಿಚಾರಗಳ ಕಡೆಗೆ ಗಮನ ಹರಿಸಬಹುದೆ ? ಈ ವಿಚಾರದಲ್ಲಿ ಜೈನಧರ್ಮದ ಶಾಸ್ತ್ರಗ್ರಂಥಗಳು ಏನು ಹೇಳುತ್ತವೆ ? ಕ್ರಿ ಶ ಸುಮಾರು ಒಂದನೇ ಶತಮಾನದಲ್ಲಿದ್ದ ಶ್ರೇಷ್ಠ ದಿಗಂಬರ ಯತಿಗಳಾದ ಏಲಾಚಾರ್ಯರೆಂದು ಖ್ಯಾತರಾಗಿದ್ದ ಭಗವಾನ್ ಕುಂದಕುಂದಾಚಾರ್ಯರು ತಮ್ಮ ‘ ರಯಣಸಾರ ’ ದಲ್ಲಿ ಹೇಳಿರುವ ಮಾತುಗಳನ್ನು ಗಮನಿಸಬೇಕು

ಖಾಯೀ ಪೂಜಾಲಾಹಂ ಸಕ್ಕಾರಾಇಂ ಕಿಮಿಚ್ಛಸೇಜೋ ಈ ।
ಇಚ್ಛಸಿ ಜಇ ಪರಲೋಯಂ ತೇಹಿಂ ಕಿಂ ತುಜ್ಝ ಪರಲೋಯಂ ॥ –128

“ ಸ್ವರ್ಗ ಮತ್ತು ಮೋಕ್ಷಗಳನ್ನು ಪಡೆಯಬೇಕೆಂಬ ಅಪೇಕ್ಷೆಯುಳ್ಳ ಮುನಿಗಳು ಖ್ಯಾತಿ, ಪೂಜೆ, ಸತ್ಕಾರ, ಪುರಸ್ಕಾರಾದಿಗಳನ್ನು ಬಯಸಬಾರದು ಪರಲೋಕದ ಸುಖವು ಖ್ಯಾತಿ ಪೂಜಾದಿಗಳಿಂದ ಲಭಿಸಲಾರದು

ಮುನಿಗಳೆಂದರೆ ಸರ್ವಸಂಗ ಪರಿತ್ಯಾಗಿಗಳು ಅವರು ತಮಗೆ ಪ್ರಸಿದ್ಧಿ ಬರಬೇಕೆಂದಾಗಲೀ, ಎಲ್ಲರೂ ತಮ್ಮನ್ನು ಸ್ವಾಗತಿಸಿ ಪೂಜಿಸಿ ಗೌರವಿಸಬೇಕೆಂದಾಗಲೀ, ಎಲ್ಲರೂ ತನ್ನನ್ನು ವಿರೋಧವಿಲ್ಲದೆ ಸತ್ಕಾರ ಪುರಸ್ಕಾರಗಳಿಂದ ಗೌರವಿಸಬೇಕೆಂದಾಗಲೀ, ಅಪೇಕ್ಷೆಪಟ್ಟರೆ ಅವರ ಮುನಿಧರ್ಮವೇ ಭಂಗವಾಗುತ್ತದೆ ಶ್ರಾವಕರು ವಂದಿಸಲಿ ಬಿಡಲಿ, ಪ್ರಶಂಸಿಸಲಿ ಆಕ್ಷೇಪಿಸಲಿ ಎಲ್ಲಾ ಸಮಯಗಳಲ್ಲೂ ಒಂದೇ ಸಮನಾದ ಭಾವನೆಯನ್ನಿಟ್ಟು ಪರಮ ಶಾಂತ ಸ್ವಭಾವವನ್ನು ಹೊಂದಿರುವುದೇ ಮುನಿಯ ಸ್ವರೂಪವಾಗಿರುತ್ತದೆ ಆದ್ದರಿಂದ ಖ್ಯಾತಿ ಪೂಜಾಪೇಕ್ಷೆಯಿಲ್ಲದೇ ಇರತಕ್ಕವನೇ ಮುನಿಯು

ಕುಂದಕುಂದಾಚಾರ್ಯರ ಮಾತುಗಳನ್ನು ವಿದ್ಯಾನಂದರಿಗೆ ಅನ್ವಯಿಸಿ ನೋಡಿದರೆ ದಿಗ್ಭ್ರಾಂತಿಯಾಗುತ್ತದೆ ! ಕುಂದಕುಂದಾಚಾರ್ಯರ ಗ್ರಂಥಗಳ ತತ್ವಗಳನ್ನು ನಿರರ್ಗಳವಾಗಿ ವ್ಯಾಖ್ಯಾನಿಸುವ ಅವರು ಆ ತತ್ವಗಳನ್ನು ತಾವೇ ಏಕೆ ಅನುಸರಿಸುತ್ತಿಲ್ಲ ಎಂಬ ಪ್ರಶ್ನೆ ಮೂಡುತ್ತದೆ

ತಮ್ಮ ಸ್ವಾಗತಸಮಾರಂಭಗಳ ವಿಚಾರವಾಗಿ ಅದಕ್ಕೆ ಹಣ ಮಂಜೂರು ಮಾಡುವ ವಿಚಾರವಾಗಿ ಕಮಿಟಿಯ ಸದಸ್ಯರು ಏನು ಕಾರಣವನ್ನಾದರೂ ಕೊಟ್ಟು, ಯಾವ ರೀತಿ

ಬೇಕಾದರೂ ಆಕ್ಷೇಪಿಸಲಿ ಇದರ ಒಗ್ಗೆ ಕಮಿಟಿಯಲ್ಲಿ ಯಾವ ಅಧಿಕಾರದ ಸ್ಥಾನಮಾನ ವನ್ನೂ ಹೊಂದಿಲ್ಲದ, ಜೊತೆಗೆ ಸರ್ವಸಂಗಪರಿತ್ಯಾಗಿಗಳಾದ ವಿದ್ಯಾನಂದರು, ತಮಗೆ ಕಮಿಟಿಯಿಂದ ಹಣ ಮಂಜೂರಾಗಲೇಬೇಕು ಎಂಬ ತೀವ್ರ ಆಸಕ್ತಿಯನ್ನು ಖಂಡಿತವಾಗಿ ಯೂ ತೋರಬಾರದಿತ್ತು ಆದರೆ ತೋರಿಸಿದ್ದಾರಲ್ಲ ? ತಾ॥ 26–8–79 ರ ಚಾರು ಕೀರ್ತಿಸ್ವಾಮೀಜಿಯವರ ಪತ್ರಕ್ಕೆ ವಿದ್ಯಾನಂದರು ಯಾವ ಪ್ರತಿಕ್ರಿಯೆಯನ್ನು ತೋರಿಸು ತ್ತಾರೆ ? ಜನರು ಇದಕ್ಕೆಲ್ಲಾ ಕರ್ಮಯೋಗಿಗಳ ಕರ್ಮ ಎನ್ನುತ್ತಾರೆಯೇ?

## ವ್ಯವಸ್ಥಾಪಕರಾರು ?

ಚಾರುಕೀರ್ತಿ ಸ್ವಾಮೀಜಿಯವರ 26–8–79 ರ ಪತ್ರವನ್ನು ಸೂಕ್ಷ್ಮವಾಗಿ ಪರಿ ಶೀಲಿಸಿದಾಗ ವಿದ್ಯಾನಂದರ ಕರ್ನಾಟಕದ ಶ್ರೀವಿಹಾರ ಸ್ವತಃ ವಿದ್ಯಾನಂದ ಮುನಿಗಳೇ ರೂಪಿಸಿದ ಯೋಜನೆಯಂತೆ ನಡೆದ ಶ್ರೀವಿಹಾರವೆಂದೂ, ಎಲ್ಲೆಲ್ಲಿ ಅವರಿಗೆ ಸ್ವಾಗತ ಸಮಾರಂಭಗಳು ಮತ್ತು ಮೆರವಣಿಗೆಗಳು ನಡೆದಿವೆಯೋ ಅಲ್ಲೆಲ್ಲಾ ವಿದ್ಯಾನಂದರು ಆಸಕ್ತಿ ವಹಿಸಿ ಏರ್ಪಾಡುಗಳನ್ನು ತಮ್ಮ ಮಧ್ಯವರ್ತಿಗಳ ಮೂಲಕವಾಗಿ ನಿರ್ದೇಶಿಸಿದ್ದಾರೆಂದೂ ಹೇಳಬಹುದು ಹೀಗಾದಾಗ ವಿದ್ಯಾನಂದರನ್ನು ಕರ್ನಾಟಕಕ್ಕೆ ಆಹ್ವಾನಿಸುವವರು ಮತ್ತು ಅವರ ಸ್ವಾಗತ ಸಮಾರಂಭಗಳು, ಮೆರವಣಿಗೆಗಳನ್ನು ವ್ಯವಸ್ಥೆ ಮಾಡಿದವರು ಅದಕ್ಕೆ ಕೇವಲ ನಿಮಿತ್ತ ಕಾರಣಕರ್ತರಾಗಿ ಉಳಿದು, ವಿದ್ಯಾನಂದರೇ ಸ್ವತಃ ತಮ್ಮ ಸಮಾರಂಭಗಳ ವ್ಯವಸ್ಥಾಪಕರಾಗುತ್ತಾರೆ

## ವಂತಿಗೆಯ ವಿಚಾರ :

ಚಾರುಕೀರ್ತಿಸ್ವಾಮಿಯವರ 26–8–79 ರ ಪತ್ರದಲ್ಲಿ ಪ್ರಸ್ತಾಪಿಸಿರುವ ವಂತಿಗೆ ಯ ವಿಚಾರಕ್ಕೆ ಬರೋಣ ವಂತಿಗೆ ಕೊಡುವ ಪ್ರಸ್ತಾಪ ಯಾವಾಗ ಬಂತು ? ಚಂದ್ರಯ್ಯನವರೂ ಮತ್ತು ಶಾಂತರಾಜರೂ ಆ ವಂತಿಗೆಗೆ ಯಾವ ಕಾರಣಗಳಿಂದ ಆಕ್ಷೇ ಪಣೆಗಳನ್ನು ಹಾಕಿದರು ? ಈ ಒಗ್ಗೆ ಕಮಿಟಿಯಲ್ಲಿ ಏನು ವ್ಯವಹಾರ ನಡೆಯಿತು ? ಅದು ಹೇಗೆ ಪರ್ಯವಸಾನವಾಯಿತು ? ಎಂಬ ವಿವರಗಳನ್ನು ತಿಳಿಯುವ ಕುತೂಹಲ ಉಂಟಾಗುವುದು ಸಹಜ ! ನಾನಾ ಬಗೆಯ ಪಗರಣಗಳಿಗೆ ಬೀಜರೂಪವಾಗಿ ಕಾರಣ ವಾದ ಈ ವಂತಿಗೆಯ ವಿಚಾರವನ್ನು ತಿಳಿದುಕೊಳ್ಳುವುದಕ್ಕೆ ಪೂರ್ವಭಾವಿಯಾಗಿ ಶ್ರವಣ ಬೆಳಗೊಳದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಸ್ವರೂಪವನ್ನೂ, ಆಡಳಿತವಿಧಾನವನ್ನೂ ಸ್ಥೂಲವಾಗಿ ತಿಳಿದುಕೊಳ್ಳುವುದು ಅಗತ್ಯ

## ಮೇನೇಜಿಂಗ್ ಕಮಿಟಿ :

ಶ್ರವಣಬೆಳಗೊಳ ಕ್ಷೇತ್ರದ ಆಡಳಿತವನ್ನು ನಡೆಸಲು ಕರ್ನಾಟಕ ಸರ್ಕಾರ 1967 ರಲ್ಲಿ " ಶ್ರವಣಬೆಳಗೊಳ ದಿಗಂಬರ ಜೈನ ಮುಜರಾಯಿ ಇನ್‌ಸ್ಟಿಟ್ಯೂಷನ್ಸ್ ಮೇನೇ

ಜಿಂಗ್ ಕಮಿಟಿ '' ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದೆ. ಇದನ್ನು ಸಂಕ್ಷಿಪ್ತವಾಗಿ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ ಎಂದು ಕರೆಯುತ್ತಾರೆ.

ಶ್ರವಣಬೆಳಗೊಳ ಮಠದ ಸ್ವಾಮಿಗಳು ಈ ಕಮಿಟಿಯ ಅಜೀವ ಛೇರ್ಮನ್ನರು, ಬೊಂಬಾಯಿನ ಅಖಿಲ ಭಾರತ ದಿಗಂಬರ ಜೈನ ತೀರ್ಥಕ್ಷೇತ್ರ ಕಮಿಟಿಯ ಅಧ್ಯಕ್ಷರು, ಶ್ರವಣಬೆಳಗೊಳದ ಕಮಿಟಿಗೆ ಅಜೀವ ಪದನಿಮಿತ್ತ ವೈಸ್-ಛೇರ್ಮನ್ನರು ಇವರ ಜೊತೆಗೆ ಕಮಿಟಿಯಲ್ಲಿ 24 ಜನ ಸದಸ್ಯರಿರುತ್ತಾರೆ ಈ ಸದಸ್ಯರೆಲ್ಲಾ ದಿಗಂಬರ ಜೈನ ಪಂಗಡಕ್ಕೆ ಸೇರಿದವರಾಗಬೇಕು ಇವರಲ್ಲಿ 12 ಜನ ಸದಸ್ಯರು ಕರ್ನಾಟಕದವರಾಗಿರಬೇಕು 9 ಜನ ಸದಸ್ಯರು ಕರ್ನಾಟಕೇತರ ರಾಜ್ಯಗಳಿಗೆ ಸೇರಿದವರಾಗಿರಬೇಕು 3 ಜನ ಸದಸ್ಯರು ಕರ್ನಾಟಕ ರಾಜ್ಯದ ಸಿವಿಲ್ ಸರ್ವಿಸ್‌ನಲ್ಲಿರಬೇಕು

ಪ್ರತಿಯೊಬ್ಬ ಸದಸ್ಯರ ಅಧಿಕಾರಾವಧಿ 9 ವರ್ಷಗಳು, $\frac{1}{3}$ ಭಾಗ ಸದಸ್ಯರು ನಿವೃತ್ತರಾಗುತ್ತಾಹೋಗಬೇಕು ನಿವೃತ್ತರಾದವರ ಪುನರಾಯ್ಕೆಗೆ ಅವಕಾಶವುಂಟು

ಕರ್ನಾಟಕ ಸರ್ಕಾರದ ಮುಜರಾಯಿ ಕಮಿಷನರ್‌ರವರು ಸ್ವಾಮಿಜಿಯವರ ಜೊತೆ ಸಮಾಲೋಚಿಸಿ ಕರ್ನಾಟಕ ಸರ್ಕಾರದ ಎಂಡೋಮೆಂಟ್ ಅಥವಾ ರೆವಿನ್ಯೂ ಡಿಪಾರ್ಟ್‌ಮೆಂಟ್‌ನಲ್ಲಿರುವ, ಜೈನ ದಿಗಂಬರ ಪಂಗಡಕ್ಕೆ ಸೇರಿದ ಒಬ್ಬ ಆಫೀಸರನ್ನು ಸಂಸ್ಥೆಯ ಕಾರ್ಯದರ್ಶಿಯಾಗಿ ನೇಮಿಸುತ್ತಾರೆ

ಸಂಸ್ಥೆಯಲ್ಲಿ ಕಾರ್ಯದರ್ಶಿಯವರ ಜವಾಬ್ದಾರಿ ತುಂಬಾ ಗುರುತರವಾದುದು ಕಮಿಟಿಯ ದಿನನಿತ್ಯದ ಆಡಳಿತ ಇವರಿಗೆ ಸೇರಿದ್ದು ಕ್ಷೇತ್ರಕ್ಕಾಗಿ ಯಾವುದೇ ಹಣವನ್ನು ಸ್ವೀಕರಿಸುವ ಹಕ್ಕು ಕಾರ್ಯದರ್ಶಿಯವರಿಗೆ ಅಥವಾ ಕಮಿಟಿ ಅಧಿಕಾರ ಕೊಟ್ಟವರಿಗೆ ಮಾತ್ರ ಸೇರಿದ್ದು. ಕ್ಷೇತ್ರದ ಅಭಿವೃದ್ಧಿ ಕಾರ್ಯಗಳಿಗಾಗಿ, ಹಣ ಖರ್ಚುಮಾಡುವ ಜವಾಬ್ದಾರಿಯೂ ಸಹ ಕಾರ್ಯದರ್ಶಿಯವರಿಗೆ ಮಾತ್ರ

ಸರ್ಕಾರ ತಾ॥ 12-1-67 ರಲ್ಲಿ ರಚಿಸಿರುವ ' ಶ್ರವಣಬೆಳಗೊಳ ದಿಗಂಬರ ಜೈನ ಮುಜರಾಯಿ ಇನ್‌ಸ್ಟಿಟ್ಯೂಷನ್ಸ್ ಮೇನೇಜ್‌ಮೆಂಟ್ ರೂಲ್ಸ್'ನ ಕಿರುಪುಸ್ತಕದ 10 ನೇ ನಿಯಮದಲ್ಲಿ ಕಾರ್ಯದರ್ಶಿಯವರ ಕರ್ತವ್ಯಗಳೆಲ್ಲಾ ವಿವರಿಸಲಾಗಿದೆ ಈ ಸಂದರ್ಭದಲ್ಲಿ ನೆನಪಿಟ್ಟುಕೊಳ್ಳಬೇಕಾದ ಒಂದು ಸಂಗತಿಯೆಂದರೆ ಜೈನಮಠದ ಸ್ವಾಮಿಜಿಯವರಿಗೆ ಮಠದ ಹೆಸರಿನಲ್ಲಿ ಕ್ಷೇತ್ರಕ್ಕಾಗಿ ಯಾವುದೇ ಹಣವನ್ನು ಸ್ವೀಕರಿಸಲು ಹಕ್ಕಿಲ್ಲ ವೆಂಬುದು ಮಠದ ಹೆಸರಿರುವ ರಶೀದಿ ಪುಸ್ತಕದಲ್ಲಿ ಕ್ಷೇತ್ರಕ್ಕಾಗಿ ಹಣವನ್ನು ಸಂಗ್ರಹಿಸಿದ್ದರೆ, ಅದು ಕಾನೂನಿಗೆ ವಿರುದ್ಧವಾದ ನಡವಳಿಕೆಯಾಗುತ್ತದೆ. ಕ್ಷೇತ್ರಕ್ಕಾಗಿ ಯಾವುದೇ

ರೀತಿಯ ಕಾಣಿಕೆಯನ್ನು ಸ್ವೀಕರಿಸುವ ಏಕೈಕ ಹಕ್ಕು ಕಾನೂನುಬದ್ಧವಾಗಿ ಕಮಿಟಿಗೆ ಮಾತ್ರ ಮೀಸಲು

ಕ್ಷೇತ್ರದ ದಿನನಿತ್ಯದ ಪೂಜೆಗಳ ವ್ಯವಸ್ಥೆಯನ್ನೂ ವಾರ್ಷಿಕ ರಥೋತ್ಸವ ಮುಂತಾಗಿ ಮತ್ತಿತರ ಪೂಜೆಗಳ ವ್ಯವಸ್ಥೆಯನ್ನೂ, ಮತ್ತು ದ್ವಾದಶವರ್ಷಗಳಿಗೊಮ್ಮೆ ನಡೆಯುವ ಮಹಾಮಸ್ತಕಾಭಿಷೇಕದ ವ್ಯವಸ್ಥೆಯನ್ನೂ ಮಾಡುವ ಪೂರ್ಣ ಜವಾಬ್ದಾರಿ ಕಮಿಟಿಗೆ ಮಾತ್ರ ಸೇರಿದ್ದು ಕ್ಷೇತ್ರದ ದೇವಾಲಯಗಳ ಜೀರ್ಣೋದ್ಧಾರ ಕಾರ್ಯ ಕ್ಷೇತ್ರದ ಸ್ಥಿರ ಮತ್ತು ಚರ ಆಸ್ತಿಗಳ ವಹಿವಾಟನ್ನು ನೋಡಿಕೊಳ್ಳುವ ಹೊಣೆಗಾರಿಕೆ ಕಮಿಟಿಗೆ ಮಾತ್ರ ಸೇರಿದ್ದು

ಕ್ಷೇತ್ರದ ಸಾಮಾಜಿಕ, ಧಾರ್ಮಿಕ ಮತ್ತು ಪರೋಪಕಾರಿ ಚಟುವಟಿಕೆಗಳನ್ನು ಕಮಿಟಿ ಏರ್ಪಡಿಸಬೇಕು. ಕ್ಷೇತ್ರದ ಪರವಾಗಿ ದಾನ, ದತ್ತಿ, ಕಾಣಿಕೆ, ವಂತಿಗೆ ಮುಂತಾದವುಗಳನ್ನು ಕಮಿಟಿ ಮಾತ್ರ ಸ್ವೀಕರಿಸಬೇಕು ಡಬ್ಬಿ, ಗೋಲಕಗಳ ಹಣವೆಲ್ಲಾ ಕಮಿಟಿಗೆ ಜಮಾ ಆಗಬೇಕು

ಕಮಿಟಿಗಾಗಿ ರಚಿಸಿರುವ ಪುಸ್ತಕದ 8 ನೇ ನಿಯಮದಲ್ಲಿ ಮೇಲಿನ ಹೊಣೆಗಾರಿಕೆಗಳನ್ನೆಲ್ಲಾ ವಿವರವಾಗಿ ವಿವರಿಸಲಾಗಿದೆ

ಕಾರ್ಯದರ್ಶಿಯವರು ಕಮಿಟಿಯ ಜಮಾಖರ್ಚುಗಳ ಸರಿಯಾದ ಲೆಕ್ಕಪತ್ರಗಳನ್ನು ಸ್ಪಷ್ಟವಾದ ರಶೀದಿಗಳ ಸಮೇತ ಸಂರಕ್ಷಿಸಿಡಬೇಕು (ನಿಯಮ 10 ರಲ್ಲಿನ ಉಪನಿಯಮ 5) ಕ್ರಮಬದ್ಧವಾಗಿ ಪ್ರತಿವರ್ಷ ಆಡಿಟ್ ಆಗಬೇಕು (ನಿಯಮ 14)

ಸಂಸ್ಥೆಯ ಸದಸ್ಯರು ನಿವೃತ್ತರಾದಾಗ, ಇಲ್ಲವೆ ಸ್ಥಾನ ತೆರವಾದಾಗ ಆ ಸ್ಥಾನಗಳನ್ನು ಧರ್ಮನ್ನರ ಜೊತೆ ಸಮಾಲೋಚನೆ ನಡೆಸುವುದರ ಮೂಲಕ ಸರ್ಕಾರ ತುಂಬುತ್ತದೆ

ಇದುವರೆಗೂ ವಿವರಿಸಿದ ಇಷ್ಟು ವಿಷಯಗಳು ಎಸ್ ಡಿ ಜೆ ಎಂ ಐ ಮ್ಯಾನೇಜಿಂಗ್ ಕಮಿಟಿಯ ಅಸ್ತಿತ್ವದ ಮುಖ್ಯ ಸ್ವರೂಪಗಳು ಮತ್ತು ಕಾರ್ಯನಿರ್ವಹಣೆಯ ವಿಧಾನಗಳಾಗಿವೆ. ಕ್ಷೇತ್ರಕ್ಕೆ ಬರುವ ಆದಾಯ ಕ್ರಮಬದ್ಧವಾದ ವ್ಯವಸ್ಥೆಯಿಲ್ಲದೆ ಪೋಲಾಗದಿರಲಿ ಎಂಬ ಸದುದ್ದೇಶದಿಂದ ಈ ಬಗೆಯ ವ್ಯವಸ್ಥೆಯುಳ್ಳ ಕಮಿಟಿಯ ರಚನೆಯಾಗಿದೆ

ಈ ಬಗೆಯ ಕಮಿಟಿಯ ಸ್ಥಾಪನೆಗೆ ಕಾರಣಕರ್ತರಾದ ಶಿಲ್ಪಿಗಳು ಬೇರಾರೂ ಅಲ್ಲ ಆ ಸಮಯದಲ್ಲಿ ಅಖಿಲ ಭಾರತ ದಿಗಂಬರ ಜೈನ ತೀರ್ಥಕ್ಷೇತ್ರ ಕಮಿಟಿಯ ಶ್ರವಣ

ಬೆಳಗೊಳ ಶಾಖೆಯ ಕಾರ್ಯದರ್ಶಿಯಾಗಿದ್ದ ಸಿ ಬಿ ಎಂ ಚಂದ್ರಯ್ಯನವರೇ ಆವರು ಚಂದ್ರಯ್ಯನವರು ಕಮಿಟಿ ಸ್ಥಾಪನೆಯಾದಾಗಿನಿಂದಲೂ ಆದರ ಸದಸ್ಯರಾಗಿದ್ದರು ಎಸ್ ಪಿ ಶಾಂತರಾಜ್‌ರವರು ತಾ॥ 6, 7 ಡಿಸೆಂಬರ್ 77 ರಲ್ಲಿ ಪ್ರಪ್ರಥಮವಾಗಿ ಕಮಿಟಿಯ ಸದಸ್ಯರಾದವರು.

ಈ ಸದಸ್ಯರಿಬ್ಬರೂ ಕಮಿಟಿಯ ಸಭೆಗಳಲ್ಲಿ ತತ್ವನಿಷ್ಠರಾಗಿ ಸಕ್ರಿಯವಾಗಿ ಆತ್ಮ ಸಾಕ್ಷಿಗೆ ಅನುಗುಣವಾಗಿ ಭಾಗವಹಿಸುವ ವ್ಯಕ್ತಿಗಳು ಇವರಿಬ್ಬರೂ ' ಮುನಿ ವಿದ್ಯಾ ನಂದಜಿ ಮಹಾರಾಜರ ದಕ್ಷಿಣಪಥ ವಿಹಾರ ಸ್ವಾಗತ ಸಮಿತಿ'ಗೆ ಕಮಿಟಿಯು ಹಣವನ್ನು ಮಂಜೂರು ಮಾಡುವುದಕ್ಕೆ ಯಾವ ಕಾರಣದಿಂದಾಗಿ ಆಕ್ಷೇಪಣೆಗಳನ್ನು ವ್ಯಕ್ತಪಡಿಸಿದರು ಎಂಬುದನ್ನು ಮುಂದೆ ಗಮನಿಸಬಹುದು

## ಕಮಿಟಿಯ ನಡವಳಿಕೆ ಪತ್ರ :

ವಿದ್ಯಾನಂದರು ಬೆಳ್ಳೂರಿನಲ್ಲಿ ವಿವಾದಾಸ್ಪದ ಮಾತುಗಳನ್ನು ಆಡಲು ಕಾರಣವಾದ ಹಿನ್ನೆಲೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ತಾ॥ 17-3-1979ರ ಸಭೆಯ ನಡವಳಿಕೆ ಪತ್ರದಿಂದ ಪ್ರಾರಂಭವಾಗುತ್ತದೆ

ತಾ॥ 17-3-79 ರಂದು ಶ್ರವಣಬೆಳಗೊಳದಲ್ಲಿ ನಡೆದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಸಭೆಯ ನಡವಳಿಕೆಗಳನ್ನು ವರದಿ ಮಾಡುವ ಪತ್ರದ ಪ್ರತಿ ಗಳನ್ನು, ಕಮಿಟಿಯ ಕಾರ್ಯದರ್ಶಿಯವರು ತಾ॥ 20-5-1979 ರಲ್ಲಿ ಎಲ್ಲಾ ಸದಸ್ಯ ರಿಗೂ ಕಳುಹಿಸಿದರು ಚಂದ್ರಯ್ಯನವರಿಗೂ ಇದು ತಲುಪಿತು ಅವರು ಇದರಲ್ಲಿ ಒಂದು ಸಂಗತಿಯನ್ನು ಗಮನಿಸಿದರು ಅಡಿಷನಲ್ ಅಜೆಂಡಾ ವಿಭಾಗದ ಕಡೆಯಲ್ಲಿ ಸೂಚನೆ ಎಂಬುದರಲ್ಲಿ

> " ಕಮಿಟಿಯು ವಿವರವಾದ ಚರ್ಚೆ ನಡೆಸಿದ ನಂತರ, ಮುನಿ ವಿದ್ಯಾನಂದಜಿ ಮಹಾರಾಜರ ದಕ್ಷಿಣ ಪಥ ವಿಹಾರ ಸ್ವಾಗತ ಸಮಿತಿಗೆ 25,000 ರೂಪಾಯಿಗಳನ್ನು ಒದಗಿಸಲಾಗಿದೆ "

ಎಂಬ ಬರವಣಿಗೆಯು ಚಂದ್ರಯ್ಯನವರ ಪೂರ್ಣಗಮನ ಸೆಳೆಯಿತು ಚಂದ್ರಯ್ಯ ನವರಿಗೆ ಆಶ್ಚರ್ಯವಾಯಿತು ಏಕೆಂದರೆ ಈ ವಿಷಯ ತಾ॥ 17-3-1979 ರ ಸಭೆ ಯಲ್ಲಿ ಎಂ ಸಿ ಅನಂತರಾಜಯ್ಯನವರು ತಾ॥ 12-3-1979 ರಂದು ಕಮಿಟಿಗೆ ಕಳು ಹಿಸಿದ್ದ ಪತ್ರದಿಂದಾಗಿ ಚರ್ಚೆಗೆ ಬಂದಿದ್ದರೂ, ದಕ್ಷಿಣ ಪಥ ವಿಹಾರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವುದನ್ನು ಕಮಿಟಿಯು ಒಪ್ಪಿರಲಿಲ್ಲ ! ಏಕೆಂದರೆ ಸ್ವಾಗತ ಸಮಿತಿಗೆ ಹಣ ಕೊಟ್ಟರೆ. ಆ ಹಣ ಶ್ರವಣಬೆಳಗೊಳ ಕ್ಷೇತ್ರ ಬಿಟ್ಟು ಇತರ ಕಡೆಗಳಲ್ಲಿ

ನಡೆಯುವ ಸಮಾರಂಭಗಳಿಗೆ ವೆಚ್ಚವಾಗುತ್ತಿತ್ತು ಹಾಗೆ ಕ್ಷೇತ್ರದ ಹೊರಗಡೆ ಕ್ಷೇತ್ರದ ಹಣವನ್ನು ವೆಚ್ಚಮಾಡಲು ಕಮಿಟಿಯ ನಿಯಮಗಳಲ್ಲಿ ಅವಕಾಶವಿಲ್ಲ ಇದರಿಂದಾಗಿ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವ ಎಂ ಸಿ ಅನಂತರಾಜಯ್ಯನವರ ಕೋರಿಕೆಯನ್ನು ಕಮಿಟಿ ಒಪ್ಪಿರಲಿಲ್ಲ ಆದರೆ ವಿದ್ಯಾನಂದರಿಗೆ ಶ್ರವಣಬೆಳಗೊಳದಲ್ಲಿಯೇ ನಡೆಯುವ ಸ್ವಾಗತ ಸಮಾರಂಭಕ್ಕಾಗಿ 25,000 ರೂಪಾಯಿಗಳನ್ನು ವೆಚ್ಚಮಾಡಲು ಯಾವ ಸದಸ್ಯರೂ ಆಕ್ಷೇಪಿಸಿರಲಿಲ್ಲ ಆದರೆ ಈ ಹಣವನ್ನು ಸರ್ಕಾರದಿಂದ ಪೂರ್ವ ಭಾವಿಯಾಗಿ ಅನುಮತಿಯನ್ನು ಪಡೆದನಂತರ ಕಮಿಟಿಯೇ ನೇರವಾಗಿ ವೆಚ್ಚ ಮಾಡ ಬೇಕೆಂದು ಚಂದ್ರಯ್ಯನವರು ಸಭೆಯಲ್ಲಿ ಅಭಿಪ್ರಾಯಪಟ್ಟಿದ್ದರು ಏಕೆಂದರೆ ಕಮಿಟಿಯ ನಿಯಮಗಳ ಪ್ರಕಾರ ಕಮಿಟಿಯ ಹಣವನ್ನು ಕಮಿಟಿಯ ಸಂಪರ್ಕವಿಲ್ಲದ ಬೇರೊಂದು ಸಮಿತಿಗೆ ವರ್ಗಾಯಿಸಲು ಅವಕಾಶವಿರಲಿಲ್ಲ

ತಾ॥ 17–3–79 ರ ಸಭೆಯಲ್ಲಿ ಮೇಲಿನಂತೆ ಸಂಗತಿಗಳು ನಡೆದಿರುವಾಗ ಅವರ ನಡವಳಿಕೆಗಳ ಪತ್ರದಲ್ಲಿ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡಿದೆಯೆಂಬ ನಿರ್ಣಯ ಹೇಗೆ ಸೇರಿಹೋಯಿತು ! ಇದು ಅಕ್ರಮವಲ್ಲವೆ ? ಈ ರೀತಿ ಆಲೋಚಿಸಿದ ಚಂದ್ರಯ್ಯನವರು ತಾ॥ 24–5–79 ರಲ್ಲಿ ಕಾರ್ಯದರ್ಶಿಯವರಿಗೆ ಒಂದು ಪತ್ರ ಬರೆದು ಆ ನಿರ್ಣಯಕ್ಕೆ ಆಕ್ಷೇಪಣೆಗಳನ್ನು ಹಾಕಿದರು ಅದಕ್ಕಾಗಿ ಸ್ಪಷ್ಟೀಕರಣವನ್ನು ಕೇಳಿದರು

## ಚಂದ್ರಯ್ಯನವರ ಆಕ್ಷೇಪಣೆಗಳು :

ಚಂದ್ರಯ್ಯನವರು ವ್ಯಕ್ತಪಡಿಸಿದ ಆಕ್ಷೇಪಣೆಗಳ ಮುಖ್ಯಾಂಶಗಳು ಹೀಗಿವೆ ಮಾನ್ಯರೆ,

ವಿದ್ಯಾನಂದರ ಸ್ವಾಗತ ಸಮಾರಂಭಗಳಿಗಾಗಿ ಹಣವನ್ನು ಒದಗಿಸಬೇಕೆಂದು ಪ್ರಾರ್ಥಿಸಿ 'ಮುನಿ ವಿದ್ಯಾನಂದಜಿ ಮಹಾರಾಜರ ದಕ್ಷಿಣ ಪಥ ವಿಹಾರ ಸ್ವಾಗತ ಸಮಿತಿ'ಯಿಂದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ಯಾವುದಾದರೂ ಪತ್ರ ಬಂದಿದೆಯೆ ಎಂಬುದನ್ನು ವಿಶದಪಡಿಸಿ ಬಂದಿದ್ದರೆ ಆ ಪತ್ರದ ಪ್ರತಿಯೊಂದನ್ನು ಬೇಗನೆ ಕಳುಹಿಸಿಕೊಡಿ ಎಸ್ ಡಿ ಜೆ ಎಂ ಐ, ಮೇನೇಜಿಂಗ್ ಕಮಿಟಿಯು ಚರ್ಚೆಮಾಡಿ, ಮೇಲೆ ಸೂಚಿಸಿರುವ ಸ್ವಾಗತ ಸಮಿತಿಗೆ ಹಣ ಒದಗಿಸಿದೆಯೆಂದು ಹೇಳಿರುವುದು ಸುಳ್ಳು ! ಸ್ವಾಗತ ಸಮಿತಿಗೆ 25,000 ರೂಪಾಯಿಗಳನ್ನು ಒದಗಿಸಲಾಗಿದೆ ಎಂದು ಹೇಳಿರುವುದೂ ಸಹ ಸುಳ್ಳು.

ನಾನು ಇನ್ನೊಮ್ಮೆ ಈ ಮಾತುಗಳನ್ನು ಹೇಳಲು ಇಷ್ಟ ಪಡುತ್ತೇನೆ. ತಾ॥ 17–3–79 ರಂದು 10–30 ಕ್ಕೆ ನಡೆದ ಎಸ್ ಡಿ ಜೆ ಎಂ ಐ ಮೇನೇಜಿಂಗ್

ಕಮಿಟಿಯ ಮೀಟಿಂಗಿನ ನಡವಳಿಕೆಗಳ ಪ್ರತಿಯಲ್ಲಿ ' ಸೂಚನೆ ' ಎಂಬಲ್ಲಿ ಹೇಳಿರುವ ಮಾತುಗಳು ಸಂಪೂರ್ಣವಾಗಿ ಅಸತ್ಯ.

ಕಾರ್ಯದರ್ಶಿಯವರು ಮೇಲೆ ಪ್ರಸ್ತಾಪಿಸಿರುವ ಪರಿಶೀಲನೆಗಳಿಗೆ ತೃಪ್ತಿಕರವಾದ ವಿವರಣೆಗಳನ್ನು ನೀಡಬೇಕೆಂದು ಪ್ರಾರ್ಥಿಸುತ್ತೇನೆ

ಮೇಲೆ ಪ್ರಸ್ತಾಪಿಸಿರುವ ಆಕ್ಷೇಪಣೆಗಳಿಗೆ ಪ್ರತಿಕೂಲವಾಗಿ ಏನಾದರೂ ಕಾರ್ಯ ನಿರ್ವಹಿಸಿದರೆ ಅದಕ್ಕೆ ಕಾರ್ಯದರ್ಶಿಯವರೇ ಪೂರ್ಣವಾಗಿ ಜವಾಬ್ದಾರರಾಗಬೇಕಾ ಗುತ್ತದೆ ''

ತಾ|| 17–3–79 ರ ಕಮಿಟಿಯ ನಡವಳಿಕೆ ಪತ್ರದ ಪ್ರತಿಗೆ ಚಂದ್ರಯ್ಯನವರು ಹೀಗೆ ಪ್ರತಿಕ್ರಿಯೆಗಳನ್ನು ತೋರಿಸಿದರು

**ಶಾಂತರಾಜರ ಆಕ್ಷೇಪಣೆಗಳು :**

ತಾ|| 17–3–79 ರ ಕಮಿಟಿಯ ಸಭೆಯ ನಡವಳಿಕೆಗಳ ಪ್ರತಿ ಶಾಂತರಾಜರಿಗೂ ತಲುಪಿತು ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವ ವಿಚಾರ ಅವರ ಗಮ ನಕ್ಕೂ ಬಂತು

ಶಾಂತರಾಜರು ಕಾರ್ಯದರ್ಶಿಯವರಿಗೆ ಪತ್ರ ಬರೆಯುವುದಕ್ಕೆ ಮುಂಚೆ ಕಮಿಟಿಯ ನಿಯಮಗಳ ಪುಸ್ತಕವನ್ನು ಎಚ್ಚರಿಕೆಯಿಂದ ಪರಿಶೀಲಿಸಿದರು ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡಿದರೆ ಅದು ಕಮಿಟಿಗಾಗಿ ಸರ್ಕಾರ ರೂಪಿಸಿರುವ ನಿಯಮಗಳನ್ನು ಗಾಳಿಗೆ ತೂರಿದಂತಾಗುತ್ತದೆ ಎಂಬಂಶ ಶಾಂತರಾಜರಿಗೆ ಮನವರಿಕೆ ಯಾಯಿತು ಆದರೂ ಈ ವಿಷಯದಲ್ಲಿ ಕಾನೂನು ತಜ್ಞರ ಸಲಹೆ ಪಡೆಯಬೇಕೆಂದು ಅವರು ವಕೀಲರ ಜೊತೆಯೂ ಸಮಾಲೋಚನೆ ನಡೆಸಿದರು ವಕೀಲರೂ ಸಹ ಇವರ ಅಭಿಪ್ರಾಯವನ್ನು ಅನುಮೋದಿಸಿದರು

ಶಾಂತರಾಜರಿಗೆ ಇಷ್ಟಾದರೂ ಸಮಾಧಾನವಾಗದೆ ಈ ವಿಷಯದಲ್ಲಿ ಇನ್ನೂ ಹೆಚ್ಚು ನುರಿತ ಮೇಧಾವಿಗಳಾದ ಕಾನೂನು ತಜ್ಞರಿಂದ ಸಲಹೆ ಕೇಳುವ ಅಪೇಕ್ಷೆಯಾಯಿತು

ಈ ವಿಷಯದ ಬಗೆಗೆ ಶಾಂತರಾಜರು ತಾ|| 25–5–1979 ರಂದು ಜಸ್ಟಿಸ್ ಟಿ ಕೆ ತುಕೋಳ್‌ರವರಿಗೆ ಒಂದು ಪತ್ರ ಬರೆದರು (ಶ್ರೀ ಟಿ ಕೆ ತುಕೋಳ್‌ರವರು ಕಮಿಟಿಯ ಸದಸ್ಯರೂ ಹೌದು ಕಾರಣಾಂತರಗಳಿಂದ ಅವರು 17–3–1979 ರ ಸಭೆಗೆ ಆಗಮಿಸಿರಲಿಲ್ಲ) ಪತ್ರದಲ್ಲಿ ಹಣಮಂಜೂರಾತಿ ನಿರ್ಣಯದ ವಿಚಾರ ಪ್ರಸ್ತಾಪಿಸಿ, ತಮ್ಮ ಅನಿಸಿಕೆಗಳನ್ನು ವಿವರಿಸಿ ಅದರ ಬಗ್ಗೆ ಅವರ ಅಭಿಪ್ರಾಯ ಮತ್ತು ಸಲಹೆಗಳಿಗಾಗಿ ಪ್ರಾರ್ಥಿಸಿದರು

ಜಸ್ಟಿಸ್ ಟಿ ಕೆ ತುಕೋಳ್‌ರವರೂ ಸಹ ಶಾಂತರಾಜರ ಅಭಿಪ್ರಾಯಗಳನ್ನು ಒಪ್ಪಿ ಈ ವಿಷಯವನ್ನು ಕಮಿಟಿಯ ಮುಂದಿನ ಸಭೆಯಲ್ಲಿ ಸರಿಪಡಿಸಬಹುದೆಂದು ಸಲಹೆ ನೀಡಿದರು

ಶಾಂತರಾಜರಿಂದ ಇಷ್ಟು ಪೂರ್ವಭಾವಿ ಸಿದ್ಧತೆಯಾದ ಮೇಲೆ ತಾ॥ 5–6–79 ರಂದು ಕಮಿಟಿಯ ಕಾರ್ಯದರ್ಶಿಯವರಿಗೆ ತಮ್ಮ ಆಕ್ಷೇಪಣೆಗಳನ್ನು ಸಲ್ಲಿಸಿದರು ಪತ್ರದ ಸಾರಾಂಶ ಹೀಗಿದೆ

' ಮಾನ್ಯರೆ, ನಾನು ತಾ॥ 17–3–1979 ರಂದು ನಡೆದ ಮೇನೇಜಿಂಗ್ ಕಮಿಟಿಯ ಸಭೆಯ ಟಿಪ್ಪಣಿಗಳ ಕಡೆ ತಮ್ಮ ಗಮನ ಸೆಳೆಯುತ್ತೇನೆ ಅದರಲ್ಲಿ ವಿಷಯ 7 ಮತ್ತು 'ಸೂಚನೆ' ಎಂಬುದರ ಅಡಿಯಲ್ಲಿರುವ ನಿರ್ಣಯಗಳನ್ನು ಸೇರಿಸುವುದಕ್ಕೆ ತೆಗೆದುಕೊಂಡಿರುವ ಕ್ರಮಗಳ ಔಚಿತ್ಯದ ಬಗೆಗೆ ನನಗೆ ಸಂದೇಹ ಉದ್ಭವವಾಗಿದೆ ಈ ವಿಷಯದ ಬಗೆಗೆ ಜಸ್ಟಿಸ್ ಟಿ ಕೆ ತುಕೋಳ್‌ರವರು ಅಮೂಲ್ಯವಾದ ಅಭಿಪ್ರಾಯಗಳನ್ನು ನೀಡಿದ್ದಾರೆ ಆ ಸಂಬಂಧಪಟ್ಟ ಭಾಗಗಳನ್ನು ಇಲ್ಲಿ ಪುನರ್ಲೇಖಿಸುವುದರ ಮೂಲಕ ನಿಮ್ಮ ಅವಗಾಹನೆಗೆ ತರುತ್ತಿದ್ದೇನೆ

> ನಿಮ್ಮ ಪತ್ರ ನನಗೆ ತಲುಪಿದೆ ತಮ್ಮ ಅಭಿಪ್ರಾಯವನ್ನು ನಾನು ಒಪ್ಪುತ್ತೇನೆ ಈ ಆಕ್ಷೇಪಣೆಯನ್ನು ಸಭೆಯ ಸಮಯದಲ್ಲೇ ಏತಕ್ಕೆ ಪ್ರಸ್ತಾಪಿಸಲಿಲ್ಲವೆಂಬುದು ನನಗೆ ತಿಳಿಯಲಿಲ್ಲ ಎಸ್ ಡಿ ಜೆ ಎಂ ಐ ಕಮಿಟಿಯ ಕಾರ್ಯದರ್ಶಿಯವರು, ನಡವಳಿಕೆಗಳ ಕರಡು ಪ್ರತಿಯನ್ನು ಶ್ರೀ ಶ್ರೇಯಾಂಸ ಪ್ರಸಾದ್‌ಜೈನ್ ರವರು ಕಳುಹಿಸಿದರೆಂದು ನನಗೆ ಹೇಳಿದರು ಹೇಗಾದರಾಗಲಿ ಈ ವಿಷಯ ಕಮಿಟಿಯ ಒಂದು ಅಧಿಕಾರವ್ಯಾಪ್ತಿಗೊಳಪಟ್ಟಿರುವುದರಿಂದ ಮುಂದಿನ ಸಭೆಯಲ್ಲಿ ನಾವು ಈ ವಿಷಯವನ್ನು ಸರಿಪಡಿಸೋಣ '

ಈ ಪರಿಸ್ಥಿತಿಯಿಂದಾಗಿ ಮೇಲಿನ ವಿಷಯವನ್ನು ಮುಂಬರುವ ಸಭೆಯ ಅಜೆಂಡಾದಲ್ಲಿ ದಯವಿಟ್ಟು ಸೇರಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ ಇದರಿಂದಾಗಿ ಸದಸ್ಯರು ಈ ವಿಷಯವನ್ನು ವಿವರವಾಗಿ ಚರ್ಚಿಸಿ ಒಂದು ಸರಿಯಾದ ತೀರ್ಮಾನಕ್ಕೆ ಬರಲು ಅವಕಾಶವಾಗುತ್ತದೆ ''

### ಆಕ್ಷೇಪಣೆಗಳು ದಾಖಲಾದ ನಂತರ :

ಚಂದ್ರಯ್ಯನವರೂ ಶಾಂತರಾಜರೂ ವಿದ್ಯಾನಂದರ ಸ್ವಾಗತ ಸಮಿತಿಗೆ ಹಣವನ್ನು ಮಂಜೂರು ಮಾಡಿದ ನಡವಳಿಕೆಯ ಪತ್ರದ ನಿರ್ಣಯಕ್ಕೆ ಈ ರೀತಿ ಆಕ್ಷೇಪಣೆಗಳನ್ನು ಲಿಖಿತ ಮೂಲಕ ಕಳುಹಿಸಿದರು

ತಾ॥ 3–6–1979 ರಂದು ಕಾರ್ಯದರ್ಶಿಯವರಿಂದ ಈ ಬಗ್ಗೆ ಚಂದ್ರಯ್ಯ ನವರಿಗೆ ಒಂದು ಪತ್ರ ಬಂತು. ಅದರಲ್ಲಿ ಮೇನೇಜಿಂಗ್ ಕಮಿಟಿ ಮತ್ತು ವರ್ಕಿಂಗ್ ಕಮಿಟಿಯ ಸಂಬಂಧಪಟ್ಟ ನಡವಳಿಕೆಗಳೆರಡೂ ಛೇರ್ಮನ್ನರು ಮತ್ತು ವೈಸ್‌ಛೇರ್ಮನ್ನರು ಗಳಿಂದ ಬಂದುವೆಂದು ಹೇಳಿ ಚಂದ್ರಯ್ಯನವರ ಪರಿಶೀಲನೆಗಳನ್ನು ಅಧ್ಯಕ್ಷರ ಗಮನಕ್ಕೆ ತರುವುದಾಗಿಯೂ ಅವರಿಂದ ಮಾರ್ಗದರ್ಶನಗಳನ್ನು ಪಡೆಯುವುದಾಗಿಯೂ ಹೇಳಿದ್ದಾರೆ

ನಂತರ ಚಂದ್ರಯ್ಯನವರ ಮತ್ತು ಶಾಂತರಾಜರ ಆಕ್ಷೇಪಣೆಗಳನ್ನು ಮುಂದೆ ನಡೆಯಲಿರುವ ಸಭೆಯ ಅಜೆಂಡಾಪಟ್ಟಿಯಲ್ಲಿ ಸೇರಿಸಲಾಯಿತು

ಕಮಿಟಿಯ ಮುಂದಿನ ಸಭೆ ತಾ॥ 3–8–79 ರಂದು ಬೆಂಗಳೂರಿನಲ್ಲಿ ನಡೆಯ ತೊಡಗಿ, 4–8–79 ರಂದು ಶ್ರವಣಬೆಳಗೊಳದಲ್ಲಿ ಮುಂದುವರೆದು ಮುಕ್ತಾಯ ವಾಯಿತು

ಈ ಸಭೆಯ ನಡವಳಿಕೆಗಳ ಪತ್ರದಲ್ಲಿ

" ಈ ಸಭೆಯಲ್ಲಿ ಆಕ್ಷೇಪಣೆಗಳ ವಿಚಾರ ಪ್ರಸ್ತಾಪಕ್ಕೆ ಬಂತು ಪತ್ರಗಳನ್ನು ವಿವರವಾಗಿ ಚರ್ಚಿಸಲಾಗಿದೆ " ಎಂದು ನಿರ್ಣಯದಲ್ಲಿ ಹೇಳಿ " ಮುನಿಶ್ರೀ ವಿದ್ಯಾನಂದಜಿ ಮಹಾರಾಜರ ದಕ್ಷಿಣಪಥ ವಿಹಾರ ಸಮಿತಿಗೆ ಹಣ ಒದಗಿಸುವ ವಿಚಾರದ ಬಗೆಗೆ ಆ ವಿಷಯ ಮಹಾಮಸ್ತಕಾಭಿಷೇಕ ಆಚರಣೆಯ ಕಮಿಟಿಗೆ ಸಂಬಂಧಿಸಿದ್ದು ಆದಾಗಲೇ ಆ ಕಮಿಟಿಯಲ್ಲಿ ತೀರ್ಮಾನವಾಗಿದೆ " ಎಂದು ಮುಕ್ತಾಯ ಮಾಡಲಾಗಿದೆ

ನಡವಳಿಕೆ ಪತ್ರದಲ್ಲಿ ಬರೆದಿರುವ ಮೇಲಿನ ನಿರ್ಣಯ ಗೊಂದಲಗಳಿಗೆ ಅವಕಾಶ ಮಾಡಿಕೊಡುತ್ತದೆ ಇದರಲ್ಲಿ ಸದಸ್ಯರಿಬ್ಬರ ಆಕ್ಷೇಪಣೆಗಳಿಗೆ ಸಮಂಜಸವಾದ ವಿವರಣೆಯನ್ನು ನೀಡಿಲ್ಲ ಮಹಾಮಸ್ತಕಾಭಿಷೇಕ ಕಾರ್ಯಕ್ರಮಗಳಿಗಾಗಿ ಈ ಹಿಂದೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯು ರಚಿಸಿರುವ ವರ್ಕಿಂಗ್ ಕಮಿಟಿಯ 17–3–79 ನಡವಳಿಕೆ ಪತ್ರದಲ್ಲಿ ' ಏಲಾಚಾರ್ಯ ಮುನಿಶ್ರೀ ವಿದ್ಯಾನಂದಜಿ ಮಹಾರಾಜರ ಸ್ವಾಗತ ಸಮಾರಂಭಕ್ಕಾಗಿ 25 ಸಾವಿರ ರೂಪಾಯಿಗಳ ಹಣವನ್ನು ಮಂಜೂರು ಮಾಡಲಾಗಿದೆ' ಎಂದು ಬರೆದಿದ್ದಾರೆ ವರ್ಕಿಂಗ್ ಕಮಿಟಿಯ ನಡವಳಿಕೆ ಪತ್ರ ಹೇಳಿರುವ ಸ್ವಾಗತಸಮಾರಂಭವು ಕೇವಲ ಶ್ರವಣಬೆಳಗೊಳದಲ್ಲಿ ನಡೆಯಲಿರುವ ಸ್ವಾಗತಸಮಾರಂಭಕ್ಕೆ ಮಾತ್ರ ಅನ್ವಯಿಸುತ್ತದೆಯೇ ಹೊರತು ಇತರ ಕಡೆಗಳಿಗಲ್ಲ ಆದ್ದರಿಂದ ' ದಕ್ಷಿಣ ಪಥ ವಿಹಾರ ಸಮಿತಿಗೆ ಹಣ ಒದಗಿಸುವ ವಿಚಾರದ ಬಗೆಗೆ ' ಎಂಬ ಮಾತು ಸುಳ್ಳಾಗುತ್ತದೆ

ಇಷ್ಟಲ್ಲದೆ ' ಈ ವಿಷಯ ಮಹಾಮಸ್ತಕಾಭಿಷೇಕ ಆಚರಣೆಯ ಕಮಿಟಿಗೆ

ಸಂಬಂಧಿಸಿದ್ದು ಆದಾಗಲೇ ಆ ಕಮಿಟಿಯಲ್ಲಿ ತೀರ್ಮಾನವಾಗಿದೆ ' ಎಂದು ಮಾತೃಕಮಿಟಿಯಾದ ಮೇನೇಜಿಂಗ್ ಕಮಿಟಿಯಲ್ಲಿ ಹೇಳಿಬಿಟ್ಟರೆ ಆ ಹೇಳಿಕೆ ಕಾನೂನು ಬದ್ಧವಾದ ಹೇಳಿಕೆಯಾಗದೆ ಕಡುಮೂರ್ಖತನದ ಹೇಳಿಕೆಯಾಗುತ್ತದೆ ಏಕೆಂದರೆ ಸಬ್ ಕಮಿಟಿಯಾದ ಮಹಾಮಸ್ತಕಾಭಿಷೇಕ ಆಚರಣೆಯ ಕಮಿಟಿಯು ಮಾಡಿದ ನಿರ್ಣಯಗಳನ್ನು ಮಾತೃಕಮಿಟಿಯಾದ ಮೇನೇಜಿಂಗ್ ಕಮಿಟಿಯು ಅನುಮೋದಿಸಿ ಮಂಜೂರು ಮಾಡಿದ ನಂತರವೇ ಅಲ್ಲಿಯ ನಿರ್ಣಯಗಳು ಅಧಿಕೃತವೆನಿಸುತ್ತವೆ ಈ ನ್ಯಾಯೋಚಿತ ಮಾರ್ಗವನ್ನು ಬಿಟ್ಟು, ಸಬ್‌ಕಮಿಟಿಯಲ್ಲಿ ತೀರ್ಮಾನವಾಗಿ ಬಿಟ್ಟಿದೆ ಆದ್ದರಿಂದ ಮಾತೃಕಮಿಟಿಗೆ ಸಂಬಂಧಿಸಿಲ್ಲ ಎಂದು ಹೇಳುವುದಾದರೆ ಅದು ಯಜಮಾನನ ಅಪ್ಪಣೆಯಿಲ್ಲದೆ ಸೇವಕನೇ ದರ್ಬಾರು ಮಾಡಿದಂತಾಗುತ್ತದೆ ಹೀಗಾದ ಸಂದರ್ಭಗಳಲ್ಲಿ ಸಬ್‌ಕಮಿಟಿಯ ತೀರ್ಮಾನಗಳಿಗೆ ಅರ್ಥವೇ ಇರುವುದಿಲ್ಲ ಮತ್ತು ಈ ಬಗೆಯ ನಡವಳಿಕೆಗಳನ್ನು ಮನ್ನಿಸಿದರೆ ಆಗ ಮಾತೃಕಮಿಟಿಯ ಸದಸ್ಯರು ತಮ್ಮ ಹೊಣೆಗಾರಿಕೆಯಿಂದ ನುಣುಚಿಕೊಂಡು ವಂಚನೆ ಮತ್ತು ಅವ್ಯವಹಾರಗಳಿಗೆ ಪಟ್ಟಕಟ್ಟಿದಂತಾಗುತ್ತದೆ

ತಾ॥ 3/4-8-1979 ರ ದಿನಗಳಲ್ಲಿ ನಡೆದ ಈ ಸಭೆಗೆ ಆಕ್ಷೇಪಣೆಗಳನ್ನು ಹಾಕದವರಲ್ಲಿ ಒಬ್ಬರಾದ ಶಾಂತರಾಜರು ಕಾರಣಾಂತರಗಳಿಂದ ಹಾಜರಾಗಿರಲಿಲ್ಲ

ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಮುಂದಿನ ಸಭೆ ಎರಡು ತಿಂಗಳ ನಂತರ ತಾ॥ 5-10-1979 ರಲ್ಲಿ ಇಂದೂರಿನಲ್ಲಿ ನಡೆಯಲು ಏರ್ಪಾಟಾಯಿತು ತಾ॥ 3/4-8-1979 ರ ಸಭೆಯ ನಡವಳಿಕೆ ಪತ್ರದಲ್ಲಿ

'' ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಮುಂದಿನ ಸಭೆಯನ್ನು ವರ್ಕಿಂಗ್ ಕಮಿಟಿಯ ಸಭೆಯೊಂದಿಗೆ, ಮಧ್ಯಪ್ರದೇಶದ ಇಂದೂರಿನಲ್ಲಿ ತಾ॥ 5-10-79 ರಂದು ನಡೆಸಬೇಕೆಂದು ತೀರ್ಮಾನಿಸಲಾಗಿದೆ ''

ಎಂದು ನಿರ್ಣಯದಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ ಹೀಗೆ ತೀರ್ಮಾನಿಸಲು ಕಾರಣವೇನೆಂಬುದನ್ನು ಸ್ಪಷ್ಟಪಡಿಸಿಲ್ಲ ಬಹುಶಃ ಈ ನಿರ್ಧಾರಕ್ಕೆ ಆ ಸಂದರ್ಭದಲ್ಲಿ ವಿದ್ಯಾನಂದರು ಇಂದೂರಿನಲ್ಲಿ ಚಾತುರ್ಮಾಸ ಮಾಡುತ್ತಿದ್ದುದೇ ಕಾರಣ ವಿರಬಹುದು ತಮ್ಮ ಸ್ವಾಗತಸಮಾರಂಭಕ್ಕೆ ಹಣ ಮಂಜೂರು ಮಾಡುವ ವಿಷಯದಲ್ಲಿ ಕಮಿಟಿಯಲ್ಲಿ ಆಕ್ಷೇಪಣೆಗಳಿದ್ದುದರಿಂದ, ಆಕ್ಷೇಪಣೆ ಮಾಡುವ ಸದಸ್ಯರನ್ನು ವಿಚಾರಿಸಿಕೊಳ್ಳುವ ದೃಷ್ಟಿಯಿಂದ ವಿದ್ಯಾನಂದರು ತಾ॥ 5-10-79 ರಂದು ಇಂದೂರಿನಲ್ಲಿ ತಮ್ಮ ಸಮಕ್ಷಮದಲ್ಲಿಯೇ ಸಭೆ ನಡೆಯುವ ಹಾಗೆ ಬಹುಶಃ ಸೂಚನೆಗಳನ್ನು ನೀಡಿರಬಹುದು !

5-10-1979 ರ ಇಂದೂರಿನ ಸಭೆ ತೊಘಲಕನ ದರ್ಬಾರಿನಂತೆ ಆಯಿತು

ಈ ಸಭೆಗೆ ಕರ್ನಾಟಕದ ಸದಸ್ಯರಾಗಿ ಶ್ರೀ ಎಸ್. ಡಿ. ಸಾಮ್ರಾಜ್ಯ ಎಂಬುವರೊಬ್ಬರು ಮಾತ್ರ ಹೋಗಿದ್ದರು. ಈ ಸಭೆಯನ್ನು ಕೋರಂ ಇಲ್ಲದೆ ನಡೆಸಲಾಗಿದೆ.

ಕಮಿಟಿಯ ಮುಂದಿನ ಸಭೆ 7-12-1979 ರಂದು ಬೆಂಗಳೂರಿನಲ್ಲಿ ನಡೆಯಲು ವ್ಯವಸ್ಥೆಯಾಯಿತು ಇದರ ಅಜೆಂಡಾ ಪಟ್ಟಿಯನ್ನು ಸದಸ್ಯರಿಗೆ 1-12-79 ರಂದು ಕಳುಹಿಸಲಾಯಿತು

ಈ ಸಮಯಗಳಲ್ಲೆಲ್ಲಾ ಚಂದ್ರಯ್ಯನವರು ತಾವು 25,000 ರೂಪಾಯಿಗಳಿಗೆ ಹಾಕಿದ್ದ ಆಕ್ಷೇಪಣೆಗಳ ಪರವಾಗಿ ನ್ಯಾಯವಾದ ಹೋರಾಟವನ್ನು ಮುಂದುವರೆಸಿ ಕೊಂಡೇ ಬಂದರು ಈ ಹೋರಾಟ ನಡೆಯುತ್ತಿರುವ ಹಾಗೆಯೇ ಅದರ ಜೊತೆ ಜೊತೆಯಲ್ಲೇ, ಕಮಿಟಿಯ ವೆಚ್ಚಗಳಿಗೆ ಸಂಬಂಧಿಸಿದಂತೆ ಇನ್ನೊಂದು ಹೋರಾಟವನ್ನೂ ಸಹ ಚಂದ್ರಯ್ಯನವರು ಮೊದಲಿನಿಂದಲೂ ನಡೆಸುತ್ತಾ ಬಂದಿದ್ದರು ಆ ಹೋರಾಟ ತಾ॥ 7-12-1979 ರ ಕಮಿಟಿಯ ಸಭೆಯ ಸಮಯಕ್ಕೆ ಉದ್ವೇಗಕರ ಹಂತವನ್ನು ಮುಟ್ಟಿತ್ತು ಈ ಸನ್ನಿವೇಶದಲ್ಲಿ ಚಂದ್ರಯ್ಯನವರು ತಾ॥ 7-12-1979 ರ ಸಭೆ ಯಲ್ಲಿ, ಕಮಿಟಿಯ ವ್ಯವಹಾರಗಳನ್ನು ಸರಿಯಾದ ದಾರಿಗೆ ಹಚ್ಚುವ ತಮ್ಮ ಪ್ರಯತ್ನ ಗಳ ಅಂಗವಾಗಿ ತಮ್ಮ ಒಂದು ನಿರ್ಣಯವನ್ನು ಚರ್ಚೆಗೆ ತರಲು ಪ್ರಯತ್ನಿಸಿದ್ದರು ಆ ಪ್ರಯತ್ನ ಕೆಲವರ ಪಿತೂರಿಯಿಂದಾಗಿ ಕಮಿಟಿಯ ಸಭೆಯಲ್ಲಿ ಚರ್ಚೆಗೆ ಬರಲೂ ಸಹ ಸಾಧ್ಯವಾಗಲಿಲ್ಲ !

## ಅಸ್ಪೃಶ್ಯನಾದ ಸೂಚಿತ ನಿರ್ಣಯ :

ತಾ॥ 7-12-79 ರ ಸಭೆ ನಡೆಯುವುದಕ್ಕೆ ಸಾಕಷ್ಟು ಮುಂಚೆಯೇ ಚಂದ್ರಯ್ಯ ನವರು ತಾ॥ 26-10-79 ರಂದು ಕಾರ್ಯದರ್ಶಿಯವರಿಗೆ ಒಂದು ಪತ್ರ ಬರೆದು, ತಮ್ಮ ಒಂದು ನಿರ್ಣಯವನ್ನು ಕಮಿಟಿಯ ಮುಂದಿನ ಸಭೆಯಲ್ಲಿ ಇಡಬೇಕೆಂದು ಮನವಿ ಮಾಡಿಕೊಂಡಿದ್ದರು ಮುಂದಿನ ಸಭೆಯಾದ 7-12-1979 ರ ಸಭೆಯ ಅಜೆಂಡಾ ಪಟ್ಟಿ ಚಂದ್ರಯ್ಯನವರ ಕೈಸೇರುವವರೆಗೂ ಕಾರ್ಯದರ್ಶಿಯವರು ಚಂದ್ರಯ್ಯನವರ ಪತ್ರಕ್ಕೆ ಉತ್ತರ ಕೊಟ್ಟಿರಲಿಲ್ಲ ! ಹೋಗಲಿ ಸಭೆಯ ಅಜೆಂಡಾ ಪಟ್ಟಿಯಲ್ಲಾದರೂ ಚಂದ್ರಯ್ಯನವರ ಸೂಚಿತ ನಿರ್ಣಯವನ್ನು ಸೇರಿಸಿದ್ದಾರೆಯೆ ಎಂದರೆ ಅಲ್ಲೂ ಸೇರಿಸಿರಲಿಲ್ಲ !

ಕ್ಷೇತ್ರಕ್ಕೆ ಮೂರು ದಶಕಗಳಿಂದ ಗಣನೀಯ ಸೇವೆ ಸಲ್ಲಿಸಿ ಹಿಂದೆಲ್ಲಾ ಅನೇಕ ಸಂದರ್ಭಗಳಲ್ಲಿ ಕ್ಷೇತ್ರ, ಆಷಾಢಭೂತಿಗಳ ಪಾಲಾಗುವುದನ್ನು ಮಿಂಚಿನೋಪಾದಿಯಲ್ಲಿ ಕಾರ್ಯೋನ್ಮುಖವಾಗುವುದರ ಮೂಲಕ ತಪ್ಪಿಸಿ, ಕ್ಷೇತ್ರ ಮುಂದೆ ಸರ್ವಾಧಿಕಾರಿಗಳಾಗ

ಒಹುದಾದ ಮಠಾಧಿಪತಿಗಳ ಅಥವಾ ವ್ಯವಸ್ಥಾಪಕರ ಕಪಿಮುಷ್ಟಿಗೆ ಸಿಕ್ಕದಿರಲಿ ಎಂಬ ದೂರದೃಷ್ಟಿಯಿಂದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಸ್ಥಾಪನೆಗಾಗಿ ಶ್ರಮಿಸಿ ಅದನ್ನು ಸಾಧಿಸಿದ ಮೇಲೆ ಆದರ ಸ್ಥಾಪಕ ಸದಸ್ಯರಾಗಿದ್ದುಕೊಂಡು ನಿಸ್ಪೃಹ ವಾಗಿ ಸೇವೆಸಲ್ಲಿಸುತ್ತಿದ್ದ ಚಂದ್ರಯ್ಯನವರ ಒಂದು ಸೂಚಿತ ನಿರ್ಣಯಕ್ಕೆ ಕಮಿಟಿಯ ಕಾರ್ಯದರ್ಶಿಯವರು ಉದ್ದೇಶಪೂರ್ವಕವಾಗಿಯೇ ತೋರಿಸಿದ ನಿರ್ಲಕ್ಷ್ಯಕ್ಕೆ ಕಾರಣ ವೇನು ? ಕಾರ್ಯದರ್ಶಿಯವರೇ ಹೀಗೆ ಸ್ವತಃ ಸ್ವೇಚ್ಛೆಯಾಗಿ ವರ್ತಿಸಿದರೆ ? ಅಥವಾ ಅವರ ಹಿಂದೆ ನಿಂತು ಅವರನ್ನು ಕೈಗೊಂಬೆ ಮಾಡಿಕೊಂಡಿರುವ ಸರ್ವಾಧಿಕಾರಪ್ರಿಯರು ಕೀಲಿ ಕಳಚಿದರೆ ? ಕಮಿಟಿಯ ಸದಸ್ಯರಿಗೆ ಕಾನೂನುಬದ್ಧವಾಗಿ ದತ್ತವಾದ ಹಕ್ಕನ್ನು ಮೊಟಕುಮಾಡಲು ಪ್ರಯತ್ನಿಸಿದವರು ಯಾರು ?

ಚಂದ್ರಯ್ಯನವರ ಸೂಚಿತ ನಿರ್ಣಯವನ್ನು ಕಾರ್ಯದರ್ಶಿಯವರೆ ಬುದ್ಧಿಪೂರ್ವಕ ವಾಗಿ ತಡೆಹಿಡಿದಿಲ್ಲವೆನಿಸುತ್ತದೆ ಇದನ್ನು ಸ್ಪಷ್ಟಪಡಿಸಲು ಕಮಿಟಿಯ ಹಿಂದಿನ ಒಂದು ವ್ಯವಹಾರವನ್ನು ನೆನೆಯಬಹುದು !

ಈ ಹಿಂದೆ ತಾ॥ 17–3–1979 ರ ಸಭೆಯ ಅಜೆಂಡಾಪಟ್ಟಿಯನ್ನು ಸದಸ್ಯರಿಗೆ ಕಳಿಸಿಕೊಟ್ಟನಂತರ, ಕಮಿಟಿಯ ಸದಸ್ಯರಲ್ಲಿ ಒಬ್ಬರಾದ ಶ್ರೀ ಎಂ ಸಿ ಅನಂತ ರಾಜಯ್ಯನವರು ತಾ॥ 12–3–79 ರಂದು ಕಮಿಟಿಗೆ ಒಂದು ಪತ್ರ ಬರೆದು ಕಮಿಟಿಯ ಪತಿಯಿಂದ ಬೆಂಗಳೂರಿನಲ್ಲಿ ಒಂದು ಧರ್ಮಶಾಲೆಯನ್ನು ಕಟ್ಟುವ ತಮ್ಮ ಸಲಹೆಯನ್ನು ಆದರಲ್ಲಿ ವ್ಯಕ್ತಪಡಿಸಿದರು ಹಾಗೆಯೇ ವಿದ್ಯಾನಂದರನ್ನು ಇಂದೂರಿನಿಂದ ಶ್ರವಣ ಬೆಳಗೊಳದವರೆಗೆ ಕರೆದುಕೊಂಡು ಒರಲು ಸುಮಾರು ಐದುಲಕ್ಷ ರೂಪಾಯಿಗಳು ಬೇಕಾಗುವುದೆಂದೂ, ಈ ಸಂದರ್ಭದಲ್ಲಿ ಮೇನೇಜಿಂಗ್ ಕಮಿಟಿಯು ತನ್ನ ಮೊದಲ ಕಂತಾಗಿ 50,000 ರೂಪಾಯಿಗಳ ಹಣವನ್ನು ದಕ್ಷಿಣಪಥ ವಿಹಾರ ಸ್ವಾಗತ ಸಮಿತಿಗೆ ಮುಂಗಡವಾಗಿ ಕೊಡಬೇಕೆಂದೂ ಪ್ರಾರ್ಥಿಸಿದರು

ಕ್ಷೇತ್ರದ ಹೊರಗೆ ಅಭಿವೃದ್ಧಿ ಕಾರ್ಯಗಳನ್ನಾಗಲೀ ಅಥವಾ ಸ್ವಾಗತ ವ್ಯವಸ್ಥೆ ಗಳನ್ನಾಗಲೀ ಕೈಗೊಳ್ಳಲು ಕಮಿಟಿಯ ನಿಯಮಗಳಲ್ಲಿ ಅವಕಾಶವಿಲ್ಲದಿದ್ದರೂ ಸಹ, ಅದರಲ್ಲೂ ಸಭೆ ಸೇರುವುದಕ್ಕೆ ನಾಲ್ಕು ದಿನಗಳು ಮಾತ್ರ ಇರುವಾಗ ಬಂದ ಈ ಪತ್ರವನ್ನು ಕಾರ್ಯದರ್ಶಿಯವರು ಅಡಿಷನಲ್ ಅಜೆಂಡಾಪಟ್ಟಿಯಲ್ಲಿ ಮೊದಲಸ್ಥಾನದಲ್ಲಿ ಸೇರಿಸಿ 17–3–79 ರ ಸಭೆಯ ಮುಂದಿಟ್ಟಿದ್ದರು

ಮೇಲೆ ನಡೆದ ಹಿಂದಿನ ಪ್ರಸಂಗದಲ್ಲಿ ಸದಸ್ಯರೊಬ್ಬರ ಪತ್ರಕ್ಕೆ, ಪತ್ರ ವಿಷಯ ಗಳು ಕಮಿಟಿಯ ನಿಯಮಗಳಿಗೆ ಅನುಗುಣವಾಗಿ ಇಲ್ಲದಿದ್ದರೂ ಸಹ ಅಷ್ಟೊಂದು ತೀವ್ರ ಗಮನ ಕೊಟ್ಟ ಕಾರ್ಯದರ್ಶಿಯವರು, ಈ ಸಂದರ್ಭದಲ್ಲಿ ಚಂದ್ರಯ್ಯನವರು ಕಳು

ಹಿಸಿದ ಪತ್ರ ಸಭೆ ಸೇರುವುದಕ್ಕೆ 40 ದಿವಸಗಳು ಮುಂಚಿತವಾಗಿ ಬಂದಿದ್ದರೂ ಸಹ, ಅದಕ್ಕೆ ಉತ್ತರ ಕೊಡುವ ಸೌಜನ್ಯವನ್ನೂ ತೋರಿಸದೆ ಏಕೆ ಉಪೇಕ್ಷೆಮಾಡಿದರು ?

ಕಾರ್ಯದರ್ಶಿಯವರು ಹೀಗೆ ಸ್ಪಷ್ಟವಾಗಿ ಪಕ್ಷಪಾತಪೂರಿತವಾಗಿ ನಡೆದುಕೊಳ್ಳಲು ಅವರೇ ಕಾರಣರಲ್ಲ ! ಅವರನ್ನು ಕೈಗೊಂಬೆ ಮಾಡಿಕೊಂಡು ಅ ವ ರ ಮೂಲಕ ಕಮಿಟಿಯು ಎಲ್ಲಾ ವ್ಯವಹಾರಗಳನ್ನು ತಮ್ಮ ಇಷ್ಟಕ್ಕೆ ಅನುಗುಣವಾಗಿ ನಿರ್ವಹಿಸುತ್ತಿರುವ ಇನ್ನೊಬ್ಬರು ಇದ್ದಾರೆ ಎಂಬುದು ಮೇಲಿನ ಘಟನೆಗಳಿಂದ ತಿಳಿದು ಬರುತ್ತದೆ.

ಈ ಸಂದರ್ಭದಲ್ಲಿ ಚಂದ್ರಯ್ಯನವರು ತಾ॥ 26–10–79 ರಂದು ಕಳುಹಿಸಿದ ನಿರ್ಣಯದ ವಿಷಯ ಏನು ? ಕಾರ್ಯದರ್ಶಿಯವರನ್ನು ತಮ್ಮ ಕೈಗೊಂಬೆಮಾಡಿ ಕೊಂಡಿರುವವರು ಯಾರು ? ಇದಕ್ಕೆಲ್ಲಾ ಹಿಂದೆ ಇನ್ನಾವ ವ್ಯವಹಾರಗಳು ನಡೆದಿರ ಬಹುದು ? 7–12–79 ರ ಕಮಿಟಿಯ ಸಭೆ ನಡೆದ ನಂತರ ಮುಂದೇನಾಯಿತು ? ಈ ಎಲ್ಲಾ ವಿವರಗಳನ್ನು ತಿಳಿದುಕೊಳ್ಳಲು 1979 ರ ರಥೋತ್ಸವಕ್ಕೆ ಸಂಬಂಧಿಸಿದ ಪೆಚ್ಚ ಗಳ ಮೇಲೆ ಚಂದ್ರಯ್ಯನವರು ವ್ಯಕ್ತಪಡಿಸಿದ ಆಕ್ಷೇಪಣೆಗಳನ್ನೂ ಅದನ್ನನುಸರಿಸಿ ನಡೆದ ವ್ಯವಹಾರಗಳನ್ನೂ ಗಮನಿಸಬೇಕು ಇದಕ್ಕಾಗಿ ಬೇರೊಂದು ಅಧ್ಯಾಯವೇ ಬೇಕು !

## ಅಧ್ಯಾಯ ೩

# 1979 ರ ರಥೋತ್ಸವದ ವೆಚ್ಚಪ್ರಕರಣ

ವಿದ್ಯಾನಂದರ ದಕ್ಷಿಣಪಥ ವಿಹಾರ ಸ್ವಾಗತಸಮಿತಿಗೆ ಹಣ ಮಂಜೂರು ಮಾಡುವ ನಿರ್ಣಯದ ಬಗೆಗೆ ತಾತ್ವಿಕ ಕಾರಣಗಳನ್ನು ಮುಂದೆಮಾಡಿ ಚಂದ್ರಯ್ಯನವರು ಮತ್ತು ಶಾಂತರಾಜರು ಆಕ್ಷೇಪಣೆಗಳನ್ನು ವ್ಯಕ್ತಪಡಿಸಿದ ಸಮಯದಲ್ಲಿಯೇ ಮೇಲಿನ ವ್ಯವಹಾರದ ಜೊತೆಜೊತೆಯಲ್ಲಿಯೇ ಇನ್ನೊಂದು ಮುಖ್ಯವಾದ ವ್ಯವಹಾರವೂ ನಡೆಯುತ್ತಿತ್ತು. ಅದು 1979 ರ ಏಪ್ರಿಲ್ ತಿಂಗಳಿನಲ್ಲಿ ಶ್ರವಣಬೆಳಗೊಳದಲ್ಲಿ ನಡೆದ ರಥೋತ್ಸವಕ್ಕೆ ಸಂಬಂಧಪಟ್ಟ ವೆಚ್ಚಗಳನ್ನು ಕುರಿತದ್ದಾಗಿದೆ.

### ಚಂದ್ರಯ್ಯನವರ ಪರಿಶೀಲನೆಗಳು :

ಚಂದ್ರಯ್ಯನವರು ತಾ॥ 19-5-79 ರಂದು 1979 ರ ಏಪ್ರಿಲ್‌ನಲ್ಲಿ ನಡೆದ ರಥೋತ್ಸವದ ವೆಚ್ಚಗಳಿಗೆ ಸಂಬಂಧಿಸಿದಂತೆ ಕೆಲವು ಆಕ್ಷೇಪಣೆಗಳನ್ನು ಕಾರ್ಯದರ್ಶಿಯ ವರಿಗೆ ಸಲ್ಲಿಸಿದರು. ಕಮಿಟಿಯ ಕಾರ್ಯದರ್ಶಿಯವರು ತಾ॥ 6-5-79 ರಂದು ಸದಸ್ಯ ರಿಗೆ ಕಳುಹಿಸಿಕೊಟ್ಟ ಕಮಿಟಿಯ ಏಪ್ರಿಲ್ 1979 ರ ಜಮಾ-ಖರ್ಚಿನ ವರದಿಪಟ್ಟಿಯೇ ಚಂದ್ರಯ್ಯನವರು ಆಕ್ಷೇಪಣೆಗಳನ್ನು ಸಲ್ಲಿಸಲು ಆಧಾರವಾಗಿತ್ತು.

ಚಂದ್ರಯ್ಯನವರು ತಮ್ಮ ಪತ್ರದಲ್ಲಿ ರಥೋತ್ಸವಕ್ಕಾಗಿ ಖರ್ಚು ಮಾಡಿರುವ 16 515-40 ರೂಪಾಯಿಗಳಿಗೂ ಮತ್ತು ವಿವಿಧ ಬಾಬ್ತುಗಳಿಗೆ ಖರ್ಚಾಗಿರುವ 11 237-38 ರೂಪಾಯಿಗಳಿಗೂ ಕಾರ್ಯದರ್ಶಿಯವರಿಂದ ವಿವರಣೆಗಳನ್ನು ಕೇಳಿದರು.

ಕಾರ್ಯದರ್ಶಿಯವರು ತಾ॥ 24-5-1979 ರಂದು ಉತ್ತರ ನೀಡಿ ಕೆಲವು ವಿವರಣೆಗಳನ್ನು ಒದಗಿಸಿದರು.

ಕಾರ್ಯದರ್ಶಿಯವರ ವಿವರಣೆಯನ್ನು ಗಮನಿಸಿದ ಚಂದ್ರಯ್ಯನವರು, ಇನ್ನಿತರ ಬಾಬ್ತುಗಳಲ್ಲಿ ಧಾಮಸಂಪ್ರೋಕ್ಷಣೆ ಮತ್ತು ಮಹಾವೀರ ಕುಂದ ಕುಂದ ಭವನಕ್ಕೆ ಮಾಡಿ ರುವ ವೆಚ್ಚಗಳಲ್ಲಿ ಕೆಲವು ಅನಗತ್ಯವಾದವುಗಳೂ, ಮತ್ತೆ ಕೆಲವು ಅಳತೆ ಮೀರಿದವುಗಳೂ ಆಗಿರುವುದಲ್ಲದೆ ಸೃಷ್ಟಿಸಿದ ವೆಚ್ಚಗಳಂತೆಯೂ ಕಂಡುಬರುತ್ತವೆ ಎಂದು ಹೇಳಿ ರಥೋತ್ಸವಕ್ಕಾಗಿ ಮಾಡಿರುವ ವೆಚ್ಚವೂ ಸಹ ಹೀಗೆಯೇ ದುಂದುವೆಚ್ಚಗಳಿಂದ ಕೂಡಿದೆ ಎಂದು ತಿಳಿಸಿ, ಸೌದೆಗಾಗಿ ಖರ್ಚುಮಾಡಿರುವ 1 800-00 ರೂಪಾಯಿಗಳ ವೆಚ್ಚ

ವನ್ನು ಉದಾಹರಣೆಯಾಗಿ ಪ್ರಸ್ತಾಪಿಸಿ, ಈ ವಿಚಾರದಲ್ಲಿ ಮತ್ತೆ ಹೆಚ್ಚು ವಿವರಣೆಗಳನ್ನು ಬಯಸಿ, ಕಾರ್ಯದರ್ಶಿಯವರಿಗೆ ತಾ॥ 30–5–79 ರಲ್ಲಿ ಇನ್ನೊಂದು ಪತ್ರ ಬರೆದರು

ಚಂದ್ರಯ್ಯನವರ ಮೇಲಿನ ಪತ್ರಕ್ಕೆ ಕಾರ್ಯದರ್ಶಿಯವರಿಂದ ತಾ॥ 11–6–79 ರವರೆಗೂ ಉತ್ತರ ಬರದೇ ಹೋದಾಗ, ಚಂದ್ರಯ್ಯನವರು ಈ ವಿಚಾರವಾಗಿ ತಾ॥ 12–6–79 ರಂದು ಮತ್ತೊಂದು ಪತ್ರ ಬರೆದರು

ಈ ಪತ್ರದಲ್ಲಿ ಚಂದ್ರಯ್ಯನವರು ರಥೋತ್ಸವ, ಆ ಸಂದರ್ಭದಲ್ಲಿ ನಡೆದ ಧಾಮ ಸಂಪ್ರೋಕ್ಷಣೆ ಮತ್ತು ಕುಂದಕುಂದ ಭವನದ ಉದ್ಘಾಟನೆಗಳ ಸಮಾರಂಭಗಳಿಗಾಗಿ ಖರ್ಚಾದ ಒಟ್ಟು 27,752–78 ರೂಪಾಯಿಗಳಲ್ಲಿ ಸುಮಾರು 12245–90 ರೂ ಗಳಷ್ಟು ಹಣವನ್ನು ಅನಗತ್ಯವಾಗಿ ದುಂದುವೆಚ್ಚಮಾಡಲಾಗಿದೆ ಎಂದು ವಿವರಣೆಗಳ ಸಮೇತವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ

ತಮ್ಮ ಪರಿಶೀಲನೆಗಳನ್ನು ಕಾರ್ಯದರ್ಶಿಯವರು ಅವಲೋಕಿಸಿ ಅವುಗಳಿಗೆ ಬೇಗನೆ ವಿವರಣೆಯನ್ನು ಕೊಡಬೇಕೆಂದು ಕೇಳಿದ್ದಾರೆ ಈ 12–6–79 ನೇ ತಾರೀಖಿನ ತಮ್ಮ ಪತ್ರದ ಒಂದು ಪ್ರತಿಯನ್ನು ಚಂದ್ರಯ್ಯನವರು, ಮೇನೇಜಿಂಗ್ ಕಮಿಟಿಯ ಲೆಕ್ಕಪತ್ರಗಳ ಉಪಸಮಿತಿಯ ಛೇರ್ಮನ್ನರೂ ಆದ ಶಾಂತರಾಜರಿಗೆ ಕಳುಹಿಸಿಕೊಟ್ಟು, ತಮ್ಮ ಪರಿಶೀಲನೆಗಳನ್ನು, ಕಮಿಟಿಯ ಲೆಕ್ಕಪುಸ್ತಕಗಳು ಮತ್ತು ರಶೀದಿಗಳೊಂದಿಗೆ ಹೋಲಿಸಿ ಸತ್ಯಾಂಶವನ್ನು ಪತ್ತೆಮಾಡಿ ಈ ವಿಷಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಕಳುಹಿಸಿಕೊಡಬೇಕೆಂದು ಪ್ರಾರ್ಥಿಸಿದ್ದಾರೆ

ಚಂದ್ರಯ್ಯನವರ ಎರಡು ಪತ್ರಗಳಿಗೆ ಕಾರ್ಯದರ್ಶಿಯವರು ಉತ್ತರ ಕೊಡಲು ತಡಮಾಡಿದರು ಇದರಿಂದಾಗಿ ಚಂದ್ರಯ್ಯನವರಿಗೆ ಕಮಿಟಿಯ ದಿನನಿತ್ಯದ ವ್ಯವಹಾರ ಗಳು ಮತ್ತು ಇತರ ವ್ಯವಹಾರಗಳ ಬಗೆಗೆ ಸಂಶಯ ಮೂಡಿತು

ತಾ॥ 3–7–79 ರಂದು ಚಂದ್ರಯ್ಯನವರು ಮತ್ತೊಂದು ಪತ್ರವನ್ನು ಬರೆದು ತಮ್ಮ 30–5–79 ಮತ್ತು 12–6–79 ರ ಪತ್ರಗಳಿಗೆ ಶೀಘ್ರವಾಗಿ ಉತ್ತರ ನೀಡು ವಂತೆ ಪ್ರಾರ್ಥಿಸಿದರು ಇದರ ಜೊತೆಗೆ ಮೇನೇಜಿಂಗ್ ಕಮಿಟಿಯ ಇನ್ನಿತರ ಕೆಲವು ವ್ಯವಹಾರಗಳ ಬಗೆಗೆ ವಿವರವಾದ ವ್ಯಾಖ್ಯಾನಗಳನ್ನು ಒದಗಿಸಬೇಕೆಂದೂ ಕಾರ್ಯದರ್ಶಿ ಯವರನ್ನು ಕೇಳಿದರು

ಚಂದ್ರಯ್ಯನವರ 3–7–79ರ ಪತ್ರಕ್ಕೂ ಉತ್ತರ ಬರುವ ಸೂಚನೆಗಳು ಕಾಣದೇ ಹೋದಾಗ ಚಂದ್ರಯ್ಯನವರು ತಮ್ಮ ಪ್ರಯತ್ನವನ್ನು ಬಿಡದೆ ತಾ॥ 16–7–79 ರಂದು ಕಾರ್ಯದರ್ಶಿಯವರಿಗೆ ಮತ್ತೊಂದು ಪತ್ರವನ್ನು ಬರೆದರು ಇದರಲ್ಲಿ ತಮ್ಮ ಹಿಂದಿನ

ತಾ॥ 30-5-79, ತಾ॥ 12-6-79 ಮತ್ತು ತಾ॥ 3-7-79 ರ ಪತ್ರಗಳಿಗೆ ಅತಿ ಶೀಘ್ರವಾಗಿ ಉತ್ತರಕೊಡುವಂತೆಯೂ, ಆಗಸ್ಟ್ 1979 ರ ಕಮಿಟಿಯ ಮೀಟಿಂಗಿಗಾಗಿ ಟಿಪ್ಪಣಿ ತಯಾರಿಸಿಕೊಳ್ಳಲು ಅದು ಅತ್ಯಾವಶ್ಯಕವೆಂದೂ ತಿಳಿಸಿದರು

ಕಡೆಗೂ 50 ದಿವಸಗಳ ನಂತರವಾದರೂ, ಕಾರ್ಯದರ್ಶಿಯವರು ಉತ್ತರ ಕೊಡುವ ಮನಸ್ಸು ಮಾಡಿದರು

ತಾ॥ 20-7-79 ರಂದು ಚಂದ್ರಯ್ಯನವರ 12-6-79 ರ ಪತ್ರಕ್ಕೆ ಉತ್ತರ ನೀಡಿ ಚಂದ್ರಯ್ಯನವರ ಆಕ್ಷೇಪಣೆಗಳಿಗೆ ತಮ್ಮ ವಿವರಣೆಗಳನ್ನು ಮಂಡಿಸಿದ್ದಾರೆ ಈ ಪತ್ರದ ಮುಖ್ಯ ಸಂಗತಿಗಳೆಂದರೆ" ಪ್ರತಿಯೊಂದು ಖರ್ಚಿನ ವಿಷಯಗಳನ್ನೂ ಪೂಜ್ಯಶ್ರೀ ಚಾರುಕೀರ್ತಿ ಸ್ವಾಮೀಜಿಯವರೊಂದಿಗೆ ನಿಕಟವಾಗಿ ಸಮಾಲೋಚಿಸಿ ನಿರ್ವಹಿಸಲಾಗಿದೆ" ಮತ್ತು ಸಮಾರಂಭಗಳಿಗೆ ಚಂದ್ರಯ್ಯನವರು ಮತ್ತಿತರರ ಸಹಕಾರವನ್ನು ಪಡೆಯಲಾಗಿದೆ ಎಂದು ಕಾರ್ಯದರ್ಶಿಯವರು ಹೇಳಿರುವುದು

ಕಾರ್ಯದರ್ಶಿಯವರು ಹೀಗೆ ಬರೆಯುವುದರ ಮೂಲಕ 1979 ರ ಏಪ್ರಿಲ್ ತಿಂಗಳ ರಥೋತ್ಸವದಲ್ಲಿ ನಡೆದಿರಬಹುದಾದ ಅವ್ಯವಹಾರಗಳಿಗೆ ಚಾರುಕೀರ್ತಿಸ್ವಾಮಿ ಗಳನ್ನು ಜವಾಬ್ದಾರರನ್ನಾಗಿ ಮಾಡಿದ್ದಾರೆ

ನಿಯಮಗಳ ದೃಷ್ಟಿಯಿಂದ ಕಾರ್ಯದರ್ಶಿಯವರ ಈ ಹೇಳಿಕೆ ಸರಿಯಲ್ಲ ಏಕೆಂದರೆ ಕಮಿಟಿಯ 10 ನೇ ನಿಯಮದ 4, 5, 6 ನೇ ಉಪನಿಯಮಗಳಲ್ಲಿ ಆದಾಯ ವೆಚ್ಚಗಳ ಮತ್ತು ಅವುಗಳ ವ್ಯವಸ್ಥಿತವಾದ ಪೂರ್ಣ ಲೆಕ್ಕಪತ್ರಗಳನ್ನಿಡುವ ಸಂಪೂರ್ಣ ಜವಾಬ್ದಾರಿ ಕಾರ್ಯದರ್ಶಿಯವರದೇ ಆಗಿದೆ ಖರ್ಚಿನ ಔಚಿತ್ಯ ಅನೌಚಿತ್ಯಗಳನ್ನು ಪರೀಕ್ಷಿಸಿ, ನ್ಯಾಯೋಚಿತವಾದ ವೆಚ್ಚಗಳನ್ನು ಮಾಡುವ ವಿವೇಚನೆಯ ವಿಚಕ್ಷಣತೆ ಕಾರ್ಯದರ್ಶಿಯವರಿಗಿರಲೇಬೇಕು ಇದು ಅವರ ಕರ್ತವ್ಯವೂ ಆಗಿದೆ

ಚಂದ್ರಯ್ಯನವರು ಉತ್ತರವನ್ನು ಪರಿಶೀಲಿಸಿದರು ವೆಚ್ಚಗಳ ಕಡೆಗೆ ಸ್ವಾಮೀಜಿ ಯವರತ್ತ ಕೈತೋರಿಸುವುದನ್ನು ಚಂದ್ರಯ್ಯನವರು ಒಪ್ಪಲಿಲ್ಲ ಅವರು ಪುನಃ ತಾ॥ 25-7-79 ರಂದು ಕಾರ್ಯದರ್ಶಿಯವರಿಗೆ ಪತ್ರ ಬರೆದು ಈ ಪ್ರಕರಣಗಳಿಗೆ ಸ್ವಾಮೀಜಿಯವರನ್ನು ಹೊಣೆಗಾರರನ್ನಾಗಿ ಮಾಡಲು ಪ್ರಯತ್ನಿಸಿರುವುದನ್ನು ಖಂಡಿಸಿ ದರು ನಿಮ್ಮ ಜವಾಬ್ದಾರಿಗಳನ್ನು ಇನ್ನೊಬ್ಬರ ಹೆಗಲಮೇಲೆ ಹೊರಿಸಲಾಗದು ಎಂದು ಅಲ್ಲಿ ತಿಳಿಸಿದರು ಹಾಗೆಯೇ ರಥೋತ್ಸವದ ಸಮಾರಂಭಗಳಿಗೆ ತಮ್ಮ ಸಹಕಾರವನ್ನು ಪಡೆಯಲಾಗಿದೆ ಎಂಬ ಹೇಳಿಕೆಯನ್ನು ಸತ್ಯದೂರವಾದ ಹೇಳಿಕೆಯೆಂದು ನಿರಾಕರಿಸಿದರು

ಚಂದ್ರಯ್ಯನವರು ಪುನಃ ಮರುದಿನ ತಾ॥ 26-7-79 ರಂದು ಈ ವಿಷಯದ

ಬಗ್ಗೆ ಮತ್ತೊಂದು ಪತ್ರವನ್ನು ಬರೆದು ಅದರಲ್ಲಿ 1979ರ ರಥೋತ್ಸವಕ್ಕೆ ಸಂಬಂಧಿಸಿದ ವೆಚ್ಚದ, ತಮ್ಮ ಪರಿಶೀಲನೆಗಳು ಮತ್ತು ಅವುಗಳಿಗೆ ಕಾರ್ಯದರ್ಶಿಯವರು ನೀಡಿರುವ ಉತ್ತರ – ಈ ಎಲ್ಲಾ ವ್ಯವಹಾರ ಪತ್ರಗಳನ್ನು ತಾ॥ 4-8-1979 ರ ಕಮಿಟಿಯ ಸಭೆಯ ಮುಂದಿಡಬೇಕೆಂದು ಪ್ರಾರ್ಥಿಸಿದರು.

ಇವಿಷ್ಟು 1979 ಏಪ್ರಿಲ್ ತಿಂಗಳಿನಲ್ಲಿ ನಡೆದ ರಥೋತ್ಸವ ಸಮಯದಲ್ಲಿ ಆದ ಖರ್ಚುಗಳ ವಿಚಾರವಾಗಿ ಚಂದ್ರಯ್ಯನವರು ವ್ಯಕ್ತಪಡಿಸಿದ ಆಕ್ಷೇಪಣೆಗಳು ಮತ್ತು ಅದಕ್ಕೆ ಸಂಬಂಧಿಸಿದ ಪತ್ರವ್ಯವಹಾರ

## ಶಾಂತರಾಜರಿಂದ ಲೆಕ್ಕಪತ್ರಗಳ ಪರಿಶೀಲನೆ :

ಚಂದ್ರಯ್ಯನವರು ತಾ॥ 12-6-1979 ರಂದು ಕಾರ್ಯದರ್ಶಿಯವರಿಗೆ ಬರೆದ ಪತ್ರದ ಪ್ರತಿಯೊಂದನ್ನು ಶಾಂತರಾಜರಿಗೂ ಕಳುಹಿಸಿ ಅದರಲ್ಲಿ ತಮ್ಮ ಪರಿಶೀಲನೆಗೆ ಸಂಬಂಧಿಸಿದಂತೆ ಕಮಿಟಿಯ ಲೆಕ್ಕಪತ್ರಗಳನ್ನು ಮತ್ತು ಅದರ ರಶೀದಿಗಳನ್ನು ಪರಿಶೀಲಿಸ ಬೇಕೆಂದು ಪ್ರಾರ್ಥಿಸಿದ್ದರಷ್ಟೆ. ಚಂದ್ರಯ್ಯನವರ ಮನವಿಗನುಗುಣವಾಗಿ ಲೆಕ್ಕಪತ್ರಗಳ ಉಪಸಮಿತಿಯ ಛೇರ್ಮನ್ನರಾಗಿ ಅವರು ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕಾಯಿತು.

ಚಂದ್ರಯ್ಯನವರ ಮನವಿಗೆ ಮುಂಚಿನ ತಿಂಗಳುಗಳಿಂದಲೂ ಕಮಿಟಿಯ ಲೆಕ್ಕಪತ್ರಗಳ ಪರಿಶೀಲನೆಯನ್ನು ಕಾಲಕಾಲಕ್ಕೆ ನಡೆಸಿ ಕಮಿಟಿಯ ಸಿಬ್ಬಂದಿಗೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದ ಶಾಂತರಾಜರು, ಚಂದ್ರಯ್ಯನವರ 12-6-79 ರ ಪತ್ರದಿಂದಾಗಿ ಏಪ್ರಿಲ್ ತಿಂಗಳ ವೆಚ್ಚಗಳ ಪರಿಶೀಲನೆಯ ಕಡೆ ಹೆಚ್ಚು ಗಮನ ಹರಿಸಿದರು

ಲೆಕ್ಕಗಳ ವಿವರವಾದ ಪರಿಶೀಲನೆಯನ್ನು ಮುಗಿಸಿದ ನಂತರ ತಮ್ಮ ವರದಿಯನ್ನು ಎಸ್ ಡಿ ಜೆ. ಎಂ ಐ. ಮೇನೇಜಿಂಗ್ ಕಮಿಟಿಯ ಛೇರ್ಮನ್ನರಾದ ಸ್ವಾಮೀಜಿಯವರಿಗೆ ತಾ॥ 25-7-1979 ರಂದು ಸಲ್ಲಿಸಿದರು. ಶಾಂತರಾಜರು ಸಲ್ಲಿಸಿದ ವರದಿಯ ಕನ್ನಡಾನುವಾದ ಮುಂದಿದೆ

ಎಸ್. ಪಿ ಶಾಂತರಾಜ್

ಪದ್ಮಕೃಪ,
50, ರಮಾವಿಲಾಸ ರಸ್ತೆ,
ಮೈಸೂರು-570 001
ತಾ॥ 25-7-1979

ಛೇರ್ಮನ್,
ಎಸ್ ಡಿ. ಜೆ. ಎಂ. ಐ. ಮೇನೇಜಿಂಗ್ ಕಮಿಟಿ,
ಶ್ರವಣಬೆಳಗೊಳ.

ಪೂಜ್ಯ ಸ್ವಾಮಿಜಿಯವರೆ,

1979 ರ ಏಪ್ರಿಲ್‌ನಲ್ಲಿ ನಡೆದ ರಥೋತ್ಸವ, ಮಹಾವೀರ ಕುಂದ ಕುಂದ ಭವನದ ಉದ್ಘಾಟನೆ ಮತ್ತು ಧಾಮಸಂಪ್ರೋಕ್ಷಣೆಯ ಸಮಾರಂಭಗಳಿಗೆ ಸಂಬಂಧ ಪಟ್ಟಂತೆ ಖರ್ಚಿನ ವಿವರಗಳ ಮೇಲಿನ ದೀರ್ಘ ಟಿಪ್ಪಣಿಗಳ ನನ್ನ ವರದಿಯನ್ನು ಇದ ರೊಂದಿಗೆ ಕಳುಹಿಸುತ್ತಿದ್ದೇನೆ ವಿವಿಧ ಖರ್ಚುಗಳ ಬಗೆಗಿನ ನನ್ನ ಪ್ರತಿಕ್ರಿಯೆಯನ್ನೂ ಅವುಗಳೆದುರಿಗೇ ಟಿಪ್ಪಣಿಯ ರೂಪದಲ್ಲಿ ನಮೂದಿಸಿದ್ದೇನೆ

ಸಮಸ್ತ ಖರ್ಚನ್ನು ಮಾಡಲಾಗಿರುವ ರೀತಿಯ ಬೇಜವಾಬ್ದಾರಿತನ ಮತ್ತು ನಿರ್ಲಕ್ಷ್ಯತೆಯನ್ನೇ ಅದು ತೋರಿಸುತ್ತದೆ

ಪ್ರತಿವರ್ಷವೂ ರಥೋತ್ಸವವು ನಿರ್ದಿಷ್ಟ ಸಮಯದಲ್ಲಿ ಆಚರಿಸುವ ಸಮಾರಂಭ ವೆಂಬುದು ಗೊತ್ತಿರುವ ಸಂಗತಿಯಾಗಿದೆ ಮತ್ತೆ ಮಹಾವೀರ ಕುಂದಕುಂದ ಭವನದ ಉದ್ಘಾಟನೆ ಮತ್ತು ಧಾಮಸಂಪ್ರೋಕ್ಷಣೆಯ ಸಮಾರಂಭಗಳ ದಿನಾಂಕಗಳೂ ಪೂರ್ವ ಭಾವಿಯಾಗಿಯೇ ತಿಳಿದಿದ್ದರೂ ಸಹ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ಗಮ ನಾರ್ಹ ಮೊತ್ತದ ಉಳಿತಾಯವನ್ನು ಸಂಸ್ಥೆಗಾಗಿ ಮಾಡಬಹುದಾಗಿದ್ದ ಯೋಜನಾಬದ್ಧ ವಿಕ್ರಯಗಳನ್ನೇಕೆ ಮುಂಚೆಯೇ ಯೋಚಿಸಲಿಲ್ಲವೆಂಬುದು ನನಗೆ ಅರ್ಥವಾಗುತ್ತಿಲ್ಲ ಮೇಲಿನ ಸಮಾರಂಭಗಳಿಗಾಗಿ ಮಾಡಿದ ವಿಕ್ರಯಗಳ ಖರ್ಚು ಸುಮಾರು 15,000 ರೂ ಗಳಾಗಿದ್ದು, ಬೇಕೆಂದ ರೀತಿಯಲ್ಲಿ ಮತ್ತು ಹೊತ್ತಿನಲ್ಲಿ ಅದರಲ್ಲಿಯೂ ಚಿಲ್ಲರೆ ವ್ಯಾಪಾರಿ ಗಳಲ್ಲಿ ಕೊಂಡುಕೊಳ್ಳಲಾಗಿದೆ ಇದರ ಬದಲಾಗಿ ಹೋಲ್‌ಸೇಲ್ ವ್ಯಾಪಾರಿಗಳಿಂದಲೇ ನೇರವಾಗಿ ಇವುಗಳನ್ನು ವಿಕ್ರಯಿಸಿದ್ದಲ್ಲಿ ಕಮಿಟಿಯು ಇಡೀ ಖರ್ಚಿನಲ್ಲಿ ಶೇಕಡ 20 ಭಾಗವನ್ನು ಉಳಿಸಬಹುದಿತ್ತು ವಿವೇಕವುಳ್ಳ ಯಾವ ವ್ಯಕ್ತಿಯೇ ಆಗಲಿ ಆಚರಿಸುವ ವಿಧಾನವಿದು ಧಾರ್ಮಿಕ ಸಂಸ್ಥೆಯೊಂದಕ್ಕೆ ಸಂಬಂಧಿಸಿದ ನಿಧಿಯನ್ನು ಖರ್ಚು ಮಾಡು ವುದಾದ್ದರಿಂದ ಇಲ್ಲಿನ ಅಧಿಕಾರಿಗಳೂ ಈ ವಿಧಾನವನ್ನು ಅನುಸರಿಸಬೇಕಾಗಿತ್ತು ಎನ್ನು ವುದು ಇನ್ನೂ ಮುಖ್ಯವಾಗುತ್ತದೆ

ನಿಜವಾದ ಉಪಯೋಗಕ್ಕಾಗಿ ಅಂತಹ ಪದಾರ್ಥಗಳ ದಾಸ್ತಾನನ್ನೇ ಹೇಗೆ ಕೊಡ ಲಾಯಿತು ಮತ್ತು ಉಳಿದ ತಪಸೀಲೇನು ಎಂಬುದೂ ತಾಳೆಯಾಗದ ಸಂಗತಿಯಾಗಿದೆ ಕೊಂಡುಕೊಂಡದ್ದೆಲ್ಲವನ್ನೂ ಸ ಮಾ ರಂ ಭ ಕ್ಕೆ ಉಪಯೋಗಿಸಿಲ್ಲವೆಂಬುದರಲ್ಲಿ ಸಂದೇಹವಿಲ್ಲ

ರಥವನ್ನು ಅಲಂಕರಿಸಲು ಬಳಸಲಾದ ಬೊಂಬುಗಳು, ಮರದ ಕಂಬಗಳು, ಹಗ್ಗ ಬಟ್ಟೆ ಇತ್ಯಾದಿ ಹಲವು ಸಾಮಗ್ರಿಗಳನ್ನು ವರ್ಷಾವಧಿಗೆ ಕೊಂಡುಕೊಂಡಂತೆ ತೋರಿಸ

ಲಾಗಿದೆ. ವಾಸ್ತವವಾಗಿ ಕೆಲವು ನಿರ್ದಿಷ್ಟ ಸಾಮಗ್ರಿಗಳನ್ನು, ಎರಡು ಮೂರು ವರ್ಷದ ಸಮಯಕ್ಕೂ ಮಿಕ್ಕು ಸಂಗ್ರಹಿಸಿಡಬಹುದಾಗಿತ್ತು. ಮತ್ತು ಇನ್ನೂ ಕೆಲವನ್ನು ಆಗಿಂದಾಗ್ಗೆ ಬಿಡಿಸಿಟ್ಟು ಹರಾಜು ಹಾಕಬಹುದಾಗಿತ್ತು

ವರ್ಷಾಂತ್ಯದಲ್ಲಿ ಉಪಯೋಗಿಸದೇ ಉಳಿದ ಸಾಮಗ್ರಿಗಳನ್ನು ಪ್ರಸ್ತುತ ವರ್ಷದ ಖಾತೆಗೆ ಮುಂದುವರೆಸಿ ಉಪಯೋಗಿಸಲಾಗಿಲ್ಲ ಇದರಿಂದಾಗಿ ಸಂಸ್ಥೆಗೆ ನಷ್ಟವುಂಟಾಗಿದೆ

ಅಂತೆಯೇ ಎಷ್ಟೋ ಖರ್ಚಿನ ಬಾಬ್ತುಗಳು ಮೇಲಿನ ಸಮಾರಂಭಗಳಿಗೆ ಸಂಬಂಧ ಪಡದವುಗಳಾಗಿದ್ದು ಅಂತಹ ಖರ್ಚುಗಳು ಅಧಿಕೃತವೆನಿಸುವುದಿಲ್ಲ

ಪ್ರಸ್ತುತ ವರ್ಷದ ಖಾತೆಯಲ್ಲಿ ಎಷ್ಟೋ ಲೋಪದೋಷಗಳು ಇದ್ದು ಕಳೆದ ವರ್ಷಗಳಲ್ಲಿಯೂ ಇದು ಹೀಗೆಯೇ ಆಗಿರಬೇಕು ಎಂದು ನನ್ನ ನಂಬಿಕೆ ಕೂಲಿ ಪಾವತಿಯ ಸಂದರ್ಭದಲ್ಲಿ ಹಲವಾರು ಕಲ್ಪಿತ ಪಾವತಿಗಳಿದ್ದು, ಈ ಅಸಾಧುವಾದ ವಿಚಾರವನ್ನು ತಿಳಿಸಲು ನನಗೆ ನಿಜವಾಗಿ ವ್ಯಥೆಯಾಗುತ್ತಿದೆ ಉದಾಹರಣೆಗೆ ಕೆಲವು ಕಾರ್ಮಿಕರ ಹೆಸರುಗಳು ಪ್ರತಿಯೊಂದು ಸಮಾರಂಭಕ್ಕಾಗಿ ತಯಾರಿಸಿದ ಪಟ್ಟಿಗಳಲ್ಲೂ ಕಂಡುಬಂದಿದ್ದು ಅವರಿಗೆ ಅದಕ್ಕನುಗುಣವಾಗಿ ಹಣ ಕೊಡಲಾಗಿದೆ ಒಬ್ಬನೇ ವ್ಯಕ್ತಿ ಹೇಗೆ ಮೂರು ಸ್ಥಳಗಳಲ್ಲಿ ಏಕಕಾಲದಲ್ಲಿ ಕೆಲಸ ಮಾಡಿದನೆಂಬುದು ಸೋಜಿಗದ ಸಂಗತಿಯಾಗಿದೆ ಇದು ಉಳಿದಖರ್ಚುಗಳ ಸಿಂಧುತ್ವದ ಬಗ್ಗೆಯೂ ನಾನು ಅನುಮಾನಪಡುವಂತೆ ಮಾಡಿದೆ

ಈ ವರ್ಷಗಳಲ್ಲಿ ಕಮಿಟಿಯ ಕಾರ್ಯದ ಫಲಿತಾಂಶಗಳು ಬೃಹತ್ತಾದ ಖೋತಾವನ್ನೇ ತೋರಿಸುತ್ತವೆಯೆಂಬುದನ್ನು ಎತ್ತಿ ಹೇಳಬೇಕಾಗಿಲ್ಲ ನಿಜವಾಗಿಯೂ ನತದೃಷ್ಟಕರವೆಂದರೆ ಕಾರ್ಯಾಲಯದ ಆಡಳಿತದ ಜವಾಬ್ದಾರಿಯುಳ್ಳ ವ್ಯಕ್ತಿಗಳು ಈ ವಾಸ್ತವಾಂಶವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಸ್ವೇಚ್ಛೆಯಿಂದ ಕಾಲವ್ಯಯ ಮಾಡಿರುವುದು. ಸಂಸ್ಥೆಯು ನಿಜವಾಗಿಯೂ ನಿಂತಿರುವುದೇ ದಾನಿಗಳು ಮತ್ತು ಭಕ್ತರು ನೀಡಿದ ಉದಾರ ಕಾಣಿಕೆಗಳ ಮೇಲೆ ಮತ್ತು ಅಂತಹ ಹಣವನ್ನು ಈಗ ಮಾಡಿರುವಂತೆ ಎಂದಿಗೂ ಅನಗತ್ಯ ಹಾಗೂ ದುಂದು ಖರ್ಚುಗಳಿಗೆ ಉಪಯೋಗಿಸಬಾರದೆಂಬುದು ಅರ್ಥಮಾಡಿಕೊಳ್ಳಬೇಕಾದ ಸಂಗತಿಯಾಗಿದೆ

ಮಹಾಮಸ್ತಕಾಭಿಷೇಕ ಸಮಾರಂಭವು ಇಂದಿನಿಂದ ಹೆಚ್ಚೆಂದರೆ ಒಂದು ವರ್ಷ ಮುಂದಿದ್ದು ಈ ಸಮಾರಂಭವನ್ನು ನೆರವೇರಿಸಲು ಭಾರಿ ಸಿದ್ಧತೆಗಳನ್ನು ಮಾಡಬೇಕಾಗಿದೆಯೆಂದು ನಾವೆಲ್ಲಾ ಅರಿತಿದ್ದೇವೆ. ಆದ್ದರಿಂದ ಸಂಬಂಧಿಸಿದ ಎಲ್ಲಾ ವ್ಯಕ್ತಿಗಳೂ ಪೂರ್ವಭಾವಿಯಾಗಿ ಎಲ್ಲವನ್ನೂ ಸುಸಂಬದ್ಧವಾಗಿ ಯೋಚಿಸಲು ನಿಷ್ಠೆಯಿಂದ ಪ್ರಯ

ತ್ನಿಸಿ ಸಂಸ್ಥೆಯ ಅಮೂಲ್ಯವಾದ ಹಣವು, ಹೆಚ್ಚು ಧ್ಯೇಯನಿಷ್ಠವೂ ನ್ಯಾಯೋಚಿತವೂ ಆದ ರೀತಿಯಲ್ಲಿ ವಿನಿಯೋಗವಾಗಲೆಂಬುದು ನನ್ನ ಶ್ರದ್ಧಾಪೂರ್ಣ ಅಭಿಲಾಷೆಯಾಗಿದೆ.

ನಮಸ್ಕಾರಗಳೊಂದಿಗೆ
ತಮ್ಮ ನಿಷ್ಠಾವಂತ ಭಕ್ತ
(ಸಹಿ)
ಎಸ್ ಪಿ ಶಾಂತರಾಜ್

**ಪ್ರತಿಗಳು :**

1 ಶ್ರವಣಬೆಳಗೊಳದ ಎಸ್ ಡಿ ಜೆ.ಎಂ ಐ ಮೇನೇಜಿಂಗ್ ಕಮಿಟಿಯ ಕಾರ್ಯದರ್ಶಿಯವರ ಗಮನಕ್ಕೆ , ಆಗಸ್ಟ್ 4, 1979 ರಂದು ಸಂಜೆ 3 ಘಂಟೆಯ ಕಮಿಟಿಯ ಸಭೆಯಲ್ಲಿ ತಮ್ಮ ಅನಿಸಿಕೆಗಳೊಂದಿಗೆ ಮುಂದಿಡುವುದಕ್ಕಾಗಿ

2 ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ವೈಸ್-ಛೇರ್ಮನ್ನರಿಗೆ

3 ಶ್ರೀ ಸಿ ಬಿ ಎಂ ಚಂದ್ರಯ್ಯನವರಿಗೆ ಅವರ ತಾ|| 12-6-79 ರ ಪತ್ರಕ್ಕೆ ಉತ್ತರವಾಗಿ

ಈ ಪತ್ರದ ಮೊದಲನೆಯ ಪ್ಯಾರಾದಲ್ಲಿ ಶಾಂತರಾಜರು ತಿಳಿಸಿರುವ ಹಾಗೆ ಪತ್ರದ ಜೊತೆ ದೀರ್ಘ ಟಿಪ್ಪಣಿಗಳ ವರದಿಯನ್ನೂ, ಅವುಗಳೆದುರಿಗೆ ತಮ್ಮ ಪ್ರತಿಕ್ರಿಯೆಗಳನ್ನೂ ಟಿಪ್ಪಣಿ ರೂಪದಲ್ಲಿ ವಿವರಿಸಿದ್ದಾರೆ ಅದರಲ್ಲಿ ವೆಚ್ಚಗಳ ಔಚಿತ್ಯ-ಅನೌಚಿತ್ಯಗಳನ್ನು ವಿಶ್ಲೇಷಿಸಿ ತಮ್ಮ ಅಭಿಪ್ರಾಯವನ್ನು ನೀಡಿದ್ದಾರೆ ಹಾಗೆಯೇ ಲೆಕ್ಕಪತ್ರಗಳು-ರಶೀದಿಗಳನ್ನು ಸಂರಕ್ಷಿಸಿಡುವ ವಿಚಾರದಲ್ಲಿ ಆಗಿರುವ ಗಣನೀಯವಾದ ಲೋಪದೋಷಗಳನ್ನು ಗಮನಕ್ಕೆ ತಂದಿದ್ದಾರೆ ಶಾಂತರಾಜರ ಪರಿಶೀಲನೆಗಳ ಕೆಲವು ನಿದರ್ಶನಗಳನ್ನು ಕೆಳಗೆ ಕಾಣಬಹುದು

## 1979 ರ ಏಪ್ರಿಲ್ ತಿಂಗಳಲ್ಲಿ ನಡೆದ ರಥೋತ್ಸವ

**ವೆಚ್ಚಗಳ ಪರಿಶೀಲನೆ :**

1 ಖರ್ಚು ರಶೀದಿ ನಂ. 42 ರಲ್ಲಿ ಊಟದ ವ್ಯವಸ್ಥೆಗಾಗಿ 2,346-00 ರೂ. ಗಳ ಖರ್ಚನ್ನು ತೋರಿಸಲಾಗಿದೆ.

ಅಭಿಪ್ರಾಯ : ಒಪ್ಪೊತ್ತಿನ ಊಟಕ್ಕಾಗಿ 800 ಜನರಿಗೆ 1200-00 ರೂಪಾಯಿ ಗಳಿಗೂ ಮೀರಿ ಖರ್ಚಾಗಲು ಸಾಧ್ಯವಿಲ್ಲ ಎರಡು ವರ್ಷಗಳ ಹಿಂದೆ ನಾನೇ ಮೇಲಿನಷ್ಟೇ ಜನಕ್ಕೆ ಊಟದ ವ್ಯವಸ್ಥೆ ಮಾಡಿಸಿದಾಗ 955-50 ರೂ ಗಳು ಮಾತ್ರ ಖರ್ಚಾಗಿತ್ತು ಆದ್ದರಿಂದ ಮೇಲಿನದು ದುಂದು ವೆಚ್ಚ ಎಂದು ಶಾಂತರಾಜರು ಅಭಿಪ್ರಾಯಪಟ್ಟಿದ್ದಾರೆ

ಖರ್ಚು ರಶೀದಿ ನಂ 3 ರಲ್ಲಿ ಒಂದು ಲಾರಿಲೋಡ್ ಸೌದೆ ಮತ್ತು ಅದನ್ನು ಸೀಳುವ ಖರ್ಚು ಸೇರಿಸಿ 1880-00 ರೂಪಾಯಿ ಖರ್ಚು ತೋರಿಸಿದ್ದಾರೆ

ಅಭಿಪ್ರಾಯ ಮಂಡ್ಯದ ದಾನಿಗಳು ಏರ್ಪಡಿಸುವ 5 ದಿನಗಳ ಊಟದ ವ್ಯವಸ್ಥೆ ಗಾಗಿ ಕಮಿಟಿಯವರು ಸರಬರಾಜು ಮಾಡುವ ಸೌದೆಯ ಮೊತ್ತ 500-00 ರೂ ಗಳನ್ನು ಮೀರಲಾರದು ಆದ್ದರಿಂದ ಉಳಿದದ್ದು ಅನಗತ್ಯವಾದ ಖರ್ಚು ಎಂದು ಶಾಂತರಾಜರು ಅಭಿಪ್ರಾಯಪಟ್ಟಿದ್ದಾರೆ

2 ಖರ್ಚು ರಶೀದಿ ನಂ 38 39 ರಲ್ಲಿ ಪುರೋಹಿತರು ಮತ್ತಿತರರಿಗೆ ದಕ್ಷಿಣೆ ಕೊಟ್ಟ ಖರ್ಚನ್ನು 1338-75 ರೂಪಾಯಿಗಳು ಎಂದು ತೋರಿಸಿದ್ದಾರೆ

ಅಭಿಪ್ರಾಯ ಇದರಲ್ಲಿ 1022-00 ರೂಪಾಯಿಗಳನ್ನು ಹೆಚ್ಚಾಗಿ ಖರ್ಚುಮಾಡಿದ ಹಾಗೆ ತೋರುತ್ತದೆ ಎಂದು ಶಾಂತರಾಜರು ಅಭಿಪ್ರಾಯಪಟ್ಟಿದ್ದಾರೆ

3 ಖರ್ಚು ರಶೀದಿ ನಂ 29 48 ರಲ್ಲಿ ಧ್ವನಿವರ್ಧಕ ವ್ಯವಸ್ಥೆಗಾಗಿ 270-00 ರೂಪಾಯಿ ಖರ್ಚು ತೋರಿಸಲಾಗಿದೆ

ಅಭಿಪ್ರಾಯ ಶ್ರೀಪುರದ ಧ್ವನಿವರ್ಧಕ ಸೆಟ್ಟನ್ನೇ ಸಮಾರಂಭಕ್ಕೆ ಉಪಯೋಗಿಸಿರುವುದರಿಂದ ಸಾಮಾನ್ಯವಾಗಿ ಈ ಖರ್ಚನ್ನು ಹಾಕಿರುವುದು ಅಸಮಂಜಸವಾಗುತ್ತದೆ

4 ಖರ್ಚು ರಶೀದಿ ನಂ 26 ರಲ್ಲಿ ಕೂಲಿ ಖರ್ಚು ಎಂದು 571-00 ರೂಪಾಯಿ ತೋರಿಸಲಾಗಿದೆ

ಅಭಿಪ್ರಾಯ ಮೇಲಿನ ಸಮಾರಂಭಕ್ಕೆ ಕೂಲಿ ಕೆಲಸಗಾರರ ಅಗತ್ಯವಿಲ್ಲ ಈ ಬಗ್ಗೆ ಹಣವೇನಾದರೂ ಸಂದಾಯವಾಗಿದೆಯೇ ಎಂಬುದು ಅತ್ಯಂತ ಸಂದೇಹಾಸ್ಪದ

5 ಖರ್ಚು ರಶೀದಿ ನಂ 25 ಮತ್ತು 41 ರಲ್ಲಿ ಕಾರಿಗೆ ಬಾಡಿಗೆ ಎಂದು 897-80 ರೂಪಾಯಿಗಳನ್ನು ನಮೂದಿಸಲಾಗಿದೆ

ಅಭಿಪ್ರಾಯ . ಈ ಸಮಾರಂಭಕ್ಕೆ ಕಾರನ್ನು ಬಾಡಿಗೆಗೆ ಗೊತ್ತು ಪಡಿಸುವುದು ಔಚಿತ್ಯತೆ ಯಲ್ಲಿರಲಿಲ್ಲ ಅದೂ ಅನಗತ್ಯವಾದ ಸಂದರ್ಭದಲ್ಲಿ ಇಂತಹ ದುಂದು ವೆಚ್ಚದಲ್ಲಿ ತೊಡಗುವುದು ಉಚಿತವೇ ಎಂದು ಚಿಂತಿಸುವಂತಾಗಿದೆ

6 ಖರ್ಚು ರಶೀದಿ ನಂ 7, 4, 12, 13 20 22, 24 30, 31, 47 5 ಈ ರಶೀದಿಗಳಲ್ಲಿ ನೈವೇದ್ಯ ಮತ್ತು ಪೂಜಾ ಸಾಮಗ್ರಿಗಳಿಗಾಗಿ 3,342-25 ರೂಪಾಯಿಗಳ ಖರ್ಚನ್ನು ತೋರಿಸಲಾಗಿದೆ

ಅಭಿಪ್ರಾಯ ಆರುದಿನಗಳ ಪೂಜೆಗೆ ಖರ್ಚು 1800-00 ರೂಪಾಯಿಗಳನ್ನು ಮೀರಲಾರದು ಏಕೆಂದರೆ ಇವರಲ್ಲಿ ಪಾಂಡುಕಶಿಲಾಪೂಜೆ, ಬಾಲಲೀಲಾ ಮಹೋತ್ಸವ, ಹರಿಪೀಠ ಪೂಜೆ, ತೆಪ್ಪೋತ್ಸವ ಇತ್ಯಾದಿ ಪೂಜೆಗಳನ್ನು ಸೇವಾರ್ಥದಾರರು ಮತ್ತು ದಾನಿಗಳು ಮಾಡಿಸುವಾಗ ಅವುಗಳ ಖರ್ಚನ್ನು ಪೂರ್ಣವಾಗಿ ಅವರೇ ವಹಿಸಿ ಕೊಳ್ಳುತ್ತಾರೆ ಆದ್ದರಿಂದ ಈ ಬಾಬ್ತಿಗೆ ಕಮಿಟಿ ಮಾಡುವ ಖರ್ಚು 1800 ರೂಪಾಯಿಗಳಿಗೆ ಮೀರಲು ಸಾಧ್ಯವಿಲ್ಲ ಈ ಬಾಬ್ತಿನ ಅನಗತ್ಯ ಖರ್ಚು 1542-25 ರೂಪಾಯಿಗಳು

7 ಖರ್ಚು ರಶೀತಿ ನಂ 6, 27 ಮತ್ತು 44 ರಲ್ಲಿ ವೇದಿಕೆ ಮತ್ತು ಪೆಂಡಾಲ್‌ಗಳಿಗಾಗಿ 1319-00 ರೂಪಾಯಿಗಳ ಖರ್ಚನ್ನು ತೋರಿಸಲಾಗಿದೆ

ಅಭಿಪ್ರಾಯ ಮಠದ ಮುಂದೆ ಒಂದೇ ಒಂದು ಪೆಂಡಾಲನ್ನು ಮಾತ್ರ ಹಾಕಲಾಗಿತ್ತು ಕುಂದ ಕುಂದ ಭವನದ ಉದ್ಘಾಟನೆಯ ಖರ್ಚಿನಲ್ಲಿ ಗುರುತಿಸಲಾಗುವ ಇಂಥದೇ ಒಂದು ಖರ್ಚನ್ನು ಸೇರಿಸಲಾಗಿದೆ ಒಂದು ಸಾರಿ ಹಾಕಿದ ಖರ್ಚಿನ ಪ್ರತಿರೂಪವೇ ಇದಾಗಿರುವ ಹಾಗೆ ತೋರುತ್ತದೆ ಆದ್ದರಿಂದ ಈ ಖರ್ಚು ಅತ್ಯಂತ ಅವಾಸ್ತವಿಕವಾಗಿ ಕಂಡುಬರುತ್ತದೆ

8 ರಶೀದಿಗಳ ಲೋಪದೋಷಗಳು ರಶೀದಿ ನಂ 15 ಕ್ಕೆ ತಾರೀಖು ಮತ್ತು ಸ್ಟ್ಯಾಂಪಿಲ್ಲ ರಶೀದಿ ನಂ 17 .2, 23, 24, 26 34, 36, 39, 40 ಇವುಗಳಲ್ಲಿ ತಾರೀಖನ್ನು ನಮೂದಿಸಿಲ್ಲ ಪೆಂಡಾಲ್ ಖರ್ಚಿನ ರಶೀದಿ ನಂ 44 ರಲ್ಲಿ ಸ್ಟ್ಯಾಂಪ್ ಹಾಕಿಲ್ಲ ರಶೀದಿ ನಂ 45, ವಿದ್ಯುದ್ದೀಪಾಲಂಕಾರಮಾಡಿದ್ದರ ಖರ್ಚಿನ 100 ರೂಪಾಯಿಗಳಿಗೆ ಕ್ರಮಬದ್ಧವಾದ ಮೂಲ ರಶೀದಿಯೇ ಇಲ್ಲ

ಟಿಪ್ಪಣಿಗಳ ಕಡೆಯಲ್ಲಿ ಶಾಂತರಾಜರು ತಮ್ಮ ಪರಿಶೀಲನೆಗಳ ಬಗೆಗೆ ಬರೆಯುತ್ತಾ " ಈ ಸಮಾರಂಭವನ್ನು ಈಗ ಖರ್ಚು ಮಾಡಲಾಗಿರುವ 15 973-40 ರೂಪಾಯಿಗಳಿಗೆ ಬದಲಾಗಿ ವ್ಯವಸ್ಥಿತವಾಗಿ 8000-00 ರೂಪಾಯಿಗಳ ಖರ್ಚಿನಲ್ಲಿ ನಿರ್ವಹಿಸ

ಬಹುದಾಗಿತ್ತು ಈ ಸಮಾರಂಭ ನಡೆಸಲು ನಿಯೋಜಿತರಾದ ವ್ಯಕ್ತಿಗಳು ಹಣ ಖರ್ಚು ಮಾಡುವ ವಿಚಾರದಲ್ಲಿ ಹತೋಟಿಯನ್ನು ಹೊಂದಿದ್ದರೆ, ಭಕ್ತ ಜನರ ಹಣ ಅಳತೆಗೆಟ್ಟು ದುಂದು ವೆಚ್ಚವಾಗುವುದನ್ನು ತಡೆಯಬಹುದಿತ್ತು

ರಶೀದಿಗಳಲ್ಲಿ ಮೇಲಿನಂತೆ ಲೋಪದೋಷಗಳು ಕಂಡು ಬಂದರೂ ಸಹ, ಆ ವೆಚ್ಚಗಳನ್ನು ಪಾಸು ಮಾಡುವಾಗ ಜವಾಬ್ದಾರಿಯುತ ಅಧಿಕಾರಿಗಳಾದ ಕಾರ್ಯದರ್ಶಿಯವರು, ಅವುಗಳನ್ನು ಕಡೆಗಣಿಸಿದ್ದು ಆಶ್ಚರ್ಯಕರವಾಗಿದೆ" ಎಂದು ವ್ಯಾಖ್ಯಾನ ಮಾಡಿದ್ದಾರೆ

## ಧಾವನ ಸಂಪ್ರೋಕ್ಷಣಾ ಸಮಾರಂಭಗಳು(9, 10 ಏಪ್ರಿಲ್ 79)

**ವೆಚ್ಚಗಳ ಪರಿಶೀಲನೆ :**

1 ಖರ್ಚು ರಶೀದಿ 17, 18, 43, 44 ರಲ್ಲಿ ಕಾರು ಬಾಡಿಗೆಯೆಂದು 667-80 ರೂಪಾಯಿಗಳ ಖರ್ಚನ್ನು ತೋರಿಸಲಾಗಿದೆ

ಅಭಿಪ್ರಾಯ ಸಮಾರಂಭಕ್ಕೆ ಕಾರಿನ ಬಾಡಿಗೆ ಅನಗತ್ಯವಾದುದು ಯಥಾಪ್ರಕಾರ ಇದರಿಂದ ಸಂಸ್ಥೆಯ ಅಮೂಲ್ಯವಾದ ನಿಧಿಯ ದುರುಪಯೋಗವಾಗಿದೆ ಮೇಲಿನ ಮೊತ್ತ ಅನಗತ್ಯವಾದ ಖರ್ಚು

2 ಖರ್ಚು ರಶೀದಿ ನಂ 19, 26, 28 ರಲ್ಲಿ ಕೂಲಿ ಖರ್ಚು ಎಂದು 594-00 ರೂಪಾಯಿಗಳನ್ನು ನಮೂದಿಸಲಾಗಿದೆ

ಅಭಿಪ್ರಾಯ ರಶೀದಿ ನಂ 26, 28 ರಲ್ಲಿ ಗೊತ್ತುಪಡಿಸಿಕೊಂಡ ಕೆಲಸಗಾರರ ಹೆಸರುಗಳೇ ಇಲ್ಲ ಅಲ್ಲದೆ ರಶೀದಿಯಲ್ಲಿ ಹಣಪಡೆದವರ ಸಹಿಯೇ ಇಲ್ಲ ಈ ಸಮಾರಂಭದ ಕಾರ್ಯಗಳ ಸ್ವರೂಪವನ್ನು ಗಮನಿಸಿದಾಗ ಈ ಬಾಬ್ತು ಮಾಡಿರುವ ಖರ್ಚಿನಲ್ಲಿ 500-00 ರೂಪಾಯಿ ದುಂದು ವೆಚ್ಚವಾಗಿದೆ

3 ಖರ್ಚು ರಶೀದಿ ನಂ, 42, 20, 32 ಇವುಗಳಲ್ಲಿ ಧ್ವನಿವರ್ಧಕದ ಖರ್ಚು 130-00 ರೂಪಾಯಿಗಳನ್ನು ನಮೂದಿಸಲಾಗಿದೆ

ಅಭಿಪ್ರಾಯ ರಶೀದಿ ನಂ 20 ರಲ್ಲಿ ಹಣಪಡೆದವರ ಹೆಸರಿಲ್ಲ ಅಲ್ಲದೆ ಹಣಪಡೆದವರ ಸಹಿಯೂ ಇಲ್ಲ ಆದ್ದರಿಂದ ಇದು ಕೃತ್ರಿಮವೆಂದು ಕಾಣುತ್ತದೆ ರಶೀದಿ ನಂ 32 ರಲ್ಲಿ ಅಡಿಗೆಯವರೊಬ್ಬರಿಗೆ ಹಣ ಸಂದಾಯವಾಗಿರುವುದು ಕಂಡುಬರು

ತ್ತದೆ ಧ್ವನಿವರ್ಧಕಕ್ಕೂ ಅಡಿಗೆಯವರಿಗೂ ಸಂಬಂಧವಿಲ್ಲ ಅಷ್ಟಾಗಿ ಇಲ್ಲಿ ತಾರೀಖಾಗಲೀ ಹಣಪಡೆದವರ ಸಹಿಯಾಗಲೀ

4 ರಶೀದಿಗಳ ಲೋಪದೋಷಗಳು ರಶೀದಿ ನಂ 11, 16, 19, 23, 24, 28, 26, 29, 31, 32, 33, 40 ಈ ರಶೀದಿಗಳಲ್ಲಿ ತಾರೀಖನ್ನು ನಮೂದಿಸಿಲ್ಲ

ರಶೀದಿ ನಂ 17, 18, 20, 24a, 25 26 41 42 ಇವುಗಳಿಗೆ ಸ್ಟಾಂಪ್ ಹಾಕಿಲ್ಲ

ರಶೀದಿ ನಂ 20 ರಲ್ಲಿ ಸಹಿಯಿಲ್ಲ

ರಶೀದಿ ನಂ 44 ರ ಪೆಟ್ರೋಲ್‌ನ ಮೂಲ ರಶೀದಿ ಪತ್ರೆಯಿಲ್ಲ

ತಾ|| 9 ಮತ್ತು 10 ಏಪ್ರಿಲ್ 1979 ಈ ಎರಡು ದಿನಗಳಂದು ನಡೆದ ಧಾಮ ಸಂಪ್ರೋಕ್ಷಣೆಗೆ ಖರ್ಚಾಗಿರುವ 6,078–05 ರೂ ಗಳಲ್ಲಿ 2,597–85 ರೂ ಗಳನ್ನು ಅಧಿಕವಾಗಿ ಮತ್ತು ಅನಗತ್ಯವಾಗಿ ವ ಚ್ಚ ಮಾ ಡ ಲಾ ಗಿ ದ ಎಂದು ಶಾಂತರಾಜರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ

## ಮಹಾವೀರ ಕುಂದ ಕುಂದ ಭವನದ ಪ್ರಾರಂಭೋತ್ಸವ
(10–4–79)

**ವೆಚ್ಚಗಳ ಪರಿಶೀಲನೆ .**

1 ಖರ್ಚು ರಶೀದಿ ನಂ 3 ರಲ್ಲಿ ಅಮೃತಶಿಲೆಯ ಫಲಕದ ಮೇಲ ಅಕ್ಷರಗಳನ್ನು ಕೊರೆಯುವುದಕ್ಕಾಗಿ 400 ರೂಪಾಯಿ ಖರ್ಚನ್ನು ತೋರಿಸಲಾಗಿದೆ

ಅಭಿಪ್ರಾಯ ವಿಶ್ವಾಸಾರ್ಹ ಮೂಲಗಳಲ್ಲಿ ವಿಚಾರಿಸಿದಾಗ ಇಂತಹ ಕೊರೆಯುವಿಕೆಗೆ ತಗಲುವ ವೆಚ್ಚ 112–50 ರೂಪಾಯಿಗಳು ಎಂದು ತಿಳಿದುಬಂದಿದೆ

2 ಖರ್ಚು ರಶೀದಿ ನಂ 6, 12 22, ಮತ್ತು 23 ರಲ್ಲಿ 134 ಜನಕ್ಕೆ ಉಪಾಹಾರ ಮತ್ತು ಊಟಕ್ಕಾಗಿ 1076–15 ರೂಪಾಯಿಗಳ ಖರ್ಚು ತೋರಿಸಲಾಗಿದೆ

ಅಭಿಪ್ರಾಯ ಮೇಲಿನ ಉಪಾಹಾರ ಮತ್ತು ಊಟದ ವ್ಯವಸ್ಥೆಯನ್ನು, 150 ಜನಗಳಿದ್ದರೂ ಅದನ್ನು 450–00 ರೂಪಾಯಿಗಳಲ್ಲಿ ನಿರ್ವಹಿಸಬಹುದು ಈ ವಿಭಾಗದಲ್ಲಿ ಮಾಡಿರುವ ವೆಚ್ಚ ಅತ್ಯಧಿಕವಾಗಿದೆ

3 ಖರ್ಚು: ರಶೀದಿ ನಂ. 10 ಮತ್ತು 27 ರಲ್ಲಿ ತಳಿರು ತೋರಣಕ್ಕಾಗಿ 30 ರೂಪಾಯಿಗಳನ್ನೂ, ಪೆಂಡಾಲ್ ಖರ್ಚೆಂದು 1100 ರೂಪಾಯಿಗಳನ್ನೂ ವೆಚ್ಚ ಮಾಡಲಾಗಿದೆ

ಅಭಿಪ್ರಾಯ ಪೆಂಡಾಲಿಗೆ ಮತ್ತು ತಳಿರುತೋರಣಗಳಿಗಾಗಿ ಬಹುಶಃ ನ್ಯಾಯೋಚಿತವಾಗಿ ಖರ್ಚಾಗಿರುವ ಹಣ ಹೆಚ್ಚೆಂದರೆ 300–00 ರೂಪಾಯಿಗಳಾಗಬಹುದು ಆದ್ದರಿಂದ ಮೇಲಿನಂತೆ ಹಣ ಖರ್ಚು ಮಾಡಿರುವುದು ನಿಜವಾಗಿಯೂ ದಿಗ್ಭ್ರಾಂತಿಗೊಳಿಸುವಂತಿದೆ !

4 ಖರ್ಚು ರಶೀದಿ ನಂ 13, 14, 21 ಇವುಗಳಲ್ಲಿ ಕೂಲಿಖರ್ಚೆಂದು 383 ರೂಪಾಯಿಗಳನ್ನು ತೋರಿಸಲಾಗಿದೆ

ಅಭಿಪ್ರಾಯ ರಶೀದಿ ನಂ 13 ಮತ್ತು 14 ನ್ನು ಪರಿಶೀಲಿಸಿದಾಗ ಅವು ಪುನರಾವರ್ತಿತ ಅಥವಾ ಕಲ್ಪಿತವೆಂದು ಕಂಡುಬರುತ್ತದೆ ಈ ಸಂದರ್ಭ ಕೂಲಿಗಾರರ ನೇಮಕವನ್ನು ಬಯಸುವುದಿಲ್ಲ ಅಲ್ಲದೆ ಕೂಲಿಗಾರರನ್ನು ಆಗ ನೇಮಿಸಿಕೊಂಡಿರಲಿಲ್ಲ ವೆಂಬುದೂ ಸತ್ಯ ಸಂಗತಿಯಾಗಿದೆ

5 ಖರ್ಚು ರಶೀದಿ ನಂ 26 ರಲ್ಲಿ ಕಾರಿನ ಬಾಡಿಗೆ ಮತ್ತು ಪೆಟ್ರೋಲ್ ಖರ್ಚು ಎಂದು 111–30 ರೂಪಾಯಿಗಳ ಖರ್ಚು ಹಾಕಲಾಗಿದೆ

ಅಭಿಪ್ರಾಯ ಈ ಸಂದರ್ಭ ಕಾರಿನ ಬಾಡಿಗೆಯನ್ನು ಅಪೇಕ್ಷಿಸುವುದಿಲ್ಲ ಈ ಲೆಕ್ಕದಲ್ಲಿ ಏನು ಹಣವನ್ನು ಖರ್ಚು ಮಾಡಲಾಗಿದೆಯೊ ಅದು ಅತ್ಯಂತ ಅಳತೆಗೆಟ್ಟದ್ದು ಮತ್ತು ಅನಗತ್ಯವಾದದ್ದು

6 ರಶೀದಿಗಳ ಲೋಪದೋಷಗಳು ರಶೀತಿ ನಂ 4, 8, 12, 13, 14, 16, 23, 24 ಇವುಗಳಲ್ಲಿ ತಾರೀಖನ್ನು ನಮೂದಿಸಿಲ್ಲ

ಮಹಾವೀರ ಕುಂದ ಕುಂದ ಭವನದ ಉದ್ಘಾಟನೆಗೆ ಖರ್ಚು ಮಾಡಿರುವ ಒಟ್ಟು ಮೊತ್ತ 5,159–33 ರೂಪಾಯಿಗಳು ಇದರಲ್ಲಿ ಶಾಂತರಾಜರು ತಮ್ಮ ಪರಿಶೀಲನೆಯಿಂದ ಅಧಿಕವೆಚ್ಚ ಮತ್ತು ಅನಗತ್ಯವೆಚ್ಚಗಳೆಂದು ಗುರುತಿಸಿರುವ ಹಣ 2984–95 ರೂಪಾಯಿಗಳು

ಶಾಂತರಾಜರು ತಮ್ಮ ವರದಿಯ ಕಡೆಯಲ್ಲಿ ಮೂರು ಸಮಾರಂಭಗಳಲ್ಲಾದ ಒಟ್ಟು ವೆಚ್ಚಗಳ ಮತ್ತು ಅವುಗಳಿಂದ ತಾವು ಪತ್ತೆ ಮಾಡಿದ ಅಂಶಗಳ ತುಲನಾತ್ಮಕ ವಿವರಣೆಯನ್ನೂ ಸಹ ನೀಡಿದ್ದಾರೆ ನಿದರ್ಶನಕ್ಕೆ ಊಟ ಮತ್ತು ಸೌದೆಗಳಿಗಾಗಿ ಖರ್ಚುಮಾಡಿದ

ಹಣ ಒಟ್ಟು 6.483–10 ರೂಪಾಯಿಗಳು ಇದರಲ್ಲಿ 3.452–15 ರೂಪಾಯಿಗಳು ದುಂದುವೆಚ್ಚವೆಂದು ಶಾಂತರಾಜರು ಗುರುತಿಸಿದ್ದಾರೆ

ಮೇಲಿನ ಮೂರು ಸಮಾರಂಭಗಳಿಂದ ಖರ್ಚುಮಾಡಿದ ಒಟ್ಟು ಹಣ 27.210–78 ರೂಪಾಯಿಗಳಾದರೆ, ಶಾಂತರಾಜರು ತಮ್ಮ ವರದಿಯಲ್ಲಿ ಅಧಿಕವೆಚ್ಚ ಮತ್ತು ದುಂದುವೆಚ್ಚವೆಂದು ಗುರುತಿಸಿರುವ ಹಣ 14.650–85 ರೂ ಗಳಾಗುತ್ತವೆ

**ಐತಿಹಾಸಿಕ ವರದಿ :**

ಶಾಂತರಾಜರು ತಾ॥ 25–7–79 ರಂದು ಸಲ್ಲಿಸಿದ ಲೆಕ್ಕಪತ್ರಗಳ ಉಪಸಮಿತಿಯ ಮೇಲಿನ ವರದಿ ಅನೇಕ ದೃಷ್ಟಿಗಳಿಂದ ಬಹಳ ವಿಶಿಷ್ಟವಾದ ವರದಿಯಾಗಿದೆ ಇದು ಶಾಂತರಾಜರ ಆಳವಾದ ಅಭ್ಯಾಸ ಮತ್ತು ಶ್ರಮಭರಿತ ದುಡಿಮೆಯ ಸತ್ವದಿಂದ ಕೂಡಿದ ವರದಿಯಾಗಿದೆ ನಿರ್ಭೀತಿ ಮತ್ತು ಪ್ರಾಮಾಣಿಕತೆಯ ಮೆರುಗಿನಿಂದ ಕೂಡಿದ ವರದಿ ಯಾಗಿದೆ ತತ್ವನಿಷ್ಠೆ ಮತ್ತು ಸೇವಾಕಾಂಕ್ಷೆಯ ಸದಿಚ್ಛೆಯಿಂದ ಕೂಡಿದ ವರದಿಯಾಗಿದೆ ಧಾರ್ಮಿಕ ಸಂಸ್ಥೆಯ ನಿಧಿಗಳ ಸದ್ವಿನಿಯೋಗದ ಕಳಕಳಿಯಿಂದ ಕೂಡಿದ ವರದಿಯಾಗಿದೆ. ಔದಾಸೀನ್ಯ, ಬೇಜವಾಬ್ದಾರಿ ಮತ್ತು ತಾತ್ಸಾರ ಪ್ರವೃತ್ತಿಯ ಅಧಿಕಾರಿಗಳ ಚಿತ್ತಕ್ಕೆ ಚಾಟಿಯೇಟನ್ನು ಕೊಡುವ ವರದಿಯಾಗಿದೆ ಎಲ್ಲಕ್ಕಿಂತ ಹೆಚ್ಚಾಗಿ ಶ್ರವಣಬೆಳಗೊಳ ಕ್ಷೇತ್ರದ ನೈತಿಕಹಿತವನ್ನು ತುಂಬುಹೃದಯದಿಂದ ಬಯಸಿದ ಕ್ಷೇತ್ರರಕ್ಷಣೆಯ ಮಹತ್ವಾಕಾಂಕ್ಷೆಯಿಂದ ಈ ವರದಿ ಕೂಡಿದೆ

ಈಗಾಗಲೇ ತಾ॥ 5–6–79 ರಂದು ವಿದ್ಯಾನಂದರ ಸ್ವಾಗತಕ್ಕೆ ಸಂಬಂಧಿಸಿದಂತೆ ಶಾಂತರಾಜರು ಕಮಿಟಿಗೆ ಆಕ್ಷೇಪಣೆಗಳನ್ನು ಸಲ್ಲಿಸಿರುವ ಹಿನ್ನೆಲೆಯಲ್ಲಿ ಕಮಿಟಿಯ ಛೇರ್ಮನ್ನರೂ, ಕಾರ್ಯದರ್ಶಿಯವರೂ, ಮೇಲಿನ ವರದಿಯನ್ನು ಯಾವ ರೀತಿ ಸ್ವಾಗತಿಸ ಬಹುದು ?

ಕಾರ್ಯದರ್ಶಿಯವರಿಗೆ ಈ ವರದಿ ತಮ್ಮ ಲೋಪದೋಷಗಳನ್ನು ತೋರಿಸಿದ್ದರಿಂದಾಗಿ ಪಥ್ಯವಾಗಲಿಲ್ಲವೆಂದು ತೋರುತ್ತದೆ ಈ ಹಿಂದೆಯೇ ಕಾರ್ಯದರ್ಶಿಯವರು ತಾ॥ 20–7–79 ರಲ್ಲಿ ಚಂದ್ರಯ್ಯನವರಿಗ ಬರೆದ ಪತ್ರದಲ್ಲಿ ಚಾರುಕೀರ್ತಿಸ್ವಾಮೀಜಿಯವರನ್ನು ವೆಚ್ಚಗಳಿಗೆಲ್ಲಾ ಹೊಣೆಗಾರರನ್ನಾಗಿ ಮಾಡಿದ್ದರು !

ಶಾಂತರಾಜರ ವರದಿಯ ಪ್ರತಿ ಕಾರ್ಯದರ್ಶಿಯವರ ಕೈಸೇರಿದ ನಂತರ, ಶಾಂತರಾಜರು ಮತ್ತು ಕಾರ್ಯದರ್ಶಿಯವರ ಭೇಟಿಯೂ ಆಯಿತು ಈ ಭೇಟಿಯ ಕಾಲದಲ್ಲಿ ಕಾರ್ಯದರ್ಶಿಯವರು ಪ್ರತಿಯೊಂದು ಖರ್ಚಿಗೂ ಛೇರ್ಮನ್ನರ ಕ್ರಮಬದ್ಧ ಮಂಜೂರಾತಿಯಿತ್ತೆಂದು ಶಾಂತರಾಜರಿಗೆ ತಿಳಿಸಿ, ಚಂದ್ರಯ್ಯನವರಿಗೆ ಲಿಖಿತ ಮೂಲಕ ಕೊಟ್ಟ

ಉತ್ತರವನ್ನು ಶಾಂತರಾಜರಿಗೆ ಮಾತುಕತೆಯ ಸಂದರ್ಭದಲ್ಲಿ ಹೇಳಿದರು.

ವರದಿಯ ಪ್ರಸ್ತಾಪಗಳಿಗೆ ಸಮಂಜಸವಾದ ಉತ್ತರ ಕೊಡದೆ ಸ್ವಾಮೀಜಿಯವರ ಕಡೆ ಕೈತೋರಿಸುವ ಕಾರ್ಯದರ್ಶಿಯವರ ವರ್ತನೆಯಿಂದಾಗಿ ಶಾಂತರಾಜರು ಕಳವಳ ಗೊಂಡರು ಕಮಿಟಿ ಹಿಡಿಯುತ್ತಿರುವ ಅಡ್ಡದಾರಿಯಿಂದಾಗಿ ಶಾಂತರಾಜರು ಚಿಂತಿತ ರಾದರು ತಮ್ಮ ವರದಿಯ ಧ್ಯೇಯೋದ್ದೇಶಗಳನ್ನು ಕಮಿಟಿಗೆ ಸಂಬಂಧಪಟ್ಟವರು ಸರಿಯಾಗಿ ಯಥಾವತ್ತಾಗಿ ಅರ್ಥ ಮಾಡಿಕೊಳ್ಳದಿರುವುದನ್ನು ಅರಿತು ವಿಷಾದವಾಯಿತು ಈ ಕಾರಣಗಳಿಂದಾಗಿ ಶಾಂತರಾಜರು ತಾ॥ 28–7–79 ರಲ್ಲಿ ಕಮಿಟಿಯ ಛೇರ್ಮನ್ನ ರಾದ ಸ್ವಾಮೀಜಿಯವರಿಗೆ ಈ ವಿಚಾರಕ್ಕೆ ಸಂಬಂಧಿಸಿದಂತೆ ಇನ್ನೊಂದು ಪತ್ರವನ್ನು ಬರೆದರು ಈ ಪತ್ರ ಎಸ್ ಪಿ ಶಾಂತರಾಜರ ಪರಿಶುದ್ಧವಾದ ಮನಸ್ಸು ಮತ್ತು ಕ್ಷೇತ್ರನಿಷ್ಠೆಯ ಪ್ರತೀಕವಾಗಿದೆ

ಛೇರ್ಮನ್ ತಾ॥ 28–7–1979

ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ

ಶ್ರವಣಬೆಳಗೊಳ

ಪೂಜ್ಯ ಸ್ವಾಮೀಜಿಯವರೆ,

ತಾವು ನನ್ನನ್ನು ಮೇನೇಜಿಂಗ್ ಕಮಿಟಿಯ ಸದಸ್ಯನನ್ನಾಗಿ ನೇಮಿಸಿ ಸಂಸ್ಥೆಯ ಸೇವೆಯನ್ನೂ ಮಾಡುವ ಅವಕಾಶವನ್ನು ಮಾಡಿಕೊಟ್ಟದ್ದಕ್ಕಾಗಿ ತಮ್ಮನ್ನು ನಾನು ವಂದಿಸುತ್ತೇನೆ

ಆಗಿಂದಾಗ್ಗೆ ನನಗೆ ವಹಿಸಿದ ಜವಾಬ್ದಾರಿಗಳನ್ನು ನನ್ನ ಆತ್ಮಸಾಕ್ಷಿಗೆ ಅನುಗುಣ ವಾಗಿ ಮತ್ತು ಸಾಮರ್ಥ್ಯಕ್ಕೆ ತಕ್ಕಂತೆ ನಾನು ನಿರ್ವಹಿಸಿದ್ದೇನೆಂದು ತಿಳಿದಿದ್ದೇನೆ

ಇತ್ತೀಚೆಗೆ ಕಮಿಟಿಯು ಖಾತೆಯ ಪರಿಶೀಲನೆ ಮತ್ತು ಮೇಲ್ವಿಚಾರಣೆಯ ಕಾರ್ಯ ವನ್ನು ನನಗೆ ಒಪ್ಪಿಸಲಾಗಿತ್ತು ಆ ಕೆಲಸವನ್ನು ವಿನಯದಿಂದ ಒಪ್ಪಿಕೊಂಡ ನಾನು ಖಾತೆಗಳೆಲ್ಲವನ್ನೂ ನೋಡಿದ್ದೇನೆ ತುಂಬಾ ಚಕಿತಗೊಳಿಸುವ ರೀತಿಯಲ್ಲಿ, ಕೊಳಕಾದ ಮತ್ತು ಅಸ್ತವ್ಯಸ್ತವಾದ ಕ್ರಮದಲ್ಲಿ ಈ ಖಾತೆಗಳನ್ನು ಇಟ್ಟಿರುವುದನ್ನು ಗಮನಿಸಿದ ನಾನು ಈ ವಿಷಯವನ್ನು ಕಾಲ ಕಾಲಕ್ಕೆ ಸಂಬಂಧಪಟ್ಟ ಅಧಿಕಾರಿಗಳ ಗಮನಕ್ಕೆ ತಂದಿದ್ದೇನೆ

ಖಾತೆಯ ಲೆಕ್ಕಪತ್ರಗಳನ್ನಿಡುವ ವಿಷಯವನ್ನು, ಖಾತೆಯ ವಿಭಾಗಕ್ಕೆ ಮನವರಿಕೆ ಮಾಡಿಕೊಡಲು ನಾನು ಶ್ರಮವಹಿಸಿದ್ದೇನೆ ಸಂಸ್ಥೆಯ ವ್ಯವಹಾರಗಳ ಆಡಳಿತಕ್ಕೆ

ಸಂಬಂಧಿಸಿದ ಪ್ರತಿಯೊಬ್ಬರೂ ಅಲ್ಲಿಯ ಬೈಲಾಗಳು ಮತ್ತು ನಿಬಂಧನೆಗಳ ಚೌಕಟ್ಟಿನೊಳಗೇ ಕೆಲಸಮಾಡಬೇಕಾಗುತ್ತದೆ ಈ ಖಾತೆಗಳನ್ನಿಟ್ಟಿರುವುದನ್ನು ಆಳವಾಗಿ ಅಭ್ಯಸಿಸಿದ ಮೇಲೆ ಸಂಸ್ಥೆಯ ನಿಧಿಗಳ ನಿರ್ವಹಣೆಯ ವಿಷಯದಲ್ಲಿ ಸಂಬಂಧಪಟ್ಟ ಅಧಿಕಾರಿಗಳು ಬೈಲಾಗಳಿಗೆ ಅತಿಕಡಿಮೆ ನಿಗಾವಹಿಸಿದ್ದಾರೆಂದು ಹೇಳಲು ನಾನು ನಿಜವಾಗಿಯೂ ವಿಷಾಧಿಸುತ್ತೇನೆ ಇದನ್ನು ಕುರಿತ ನನ್ನ ವರದಿ ಸ್ವಯಂ ವಿವರಣಾತ್ಮಕವಾಗಿದೆ ಮತ್ತು ಕಾರ್ಯದರ್ಶಿಯೊಡನಾದ ಮಾತುಕತೆಯಲ್ಲಿ ಪ್ರತಿಯೊಂದು ಖರ್ಚಿಗೂ ಧರ್ಮದರ್ಶಿಗಳ ಕ್ರಮಬದ್ಧ ಮಂಜೂರಾತಿಯಿತ್ತೆಂದು ನನಗೆ ತಿಳಿಸಲಾಯಿತು ಈ ಹೇಳಿಕೆಯಿಂದ ನನಗೆ ನಿಜವಾಗಿಯೂ ನೋವಾಯಿತು ಕಾರಣ ಸ್ವಾಮೀಜಿಯವರು ಪ್ರಧಾನವಾಗಿ ಧಾರ್ಮಿಕ ಮುಖಂಡರಾಗಿದ್ದು, ತತ್ಸಂಬಂಧವಾದ ಕಾರ್ಯಾಲಯವು ಇನ್ನೂ ಹೆಚ್ಚಿನ ಗುರುತರವಾದ ಕರ್ತವ್ಯಗಳನ್ನೂ ಇದರೊಟ್ಟಿಗೆ ಜವಾಬ್ದಾರಿಗಳನ್ನೂ ಹೊಂದಿರುತ್ತದೆ ಹೀಗಾಗಿ ಅವರೇ ಧರ್ಮದರ್ಶಿಗಳಾಗಿದ್ದರೂ, ಆಡಳಿತಾಧಿಕಾರಿಗಳಾದ ಕಾರ್ಯದರ್ಶಿಯವರೇ ಸಂಸ್ಥೆಯ ನಿಧಿಗಳ ವಿನಿಯೋಗದಲ್ಲಿ ಹೆಚ್ಚಿನ ಮುತುವರ್ಜಿ ಮತ್ತು ಎಚ್ಚರವಹಿಸಿರಬೇಕಾದುದು ಹಾಗಿರುವಾಗ ಕಾರ್ಯದರ್ಶಿಯವರಿಂದ ಬಂದ ಹೇಳಿಕೆಯು ಸಂಸ್ಥೆಯ ಜಮಾ-ಖರ್ಚುಗಳ ವಿವರಗಳಲ್ಲಿ ಕಂಡುಬರುವ ದೋಷದೂಷಗಳಿಗೆ ಸ್ವಾಮೀಜಿಯವರನ್ನು ಒಳಗುಮಾಡುವ ಅವರ ಪ್ರಯತ್ನದಿಂದಾಗಿ ವ್ಯಾಕುಲತೆಯುಂಟಾಗುತ್ತದೆ ಸರ್ಕಾರವು ರಚಿಸಿರುವ ನಿರ್ಬಂಧನೆಗಳ ಪ್ರಕಾರ ವಿಧಿನಿಯಮಗಳಿಗನುಸಾರವಾಗಿ ಯಾವುದೇ ಭಯ ಅಥವಾ ಹಿತಾಸಕ್ತಿಗಳಿಲ್ಲದೆ ಸಂಸ್ಥೆಯ ನಿಧಿಗಳನ್ನು ನಿರ್ವಹಿಸುವ ಆಡಳಿತಾಧಿಕಾರಿಯೆಂದರೆ ಕಾರ್ಯದರ್ಶಿಯೇ ಎಂಬುದು ಸ್ಪಷ್ಟ ಹೀಗಿರುವಾಗ ಈ ವಿವಾದಕ್ಕೆ ಸ್ವಾಮೀಜಿಯವರನ್ನು ಹೇಗೆ ಮತ್ತು ಏತಕ್ಕೆ ತಾನು ಎಳೆಯಬೇಕಾಗಿತ್ತೆಂದು ನಾನು ಆಶ್ಚರ್ಯಗೊಂಡಿದ್ದೇನೆ

ಸ್ವಾಮೀಜಿಯವರ ಗೌರವವನ್ನು ಉಳಿಸುವ ಮತ್ತು ಸಂಸ್ಥೆಯ ವ್ಯವಹಾರಗಳನ್ನು ನಿರ್ವಹಿಸುತ್ತಿರುವ ಸಿಬ್ಬಂದಿಯವರಿಂದಾಗುವ ಹೀನಲೋಪಗಳು ಅವರನ್ನು ತಟ್ಟದಂತೆ ನೋಡಿಕೊಳ್ಳುವ ಕರ್ತವ್ಯ ಪರಕ್ಕೆ ಸಂಬಂಧಪಟ್ಟ ಪ್ರತಿಯೊಬ್ಬರದೂ ಆಗಿರುತ್ತದೆ ಬರಲಿರುವ ಮಹಾಮಸ್ತಕಾಭಿಷೇಕ ಆಚರಣೆಯ ಗುರುತರವಾದ ಕೆಲಸಗಳನ್ನು, ಅವನ್ನು ಯಶಸ್ವಿಯಾಗಿ ನಿರ್ವಹಿಸುವಲ್ಲಿ ಸ್ವಾಮೀಜಿಯವರ ಹೊಣೆಯನ್ನೂ ನಾನು ಬಲ್ಲೆ ಸಂಬಂಧಪಟ್ಟ ಎಲ್ಲ ವ್ಯಕ್ತಿಗಳಿಗೂ ಸಂಘಟನೆಯಿಂದ ಕೆಲಸ ಮಾಡುವಂತೆ ಸೂಕ್ತ ನಿರ್ದೇಶನ ನೀಡುವ ಮತ್ತು ಅರ್ಹರೀತಿಯಲ್ಲಿ ಉತ್ಸವವನ್ನು ನಡೆಸುವ ಸಾಮರ್ಥ್ಯವು ಅವರಿಗಿದೆಯೆಂದು ನನಗೆ ಪೂರ್ಣಭರವಸೆಯಿದೆ ಈ ಸಂದರ್ಭವು ಎಲ್ಲ ಸದಸ್ಯರಿಗೂ ಸ್ವಯಂಪ್ರೇರಣೆಯಿಂದ ಜವಾಬ್ದಾರಿಗಳನ್ನು ಹೊರುವ ಮತ್ತು ತಮ್ಮ ಕಾರ್ಯಗಳನ್ನು ನಿಸ್ವಾರ್ಥವಾಗಿ ಮಾಡುವ ಹೊಣೆಯನ್ನು ಇತ್ತಿದೆ

ಈ ಸಂಸ್ಥೆಗಾಗಿ ನನ್ನ ಸೇವೆಯನ್ನು ಸಲ್ಲಿಸುವ ಪ್ರಚೋದನೆಯಾಗುತ್ತಿದ್ದಾಗ್ಯೂ ನನ್ನ ಶಿಫಾರಸುಗಳನ್ನು ಪರಿಗಣಿಸುತ್ತಿರುವ ರೀತಿ ಮತ್ತು, ನಮ್ಮ ಸ್ವಾಮೀಜಿಯವರ ಉನ್ನತ ಸ್ಥಾನವು ಈ ಗೊಂದಲಕ್ಕೆ ಈಡಾಗುತ್ತಿರುವ ವೈಖರಿಗಳಿಂದ ನಿಜವಾಗಿಯೂ ನಾನು ಸ್ತಂಭೀಭೂತನಾಗಿದ್ದೇನೆ ನಾನು ಸದಸ್ಯನಾಗಿ ಮುಂದುವರೆದರೆ ನನ್ನಿಂದ ಏನಾದರೂ ಉಪಯುಕ್ತವಾದ ಉದ್ದೇಶವು ಸಾಧನೆಯಾದೀತೆ ಮತ್ತು ನನ್ನ ಪ್ರಯತ್ನಗಳಿಗೇನಾದರೂ ಫಲ ದೊರಕೀತೇ ಎಂದು, ಈ ಹಂತದಲ್ಲಿ ನಾನೊಂದು ಕ್ಷಣ ನಿಂತು ಯೋಚಿಸುವಂತಾಗಿದೆ!

ಪೂಜ್ಯರಾದ ತಮ್ಮೊಂದಿಗೆ ನಿವೇದಿಸಿಕೊಂಡನಂತರ ಈ ಬಗ್ಗೆ ನಾನೊಂದು ನಿರ್ಧಾರ ತೆಗೆದುಕೊಳ್ಳಬಯಸುತ್ತೇನೆ

ಗೌರವಗಳೊಂದಿಗೆ<br>
ನಿಮ್ಮ ಭಕ್ತ<br>
(ಸಹಿ)<br>
ಎಸ್ ಪಿ ಶಾಂತರಾಜ್

ಶಾಂತರಾಜರು ಈ ಪತ್ರವನ್ನು ಬರೆದ ದಿವಸವೇ ಚಾರುಕೀರ್ತಿಸ್ವಾಮೀಜಿಯವರು ಶಾಂತರಾಜರಿಗೆ ಒಂದು ಪತ್ರ ಬರೆದು ಅವರ ವರದಿಯನ್ನು ಅಭ್ಯಾಸಮಾಡಲು ಸಮಯ ಬೇಕಾಗುವುದೆಂದೂ, ಆದರೂ ಈ ವಿಚಾರವಾಗಿ ಬೇಗ ಉತ್ತರ ನೀಡುವಂತೆ ಕಾರ್ಯದರ್ಶಿಯವರಿಗೆ ಸೂಚನೆಗಳನ್ನಿತ್ತಿರುವುದಾಗಿಯೂ ತಿಳಿಸಿದರು

ಇದರಂತೆ ಕಾರ್ಯದರ್ಶಿಯವರು ತಾ॥ 2–7–79 ಎಂಬ ತಪ್ಪು ತಾರೀಖನ್ನೊಳಗೊಂಡ ಒಂದು ಪತ್ರವನ್ನು ತಾ॥ 2–8–79 ರಲ್ಲಿ ಶಾಂತರಾಜರಿಗೆ ಬರೆದು ಅವರ ತಾ॥ 25–7–79 ರ ವರದಿಗೆ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು ಕಾರ್ಯದರ್ಶಿಯವರು ಉತ್ತರಕೊಡುವಾಗ ಶಾಂತರಾಜರು ಪ್ರಸ್ತಾಪಿಸಿರುವ ಮೂಲಭೂತವಾದ ಪ್ರಶ್ನೆಗಳಿಗೆ ವಿವರಣೆಯನ್ನು ಕೊಡುವ ಪ್ರಯತ್ನಕ್ಕೆ ಕೈಹಾಕಿಲ್ಲ ವರದಿಯ ಪರಿಶೀಲನೆಗಳ ಆರೋಪದಿಂದ ನುಣಿಚಿಕೊಳ್ಳುವ ಧಾಟಿಯಲ್ಲಿ ಅವರ ಪ್ರತಿಕ್ರಿಯೆಯಿದೆ ಅವರ ಪತ್ರದ ಮುಖ್ಯಾಂಶಗಳು ಹೀಗಿವೆ

" ಕಮಿಟಿಯು ಮಂಜೂರು ಮಾಡಿದ ಹಣಕ್ಕಿಂತ ಹೆಚ್ಚಾಗಿ ನಾವು ವೆಚ್ಚಮಾಡಿಲ್ಲ ಹಣ ಖರ್ಚುಮಾಡುವುದನ್ನು ಕಡಿತಗೊಳಿಸುವ ಇಚ್ಛೆ ನಿಮಗೆ ಇದ್ದಿದ್ದರೆ ಅದನ್ನು ಮಂಜೂರು ಮಾಡುವಾಗಲೇ ಸೂಚಿಸಬೇಕಾಗಿತ್ತು ಸಮಾರಂಭಗಳನ್ನು ನೆರವೇರಿಸು

ವಾಗ ಅದಕ್ಕಾಗಿ ಗೊತ್ತಾದ ಸೂತ್ರಗಳಿಲ್ಲ. ರಶೀದಿಗಳ ಫೈಲನ್ನು ನಾವು ಅಂತಿಮವಾಗಿ ಪರಿಶೀಲಿಸುವುದಕ್ಕೆ ಮುಂಚೆಯೇ ಮತ್ತು ಪ್ರತಿಯೊಂದು ಸಮಾರಂಭಗಳ ಫೈಲು ಮುಕ್ತಾಯವಾದ ವರದಿ ಬರುವುದಕ್ಕೆ ಮುಂಚೆಯೇ ನೀವು ಈ ಕಛೇರಿಯಿಂದ ತೆಗೆದು ಕೊಂಡು ಹೋಗಿರುವಿರಿ. ಹೇಗೂ ತಾ॥ 30-7-79 ರಂದು ಫೈಲುಗಳನ್ನು ಹಿಂತಿರುಗಿ ಪಡೆದಿದ್ದೇವೆ. ಅವುಗಳನ್ನು ಕಡೆಯದಾಗಿ ಮುಕ್ತಾಯಗೊಳಿಸುವುದಕ್ಕೆ ಮುಂಚೆ ಪುನಃ ಪರಿಶೀಲಿಸುತ್ತೇವೆ ”

ಒಂದು ಸಂಸ್ಥೆಯ ಜವಾಬ್ದಾರಿಯುತವಾದ ಅಧಿಕಾರ ಹುದ್ದೆಯಲ್ಲಿರುವ ಕಾರ್ಯದರ್ಶಿಯವರ ಆಡಳಿತ ವೈಖರಿ ಹೀಗಿದೆ! ಕಮಿಟಿ ಮಂಜೂರು ಮಾಡಿದ ಹಣದ ಪರಿಧಿಯೊಳಗೇ ನಾವು ಖರ್ಚನ್ನು ನಿರ್ವಹಿಸಿದ್ದೇವೆ ಎಂದು ಬರೆದರೆ ಅನಗತ್ಯವೆಚ್ಚ ಮತ್ತು ದುಂದುವೆಚ್ಚಗಳಾಗಿಲ್ಲ ಎಂದು ಹೇಳಿದಂತಾಗಲಿಲ್ಲ. ಅನೇಕ ಖರ್ಚುಗಳು ಅನಗತ್ಯ ಮತ್ತು ದುಂದುವೆಚ್ಚಗಳ ರೂಪದಲ್ಲಿವೆ ಎಂದು ಶಾಂತರಾಜರು ಹೇಳಿದ್ದಾರೆಯೇ ಹೊರತು ಖರ್ಚುಗಳನ್ನು ಕಡಿಮೆ ಮಾಡಿ ಎಂದು ಅವರು ಎಲ್ಲೂ ಸೂಚಿಸಿಲ್ಲ. ಕಮಿಟಿಯ ಲೆಕ್ಕಪತ್ರಗಳು ಮತ್ತು ರಶೀದಿಗಳನ್ನು ಕ್ರಮಬದ್ಧವಾಗಿ ಸಂರಕ್ಷಿಸುವ ಜವಾಬ್ದಾರಿ ಕಾರ್ಯದರ್ಶಿಯವರದ್ದೆಂದು ಕಮಿಟಿಯ 10 ನೇ ನಿಯಮದ 4 ನೇ ಮತ್ತು 5 ನೆಯ ಉಪನಿಯಮಗಳು ಸ್ಪಷ್ಟವಾಗಿ ಹೇಳುತ್ತಿರುವಾಗ ಫೈಲುಗಳು ಪೂರ್ಣವಾಗಿ ಮುಕ್ತಾಯವಾಗುವುದಕ್ಕೆ ಮುಂಚೆ ತಗೆದುಕೊಂಡು ಹೋಗಿಬಿಟ್ಟಿರಿ ಎಂದು ಹೇಳಿದರೆ ಅದು ಕಾರ್ಯದರ್ಶಿಯವರ ಕರ್ತವ್ಯಲೋಪವನ್ನು ತೋರಿಸುತ್ತದೆ!

ಹಣಕಾಸುಪತಿಯಾದ ಇವರೇ ಕ್ರಮಬದ್ಧವಾದ ರಶೀದಿಗಳನ್ನು ಪಡೆಯಬೇಕಲ್ಲವೆ? ವಸ್ತದ ರಶೀದಿಯನ್ನು ಕೊಟ್ಟ ಕೂಡಲೇ ಕಾರ್ಯದರ್ಶಿಯವರು ಖಾತೆಗೆ ಹಚ್ಚಿ ಹಾಕಬೇಕು ನಂತರವೇ ಹಣಕೊಡಬೇಕು. ಆದರೆ ಇಲ್ಲಿ ಕಾರ್ಯದರ್ಶಿಯವರ ಆಡಳಿತದ ವೈಶಿಷ್ಟ್ಯವೆಂದರೆ ಹಣ ಬೇಕಾದಾಗ ಮೇಲೆ ಯಾವುದೋ ಒಂದು ದಿವಸ ರಶೀದಿಯ ಮೇಲೆ ಪರಿಶೀಲನೆಯನ್ನು ಮಾಡದೆ ಸಹಿ ಹಾಕುವುದು ಇದು ಅವರ ಪದ್ಧತಿಯೋ ಏನೋ! ಎಂಬಂತ ಅವರ ಮೌಲಿಕ ಉತ್ತರವಿದೆ!

ಹೋಗಲಿ ಫೈಲುಗಳು ಸಂಪೂರ್ಣವಾಗಿಲ್ಲದೇ ಹೋದರೆ ಅವುಗಳನ್ನು ಹೇಗೆ ಹೊರಗೆ ಕೊಟ್ಟರು? ಅವರು ಸಿಬ್ಬಂದಿ ಕೊಟ್ಟಾಗ ಅವರ ಗಮನಕ್ಕೆ ಇಲ್ಲವೇ ಹೇಗೆ ಸುಮ್ಮನಿದ್ದರು? ಉಪಸಮಿತಿಯ ಪರಿಶೀಲನೆಯೆಲ್ಲಾ ಮುಗಿದು ವರದಿ ತಮ್ಮ ಕೈಸೇರಿದ ಮೇಲೆ ಆ ವರದಿಯಲ್ಲಿ ತಮ್ಮ ಬೇಜವಾಬ್ದಾರಿತನ ಪಡಿಮೂಡಿರುವುದನ್ನು ಕಂಡು ರಶೀದಿಗಳ ಫೈಲೇ ಪೂರ್ಣವಾಗಿರಲಿಲ್ಲ, ಎಂದು ಹೇಳುವುದು ತುಂಬಾ ನಾಚಿಕೆಗೇಡಿನ ಸಂಗತಿಯಾಗುತ್ತದೆ.

**ಶಾಂತರಾಜರ ಪ್ರತಿಭಟನೆ :**

ಕಾರ್ಯದರ್ಶಿಯವರು ತಮ್ಮ ವರದಿಗೆ ತೋರಿದ ಪ್ರತಿಕ್ರಿಯೆಯಿಂದಾಗಿ ಶಾಂತ ರಾಜರು ತಾ॥ 7-8-1979 ರಂದು ಕಾರ್ಯದರ್ಶಿಯವರ ಹೇಳಿಕೆಗಳನ್ನು ಆಕ್ಷೇಪಿಸಿ ಒಂದು ಪತ್ರ ಬರೆದರು ಪತ್ರದ ಮುಖ್ಯಾಂಶಗಳು ಹೀಗಿವೆ

"ನನ್ನ ಪರಿಶೀಲನೆಗಳನ್ನು ಯಥಾವತ್ತಾದ ರೀತಿಯಲ್ಲಿ ತೆಗೆದುಕೊಳ್ಳದೇ ಇರುವುದಕ್ಕಾಗಿ ನಾನು ವಿಷಾದಿಸುತ್ತೇನೆ ಅಲ್ಲದೆ ನಿಮ್ಮ ಕ್ರಮಗಳನ್ನು ಎತ್ತಿ ಹಿಡಿಯುವುದಕ್ಕಾಗಿ ನೀವು ವಿಫಲಪ್ರಯತ್ನ ನಡೆಸುತ್ತಿರುವುದು ಅದರಲ್ಲಿ ಕಂಡುಬರುತ್ತದೆ ಸಂಸ್ಥೆಯ ನಿಧಿಯನ್ನು ವಿನಿಯೋಗಿಸುವಾಗ ಸಂಬಂಧಪಟ್ಟ ಅಧಿಕಾರವರ್ಗದವರ ಮನಸ್ಸಿನಲ್ಲಿ, ಆರೋಗ್ಯಕರ ವಿಧಾನಗಳನ್ನು ಉಂಟುಮಾಡುವುದೇ ನನ್ನ ಆಕಾಂಕ್ಷೆಯಾಗಿದೆ ಆದರೆ ಸಂಬಂಧಪಟ್ಟವರ ಮನಸ್ಸಿನ ಮೇಲೆ ಇದು ಬಹಳ ಸ್ವಲ್ಪ ಪ್ರಭಾವ ಬೀರಿರುವುದನ್ನು ಕಂಡು ನನಗೆ ನೋವುಂಟಾಗಿದೆ ದಯವಿಟ್ಟು ನಾನೆತ್ತಿರುವ ಅಂಶಗಳ ಮೇಲೆ ವಿವರವಾದ ವಿವರಣೆಯನ್ನು ಕಳುಹಿಸಿಕೊಡಿ

ನಿಮ್ಮ ಆಫೀಸಿನಿಂದ ನಿಮ್ಮ ಗಮನಕ್ಕೆ ಬರದ ಹಾಗೆ ನಾನು ರಶೀದಿಗಳ ಫೈಲನ್ನು ಕೊಂಡೊಯ್ದೆ ಎಂಬಂತೆ ನೀವು ಬರೆದಿರುವುದನ್ನು ನಾನು ಪ್ರಬಲವಾಗಿ ಆಕ್ಷೇಪಿಸುತ್ತೇನೆ ನಾನು ಇದರ ಬಗ್ಗೆ ನಿಮ್ಮ ಗಮನಕ್ಕೆ ತಂದದ್ದನ್ನೂ, ಅನುಸರಿಸಿ ನಿಮ್ಮ ಆಫೀಸಿನಿಂದ ಸಂಬಂಧಪಟ್ಟ ಫೈಲನ್ನು ಪಡೆದದ್ದನ್ನೂ ದಯವಿಟ್ಟು ನೆನಪು ಮಾಡಿಕೊಳ್ಳಿ, ಎರಡನೆಯದಾಗಿ ನಾನು ಉಲ್ಲೇಖಿಸಿರುವ ಸಮಾರಂಭಗಳು ಏಪ್ರಿಲ್ 79 ರಲ್ಲಿ ನಡೆದಿವೆ ಅಲ್ಲದೆ ಎಲ್ಲಾ ವೆಚ್ಚಗಳನ್ನು ಅಂತಿಮಗೊಳಿಸಿ ಏಪ್ರಿಲ್ ಕಡೆಯೊಳಗಾಗಿ ಲೆಕ್ಕದ ಪುಸ್ತಕಗಳಲ್ಲಿ ಬರೆದಿಡಲಾಗಿತ್ತು ನಿಮ್ಮ ಆಫೀಸಿನಿಂದ ಮೇ ತಿಂಗಳ ಕಡೆಯ ವಾರದಲ್ಲಿ ನಾನು ಫೈಲುಗಳನ್ನು ತೆಗೆದುಕೊಂಡೆ ಎಂಬುದನ್ನೂ ನೀವು ಸ್ಮರಿಸಿ ಇಷ್ಟೆಲ್ಲಾ ನಡೆದಿದ್ದರೂ ಫೈಲುಗಳನ್ನು ತೆಗೆದುಕೊಂಡು ಹೋಗುವುದರ ಮೂಲಕ ನಿಮ್ಮ ಪರಿಶೀಲನೆಯ ಕಾರ್ಯಕ್ಕೆ ನಾನು ತಡೆಯೊಡ್ಡಿದೆ ಎಂಬರ್ಥದ ನಿಮ್ಮ ನಕಾರಾತ್ಮಕ ರೂಪದ ಹೇಳಿಕೆಯನ್ನು ನಾನು ಅರ್ಥಮಾಡಿಕೊಳ್ಳಲಾಗಿಲ್ಲ !

ಕಡೆಯದಾಗಿ ನಾನು ನಿಮ್ಮಲ್ಲಿ ಪ್ರಾರ್ಥಿಸಿಕೊಳ್ಳುವುದೇನೆಂದರೆ ನಮಗೆಲ್ಲರಿಗೂ ಸಂಬಂಧಪಟ್ಟ ಸಂಸ್ಥೆಯ ಉತ್ತಮ ಹಿತಾಸಕ್ತಿ ಮತ್ತು ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ನಾನು ಯಾವ ಯಾವ ಪರಿಶೀಲನೆಗಳನ್ನು ಎತ್ತಿತೋರಿರುವೆನೋ ಅವುಗಳ ವಿಚಾರವಾಗಿ ಅನಗತ್ಯವಾದ ವಿವಾದಗಳನ್ನು ಉಂಟುಮಾಡಬೇಡಿ "

**ಭ್ರಷ್ಟಾಚಾರಕ್ಕೆ ಪ್ರೋತ್ಸಾಹ :**

ಶಾಂತರಾಜರು ಕಾರ್ಯದರ್ಶಿಯವರ ಪತ್ರಕ್ಕೆ ಆಕ್ಷೇಪಣೆಯನ್ನು ವ್ಯಕ್ತಪಡಿಸುವ

ಮೂರುದಿವಸಕ್ಕೆ ಮುಂಚೆ, ತಾ॥ 3/4–8–1979 ರಂದು ಕಮಿಟಿಯ ಸಭೆಯೂ ಸಹ ನಡೆದಿತ್ತು, ಆ ಸಭೆಯಲ್ಲಿ ಶಾಂತರಾಜರ ಅಪೇಕ್ಷೆಯಂತೆ ಅವರ ವರದಿಯನ್ನು ಚರ್ಚೆಗಾಗಿ ಇಡಲಾಗಿತ್ತು . ಈ ವಿಷಯಕ್ಕೆ ಸಂಬಂಧಿಸಿದಂತೆ ಅಂದಿನ ಸಭೆಯ ನಡವಳಿಕೆಯ ಪತ್ರದಲ್ಲಿ ವಿಷಯ 2 ರಲ್ಲಿ ಹೀಗೆ ನಿರ್ಣಯವನ್ನು ಮಾಡಿದ್ದಾರೆ

ನಿರ್ಣಯ 1979 ಮಾರ್ಚ್‌ನಿಂದ ಹಿಡಿದು ಜೂನ್‌ವರೆಗಿನ ಲೆಕ್ಕಗಳನ್ನು ಅನುಮೋದಿಸಲಾಗಿದೆ

ಎಸ್ ಪಿ ಶಾಂತರಾಜರು ರಥೋತ್ಸವದ ಸಮಯದ ವೆಚ್ಚಗಳ ಬಗೆಗೆ ಪ್ರಸ್ತಾಪಿಸಿರುವ ಪರಿಶೀಲನೆಗೆ ಕಾರ್ಯದರ್ಶಿಯವರು ಅವರಿಗೆ ಉತ್ತರ ನೀಡಬೇಕೆಂದು ಸೂಚಿಸಲಾಗಿದೆ

ಇದೊಂದು ಬಹಳ ವಿಚಿತ್ರವಾದ ವ್ಯವಹಾರ ಶೂನ್ಯ ನಿರ್ಣಯವಾಗಿದೆ ಶಾಂತರಾಜರು ಏಪ್ರಿಲ್ ತಿಂಗಳ ವೆಚ್ಚಕ್ಕೆ ಸಂಬಂಧಿಸಿದಂತೆ ಅನೇಕ ಗುರುತರವಾದ ಅಕ್ರಮ ವ್ಯವಹಾರಗಳನ್ನು ಸ್ಪಷ್ಟವಾಗಿ ಕಮಿಟಿಯ ಗಮನಕ್ಕೆ ತಂದಿರುವಾಗ, ಅವುಗಳಿಗೆ ಕಾರ್ಯದರ್ಶಿಯವರು, ಇನ್ನೂ ಸಮಂಜಸವಾದ ವಿವರಣೆಯನ್ನು ಕೊಡದೇ ಇರುವಾಗ ಕಮಿಟಿಯು ಆ ವೆಚ್ಚಗಳನ್ನೆಲ್ಲಾ ಅನುಮೋದಿಸಿರುವುದು ಪುರುಷತ್ವವೇ ಸಂಶಯಕ್ಕೊಳಗಾಗಿರುವ ವರನಿಗೆ ಮದುವೆ ಮಾಡಿದಂತಿದೆ ಪ್ರಶ್ನಿತವಾದ ವೆಚ್ಚಗಳಿಗೆ ಮಂಜೂರಾತಿಯಿತ್ತನಂತರ ಆ ವೆಚ್ಚಗಳನ್ನು ನಿರ್ವಹಿಸಿದವರು ಅವುಗಳ ಲೋಪದೋಷಗಳಿಗೆ ನಂತರ ಎಂತಹ ಉತ್ತರ ಕೊಡಬಹುದು ! ಕಮಿಟಿಯ ಈ ನಿರ್ಣಯ ಭ್ರಷ್ಟಾಚಾರಕ್ಕೆ ಸ್ಪಷ್ಟ ಪ್ರೋತ್ಸಾಹವಲ್ಲದೆ ಬೇರೇನೂ ಅಲ್ಲ ! (ಈ ನಿರ್ಣಯವನ್ನು ಅಂದಿನ ಸಭೆಯಲ್ಲಿ ವಾಸ್ತವವಾಗಿ ಮಂಡಿಸಿತ ಮಾಡಿರಲಿಲ್ಲ ಏಪ್ರಿಲ್ ತಿಂಗಳ ವೆಚ್ಚವನ್ನು ಮಂಜೂರು ಮಾಡುವುದನ್ನು ಚಂದ್ರಯ್ಯನವರು ಸ್ಪಷ್ಟವಾಗಿ ವಿರೋಧಿಸಿದ್ದರು ಈ ವಿರೋಧದಿಂದಾಗಿ, ಕಾರ್ಯದರ್ಶಿಯವರು ಶಾಂತರಾಜರಿಗೆ ಉತ್ತರ ನೀಡಿದನಂತರ ಈ ವಿಷಯವನ್ನು ಮುಂದಿನ ಸಭೆಯಲ್ಲಿ ತೀರ್ಮಾನಿಸಬೇಕೆಂದು ಚರ್ಚಿಸಲಾಗಿತ್ತು ಆದರೆ ಮುಂದೆ ಬಂದ ಸಭೆಯ ನಡವಳಿಕೆ ಪತ್ರದಲ್ಲಿ, ಸಭೆಯಲ್ಲಿ ನಡೆದುದಕ್ಕೆ ಪ್ರತಿಕೂಲವಾಗಿ ನಿರ್ಣಯವನ್ನು ಬರೆಯಲಾಗಿತ್ತು ಕಮಿಟಿಯ ಸಭೆಯಲ್ಲಿ ನಡೆಯುವುದೇ ಒಂದಾದರೆ ನಂತರ ಮುಂದೆ ಯಾವಾಗಲೋ ಬರುವ ನಡವಳಿಕೆ ಪತ್ರದಲ್ಲಿ ಬರೆದಿರುವುದೇ ಇನ್ನೊಂದಾಗಿರುತ್ತಿತ್ತು ! ಈ ಅಕ್ರಮಗಳಿಂದ ಬೇಸರಗೊಂಡಿದ್ದ ಚಂದ್ರಯ್ಯನವರು ಸಭೆಯಲ್ಲಾದ ನಿರ್ಣಯಗಳನ್ನು ತಕ್ಷಣವೇ ಸಭೆಯಲ್ಲೇ ಬರೆದು ಛೇರ್ಮನ್‌ರವರು ಸಭೆಯಲ್ಲೇ ರುಜು ಮಾಡಬೇಕೆಂದು, ಪ್ರತಿಯೊಂದು ಸಭೆಯಲ್ಲೂ ಒತ್ತಾಯ ಪಡಿಸುತ್ತಲೇ ಇದ್ದರು. ಆದರೆ ಈ ಶಿಷ್ಟಸಂಪ್ರದಾಯ ಜಾರಿಗೆ ಬರಲೇ ಇಲ್ಲ !

**ಚಾರುಕೀರ್ತಿಸ್ವಾಮೀಜಿಯವರ ಪ್ರವೇಶ :**

ಶಾಂತರಾಜರು ತಮ್ಮ ವರದಿಯನ್ನು, ಕಮಿಟಿಯ ವ್ಯವಹಾರ ಯಾವ ದಿಕ್ಕಿನಲ್ಲಿ ಸಾಗಿದೆ ಎಂಬುದನ್ನು ಕಮಿಟಿಯ ಛೇರ್ಮನ್ನರ ಗಮನಕ್ಕೆ ತರುವ ಉದ್ದೇಶದಿಂದ ಅವರಿಗೆ ಕಳುಹಿಸಿದ್ದರು. ಇದರಿಂದಾಗಿ ಸ್ವಾಮೀಜಿಯವರು ಕಮಿಟಿಯ ಸಿಬ್ಬಂದಿಗೆ ಕಾಯಕಲ್ಪ ಮಾಡಿ ಅದನ್ನು ಸರಿಯಾದ ದಾರಿಗೆ ಹಚ್ಚಬಹುದೆಂಬ ನಿರೀಕ್ಷೆ ಶಾಂತರಾಜರಿಗಿತ್ತು.

ಶಾಂತರಾಜರ ಈ ನಿರೀಕ್ಷೆ ಬಹುಬೇಗನೆ ಹುಸಿಯಾಯಿತು ! ಶಾಂತರಾಜರು ತಮ್ಮ ವರದಿಯನ್ನು ಸಲ್ಲಿಸಿದ ಮೇಲೆ ಒಮ್ಮೆ ಸ್ವಾಮೀಜಿಯವರನ್ನು ಮುಖತಃ ಭೇಟಿಯಾಗಿದ್ದರು. ಆ ಸಂದರ್ಭದಲ್ಲಿ ಸ್ವಾಮೀಜಿಯವರು ' ನಿಮಗೆ ಲೆಕ್ಕಪತ್ರಗಳನ್ನು ಪರಿಶೀಲಿಸಲು ಹೇಳಿತ್ತೇ ಹೊರತು, ಲೆಕ್ಕಪತ್ರಗಳಲ್ಲಿರುವ ಲೋಪದೋಷಗಳನ್ನು ಪತ್ತೆ ಮಾಡಿ ವರದಿ ಕೊಡಿ ಎಂದು ಹೇಳಿರಲಿಲ್ಲ " ಎಂದು ಬಹು ಅಸಹನೆಯಿಂದ ಖಾರವಾಗಿ ಹೇಳಿದ್ದರು. ಈ ಕೋಪದ ಮಾತುಗಳಿಂದಾಗಿ, ತಮ್ಮಿಂದ ಯಾವ ದುಡುಕುತನವಾಗಿದೆ ಎಂಬುದರ ಅರಿವು ಆ ಸಂದರ್ಭದಲ್ಲಿ ಸ್ವಾಮೀಜಿಯವರಿಗಿರಲಿಲ್ಲ ! ಹಣಕಾಸಿನ ವೆಚ್ಚಗಳಲ್ಲಿ ಆಗಿರುವ ಲೋಪದೋಷಗಳನ್ನು ಪತ್ತೆ ಮಾಡಿದಾಗ ಸ್ವಾಮೀಜಿಯ ಸ್ಥಾನದಲ್ಲಿರುವವರು ಅದನ್ನು ಮೆಚ್ಚಿ ಪ್ರೋತ್ಸಾಹಿಸಿ, ಇನ್ನುಮುಂದೆ ಲೋಪದೋಷಗಳು ಯಾವ ಕಾರಣಕ್ಕೂ ನಡೆಯದಂತೆ ವ್ಯವಸ್ಥೆ ಮಾಡಬೇಕೇ ಹೊರತು, ತಪ್ಪುಗಳನ್ನು ಪತ್ತೆ ಮಾಡಿಬಿಟ್ಟಿರಲ್ಲ ಎಂದು ಕಿಡಿಕಿಡಿಯಾಗಬಾರದು !

ಶಾಂತರಾಜರೊಂದಿಗಾದ ಭೇಟಿಯ ಸಮಯದಲ್ಲಿ ತಾವು ದುಡುಕಿ ಮಾತನಾಡಿದ್ದನ್ನು ಸ್ವಾಮೀಜಿಯವರು ಸರಿಪಡಿಸಿಕೊಳ್ಳಲಿಲ್ಲ ! ಕಾರ್ಯದರ್ಶಿಯವರು ಮಾಡಿರುವ ಅವ್ಯವಹಾರಗಳಿಗಾಗಿ ಅವರಿಂದ ವಿವರಣೆಯನ್ನು ಕೇಳುವ ಬದಲು, ಕಾರ್ಯದರ್ಶಿಯವರ ಪರವಾಗಿ, ಕಾರ್ಯದರ್ಶಿಯವರು ನಿರ್ವಹಿಸಿರುವ ವೆಚ್ಚಗಳಿಗೆಲ್ಲಾ ಉತ್ತರ ಕೊಟ್ಟು, ವೆಚ್ಚಗಳನ್ನೆಲ್ಲಾ ಸಮರ್ಥಿಸಲು ಪ್ರಯತ್ನಪಟ್ಟರು. ಈ ಮೂಲಕ ಅಕ್ರಮ ವ್ಯವಹಾರಗಳನ್ನು ಮಾಡಿರುವ ಕಾರ್ಯದರ್ಶಿಯವರಿಗೆ ತಮ್ಮ ಬೆನ್ನ ಹಿಂದೆ ಆಶ್ರಯ ಕೊಟ್ಟರು !

ಚಾರುಕೀರ್ತಿ ಸ್ವಾಮೀಜಿಯವರು ತಾ॥ 14-8-79 ರಲ್ಲಿ ಶಾಂತರಾಜರಿಗೆ ಎರಡು ಪತ್ರಗಳನ್ನು ಛೇರ್ಮನ್ ಸ್ಥಾನದಿಂದ ಬರೆದರು. ಆ ಎರಡು ಪತ್ರಗಳು ಮುಂದಿವೆ

**ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ ಛೇರ್ಮನ್** | **ಎಸ್. ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ ಕಾರ್ಯಾಲಯ**

ನಂ ಎಸ್ ಜೆ ಎಂ 353/78-9　　　　　ಶ್ರವಣಬೆಳಗೊಳ

ತಾ॥ 14-8-1979

ಶ್ರೀ ಎಸ್ ಪಿ ಶಾಂತರಾಜರಿಗೆ

ಸದಸ್ಯರು, ಎಸ್ ಡಿ ಜೆ ಎಂ ಐ. ಮೋ ಕಮಿಟಿ

'ಪದ್ಮಕೃಪ'

50, ರಮಾವಿಲಾಸ ರಸ್ತೆ

ಮೈಸೂರು-1

ಧರ್ಮಬಂಧು,

ಉಲ್ಲೇಖ (1) ತಾ॥ 25-7-79 ರ ನಿಮ್ಮ ಪತ್ರ

(11) ನಮ್ಮ 28-7-79 ರ ಪತ್ರ

ಉಲ್ಲೇಖ (1) ರಲ್ಲಿ ಕಾಣಿಸಿದ ನಿಮ್ಮ ಪತ್ರವನ್ನು ನಾವು ಸ್ವೀಕರಿಸಿದ್ದಲ್ಲದೆ ಉಲ್ಲೇಖ (11) ರಲ್ಲಿ ಕಾಣಿಸಿದ ತಾತ್ಕಾಲಿಕ ಉತ್ತರವನ್ನೂ ನೀಡಿದ್ದೇವೆ

ಶ್ರವಣಬೆಳಗೊಳದಲ್ಲಿ ರಾಜ್ಯಮಟ್ಟದ ಸಮಿತಿ ಹಾಗೂ ಅನೇಕ ಉಪಸಮಿತಿಗಳ ಸಭೆಯನ್ನು ಸೇರಿಸುವ ಬಗ್ಗೆ ಸಿದ್ಧತೆ ನಡೆಸುತ್ತಿದ್ದರಿಂದ ನಾವು ಸಭೆಗಿಂತ ಮುಂಚೆ ಬಿಡುವಿಲ್ಲದವರಾಗಿದ್ದೆವು ಅಲ್ಲದೆ ನೀವು ಉಲ್ಲೇಖದಲ್ಲಿ ಕಾಣಿಸಿದ ನಿಮ್ಮ ಪತ್ರದ ಪ್ರತಿಯೊಂದನ್ನು ಪದನಿಮಿತ್ತ ಉಪ-ಛೇರ್ಮನ್ನರಿಗೆ ರವಾನಿಸಿ ಕಾರ್ಯದರ್ಶಿಯವರಿಗೆ ಅದನ್ನು ಕಮಿಟಿಯ ಸಭೆಯ ಮುಂದಿಡುವಂತೆ ನಿರ್ದೇಶನ ನೀಡಿದ್ದೀರಿ ಆದ್ದರಿಂದ ಸಭೆಗಿಂತ ಮುಂಚಿತವಾಗಿ ಹಾಗೂ ಪದನಿಮಿತ್ತ ಉಪ-ಛೇರ್ಮನ್ನರ ಬಳಿ ನೀವು ಧಾವಿಸಿದ್ದರಿಂದ ನಿಮಗೆ ನಮ್ಮ ಉತ್ತರವನ್ನು ಕಾಯುವ ವ್ಯವಧಾನವಿರಲಿಲ್ಲವೆಂದು ನಾವು ಭಾವಿಸಿದೆವು ಆದರೂ ಸಾಂಪ್ರದಾಯಿಕವಾಗಿ ನಾವು ನಿಮ್ಮ ಪತ್ರಕ್ಕೆ ಉತ್ತರ ನೀಡುತ್ತಿದ್ದೇವೆ

ಸಮಿತಿಯ ಸಭೆಯಲ್ಲಿ ನಿಮ್ಮ ಪತ್ರದಲ್ಲಡಕವಾದ ವಿಚಾರಗಳನ್ನು ಪರಿಶೀಲಿಸಿದ್ದಲ್ಲದೆ, ಅಲ್ಲಿರುವ ಕೆಲವು ಅಂಶಗಳಿಗೆ ಸರಿಯಾದ ಉತ್ತರವನ್ನು ನೀಡಿದ್ದೇವೆ ನೀವು 3-8-79 ರ ಸಭೆಗೆ ಬಂದಿದ್ದರೆ, ನಿಮ್ಮ ಎಲ್ಲಾ ಅಭಿಪ್ರಾಯಗಳು ಪರಿಹಾರವಾಗುತ್ತಿದ್ದವು

ಕಮಿಟಿಯು 1979-80 ರ ಆಯವ್ಯಯ ಪತ್ರಿಕೆಯ ಸಿದ್ಧತೆಯಲ್ಲಿ ನೀವು ಮಹತ್ವದ ಪಾತ್ರ ವಹಿಸಿರುವಿರಲ್ಲದೆ, ರಥೋತ್ಸವಕ್ಕಾಗಿ ಹೆಚ್ಚು ವೆಚ್ಚಕ್ಕೆ ಅವಕಾಶ ಮಾಡಿಕೊಟ್ಟಿರುವುದು, ತಮಗೆ ವಿದಿತವಷ್ಟೆ ? 1978 ರಲ್ಲಿ ಆದ ವೆಚ್ಚದ ಬಗ್ಗೆ ನಿಮಗೆ ಗೊತ್ತಿರುವುದರಿಂದ ಹಾಗೂ ನಿಮಗೆ ನಿಜಕ್ಕೂ ವೆಚ್ಚವನ್ನು ಕಡಿತಗೊಳಿಸುವ ಆಕಾಂಕ್ಷೆಯಿದ್ದಿದ್ದರೆ, ಹೊಸ ಮುಂಗಡ ಪತ್ರವನ್ನು ಸಿದ್ಧಪಡಿಸುವಾಗ ನೀವು ಅವನ್ನು ಧಾರಾಳವಾಗಿ ಮಾಡಬಹುದಿತ್ತು ಕಳೆದವರ್ಷ ರಥೋತ್ಸವ ಹಾಗೂ ಧರ್ಮಸಮ್ಮೇಳನಕ್ಕಾಗಿ ಆಯವ್ಯಯದಲ್ಲಿ 11,200 ರೂಪಾಯಿಗಳನ್ನು ನಿಗದಿಗೊಳಿಸಿದ್ದರೂ ವಾಸ್ತವವಾಗಿ 11,643 ರೂಪಾಯಿಗಳು ಖರ್ಚಾಗಿವೆ ಅಲ್ಲದೆ ಅನ್ನದಾನಕ್ಕಾಗಿ ಮಾಡಿದ ಖರ್ಚು 2694 ರೂಪಾಯಿಗಳಿಗೆ ತಾ॥ 2-7-1978 ರ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಹತ್ತನೇ ವಿಷಯದ ಪ್ರಕಾರ ಒಪ್ಪಿಗೆಯನ್ನು ಪಡೆಯಲಾಗಿದೆ ಕಳೆದವರ್ಷ ಒಟ್ಟು 14,337-08 ರೂಪಾಯಿಗಳು ಖರ್ಚಾಗಿದ್ದು ಇವುಗಳ ಆಧಾರದ ಮೇಲೆ, ಈ ಉತ್ಸವಗಳಿಗಾಗಿ ವಾರ್ಷಿಕ ಆಯವ್ಯಯದಲ್ಲಿ ನೀವು 15,000 ರೂಪಾಯಿಗಳನ್ನು ಒದಗಿಸಿದ್ದೀರಿ ಇದಕ್ಕೆ ಎಸ್ ಡಿ ಜೆ ಎಂ ಐ ಕಮಿಟಿಯ ತಾ॥ 17-3-1979 ರ ಸಭೆಯಲ್ಲಿ ನಿಮ್ಮ ಸಮ್ಮುಖದಲ್ಲಿಯೇ ಒಪ್ಪಿಗೆ ದೊರತಿದೆ ಖೋತಾಗಳನ್ನು ತಪ್ಪಿಸಲು ನೀವು ವೆಚ್ಚಗಳನ್ನು ತಗ್ಗಿಸುವಂತೆ ತಮ್ಮ ಸಲಹೆಗಳನ್ನು ಕೊಡಬಹುದಿತ್ತು

ಆದುದರಿಂದ ನೀವು ಈಗ ವಿಪರೀತ ಹಾಗು ಅನಾವಶ್ಯಕವೆಂದು ಹೇಳಿರುವ ವೆಚ್ಚವನ್ನು ಕುರಿತು ಟೀಕಿಸುವುದು ನ್ಯಾಯೋಚಿತವಲ್ಲವೆಂದು ನಮಗನಿಸುತ್ತದೆ ಅಲ್ಲದೆ ನಿಮ್ಮ ಪತ್ರದಲ್ಲಿ ಸೂಚಿಸಿದ ಎಲ್ಲಾ ಸಮಾರಂಭಗಳಿಗೆ ಸಂಬಂಧಿಸಿದ ಖರ್ಚುಗಳ ಅಂದಾಜಿಗೆ ಅರ್ಹ ಮಂಜೂರಾತಿ ಪಡೆಯಲಾಗಿದೆ

ನೀವು 15,000 ರೂಪಾಯಿಗಳಷ್ಟು ಬೆಲೆಬಾಳುವ ವಸ್ತುಗಳ ವಿಷಯ ಪ್ರಸ್ತಾಪಿಸಿ ಇವುಗಳನ್ನು ಹೋಲ್‌ಸೇಲ್ ವ್ಯಾಪಾರಿಗಳಿಂದ ಕೊಂಡುಕೊಂಡಿದ್ದರೆ ಶೇ 20 ರಷ್ಟು ಕಡಿಮೆ ವೆಚ್ಚವಾಗುತ್ತಿತ್ತೆಂದು ಸೂಚಿಸಿರುವಿರಿ ಕೊಂಡುಕೊಂಡ ಮುಖ್ಯ ಸರಕುಗಳೆಂದರೆ ಅಕ್ಕಿ, ತೆಂಗಿನಕಾಯಿಗಳು, ಹಣ್ಣು ಹಾಗೂ ಹೂಗಳೆಂಬುದನ್ನು ನಾವು ನಿಮ್ಮ ಗಮನಕ್ಕೆ ತರಬಯಸುತ್ತೇವೆ ಅಕ್ಕಿಯನ್ನು ಹೋಲ್‌ಸೇಲ್‌ದರದಲ್ಲಿ ಕೊಂಡುಕೊಂಡಿದ್ದರೆ ಲಗೇಜ್ ಚಾರ್ಜುಗಳು ಹಾಗೂ ಈ ಬಗ್ಗೆ ಪ್ರವಾಸಭತ್ಯ ಹಾಗೂ ದಿನಭತ್ಯಗಳಿಗೆಲ್ಲಕ್ಕೂ ಹಣ ಖರ್ಚಾಗುತ್ತಿತ್ತು ಯಾಕೆಂದರೆ ಹೋಲ್‌ಸೇಲ್ ವ್ಯಾಪಾರಿಗಳು ಸಿ ಆರ್ ಪಟ್ಣ, ಹಾಸನ ಅಥವಾ ಮೈಸೂರುಗಳಲ್ಲಿ ಮಾತ್ರ ಇದ್ದಾರೆ ಇವುಗಳನ್ನೆಲ್ಲಾ ಸೇರಿಸಿದರೆ ಒಟ್ಟಿನಲ್ಲಿ ವೆಚ್ಚ ಕಡಿಮೆ ಸ್ಥಳೀಯ ದರದಷ್ಟೇ ಆಗುತ್ತದೆ ಅಲ್ಲದೆ ತೆಂಗಿನಕಾಯಿ ಹೂವು ಹಣ್ಣುಗಳು ಹಾಳಾಗುವ ಭಯವಿರುವುದರಿಂದ, ಅವುಗಳನ್ನು ಮುಂಚಿತವಾಗಿಯೇ ಕೊಂಡುಕೊಳ್ಳಲಾಗುವುದಿಲ್ಲ

ರಥೋತ್ಸವವು ಒಂದು ವಾರ್ಷಿಕ ಕಾರ್ಯಕ್ರಮವಾಗಿದೆ ಇದಕ್ಕೆ ಅವಶ್ಯಕ ವಿರುವ ವಸ್ತುಗಳು, ಕೊಡಬೇಕಾಗಿರುವ ದಕ್ಷಿಣೆ ಹಾಗೂ ಉಳಿದ ಖಾಯಂ ಖರ್ಚು ಗಳನ್ನು ಈ ಬಾಬ್ತಿಗಾಗಿಯೇ ಇಡಲಾಗಿರುವ ಪುಸ್ತಕವೊಂದರಲ್ಲಿ ಗುರುತಿಸಿಟ್ಟುಕೊಳ್ಳ ಲಾಗಿದೆಯಲ್ಲದೆ ಇದಕ್ಕನುಗುಣವಾಗಿ ವಸ್ತುಗಳನ್ನು ಕೊಂಡುಕೊಳ್ಳಲಾಗಿದೆ ಹಾಗೂ ಹಣವನ್ನು ಪಾವತಿ ಮಾಡಲಾಗಿದೆ ನೀವು ಆಫೀಸಿನಲ್ಲಿಟ್ಟಿರುವ ಈ ಪುಸ್ತಕವನ್ನು ಅವಲೋಕಿಸಬಹುದು ಹೆಚ್ಚುತ್ತಿರುವ ಜೀವನಾವಶ್ಯಕ ವೆಚ್ಚವನ್ನು ಗಮನದಲ್ಲಿಟ್ಟು ಅವಶ್ಯ ಸಂದರ್ಭದಲ್ಲಿ ಅಂಕಿಗಳನ್ನು ಹೆಚ್ಚಿಸಲಾಗಿದೆ

ರಥಾಲಂಕಾರ ಹಾಗೂ ಇತರ ಉದ್ದೇಶಗಳಿಗಾಗಿ ಬಳಸುವ ವಸ್ತುಗಳಲ್ಲಿ ಕೆಲವು ಮುರಿದು ಹಾಳಾಗುತ್ತವೆ ಅಥವಾ ನಿರ್ದಿಷ್ಟ ಉದ್ದೇಶಗಳಿಗೆ ಬಳಸಲು ಬಾರದಾಗು ತ್ತವೆ ರಥ ನಿರ್ಮಾತೃಗಳು ಹಾಗೂ ಉಳಿದ ಕಸಬುದಾರರಿಗೆ ಬೇಕಾಗುವಂಥ ವಸ್ತು ಗಳನ್ನು ಮಾತ್ರವೇ ಪೂರೈಸಲಾಗಿವೆ ಅಗತ್ಯವಿರುವಷ್ಟೇ ಪ್ರಮಾಣದಲ್ಲಿ ವಸ್ತುಗಳನ್ನು ಪೂರೈಸುವುದರಿಂದ ಉಪಯೋಗಿಸದೇ ಇರುವ ವಸ್ತುಗಳ ಪ್ರಶ್ನೆಯೇ ಏಳುವುದಿಲ್ಲ

ಮೇಲಿನ ಉತ್ಸವಕ್ಕೆ ಸಂಬಂಧಿಸಿದಂತೆ ಕೆಲವು ಅನಾವಶ್ಯಕ ವೆಚ್ಚ ಮಾಡಿದೆಯೆಂದು ನೀವು ಬರೆದಿದ್ದೀರಿ, ವಿವರಗಳಿದ್ದರೆ ಅವುಗಳನ್ನು ಸ್ಪಷ್ಟೀಕರಿಸಲು ಸಾಧ್ಯವಾಗುತ್ತಿತ್ತು

ಲೆಕ್ಕಗಳು ಹಾಗೂ ರಶೀದಿಗಳಲ್ಲಿ ಆದ ವ್ಯತ್ಯಾಸಗಳ ಬಗ್ಗೆ ಕಾರ್ಯದರ್ಶಿಯವರು ನಿಮಗೆ ವಿವರವಾಗಿ ಬರೆಯುತ್ತಾರೆ ರಥೋತ್ಸವ ಹಾಗೂ ಉಳಿದ ಉತ್ಸವಗಳ ಸಂದರ್ಭಗಳಲ್ಲಿ ಆದಾಯಕ್ಕೆ ಸಂಬಂಧಿಸಿದಂತೆ ನೀವು ಈ ಬಗ್ಗೆ ಪ್ರಸ್ತಾಪಿಸದಿದ್ದರೂ, ಕಳಶಗಳ ಹರಾಜು ಹಾಗೂ ಮಾರಾಟದಿಂದ ಆದಾಯವನ್ನು ಹೆಚ್ಚಿಸುತ್ತಿರುವ ಬಗ್ಗೆ ಹಾಗೂ 1977 ರ ಆದಾಯ 6450 ರೂಪಾಯಿಗಳು, ಹಾಗೂ ಕಳೆದವರ್ಷದ ಆದಾಯ 8359 ರೂಪಾಯಿಗಳು, ಇವುಗಳಿಗೆ ಹೋಲಿಸಿದಾಗ ಈ ವರ್ಷ ಆದಾಯ 9730 ಕ್ಕೆ ಹೆಚ್ಚಿರುವುದರ ಬಗ್ಗೆ ನಿಮ್ಮ ಗಮನಸೆಳೆಯಲು ಇಚ್ಛಿಸುತ್ತೇವೆ ಅಭಿ ವೃದ್ಧಿಗಾಗಿ ಕೊಡುಗೆ ಹಾಗೂ ರಥೋತ್ಸವ ಸಂದರ್ಭದಲ್ಲಿ ಇತರ ಮೂಲಗಳಿಂದ ಆದಾಯವು ಏಕಪ್ರಕಾರವಾಗಿ ಹೆಚ್ಚಿರುವುದನ್ನು ತಮಗೆ ಶ್ರುತಪಡಿಸುತ್ತೇವೆ

ಮೇಲಿನ ಹೆಚ್ಚಿದ ಆದಾಯಗಳು ನೀವು ಆಗಾಗ ಕೊಡುತ್ತಿದ್ದ ಸಲಹೆಗಳ ಫಲವೇ ಆಗಿವೆ, ಈ ಕ್ಷೇತ್ರದ ಅಭಿವೃದ್ಧಿಗೆ ನೀವು ಉತ್ಸಾಹಪೂರ್ವಕವಾಗಿ ಪಾಲ್ಗೊಂಡಿ ದ್ದನ್ನು, ಅಲ್ಲದೆ ಶ್ರೀ ಕ್ಷೇತ್ರದಲ್ಲಿ ಉತ್ಸವಗಳು ಆಕರ್ಷಕ ಹಾಗೂ ಸುಧಾರಿತ ಮಟ್ಟ ದಿಂದ ಉನ್ನತವಾಗಿಯೂ ಆಗುವಂತೆ ಸಲಹೆಗಳನ್ನು ನೀಡುತ್ತಿದ್ದುದನ್ನು ನಾವು ಸ್ಮರಿ ಸುತ್ತೇವೆ ಹಿಂದೆ ನಡೆಯುತ್ತಿದ್ದ ಉತ್ಸವಗಳ ಮಟ್ಟ ಹಾಗೂ ಈಗಿನ ಉತ್ಸವಗಳ

ಮಟ್ಟವನ್ನೂ ನೀವೇ ಹೋಲಿಸಿ ನೋಡಬಹುದು ಈ ದಿನಗಳ ಸನ್ನಿವೇಶಗಳಲ್ಲಿ ಜನರಲ್ಲಿ ' ಶ್ರದ್ಧೆ ' ಹಾಗೂ ' ಭಕ್ತಿ ' ಇಲ್ಲ ಅವರನ್ನು ಆಕರ್ಷಿಸಲು ಇಂಥ ಕಾರ್ಯಕ್ರಮಗಳ ವ್ಯವಸ್ಥೆ ಅಗತ್ಯ ಕೆಲವು ಗಣ್ಯರನ್ನು ಆಹ್ವಾನಿಸುವುದರ ಮೂಲಕ ನಾವು ದೊಡ್ಡ ಜನಸ್ತೋಮವನ್ನು ಆಕರ್ಷಿಸಬಹುದು, ಆದ್ದರಿಂದ ಜನರನ್ನು ಆಕರ್ಷಿಸುವುದಕ್ಕಾಗಿಯೇ ನಾವು ಇಂಥ ಕಾರ್ಯಕ್ರಮಗಳನ್ನು ನಿಯೋಜಿಸಿದ್ದೆವು ಈ ಕ್ಷೇತ್ರಕ್ಕೆ ಜನರನ್ನಾಕರ್ಷಿಸಲು ಈ ವಿಧಾನಗಳನ್ನು ನೀವು ಈ ಹಿಂದೆ ಸೂಚಿಸಿದ್ದನ್ನು ನಾವು ಜ್ಞಾಪಿಸುತ್ತೇವೆ ಜನರಲ್ಲಿ ಪರೋಕ್ಷವಾಗಿ ' ಶ್ರದ್ಧೆ ' ಹಾಗೂ ' ಭಕ್ತಿ 'ಯನ್ನು ತುಂಬುವುದೇ ಈ ಕಾರ್ಯಕ್ರಮಗಳ ಉದ್ದೇಶ

ಈ ಕ್ಷೇತ್ರದ ಧಾರ್ಮಿಕ ಬುದ್ಧಿಯ ಭಕ್ತರು ದೊಡ್ಡ ಹಾಗೂ ಉದಾರ ಮನಸ್ಸಿನ ಕಾಣಿಕೆಗಳನ್ನು ಸಲ್ಲಿಸಿದ್ದಕ್ಕಾಗಿ ಈ ಕಮಿಟಿಯು ಅವರಿಗೆ ಆಭಾರಿಯಾಗಿದೆಯಲ್ಲದೇ ಆ ಹಣವನ್ನು ಖರ್ಚು ಮಾಡುವುದರಲ್ಲಿ ಎಚ್ಚರವಹಿಸಿದೆ ರಥೋತ್ಸವ, ಧಾಮ ಸಂಪ್ರೋಕ್ಷಣ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಾರಂಭೋತ್ಸವ ಇತ್ಯಾದಿ ಉತ್ಸವಗಳಿಗಾಗಿ ಮಾಡಿದ ಖರ್ಚು ಭಕ್ತರಲ್ಲಿ ಧರ್ಮಬುದ್ಧಿಯನ್ನು ಉಂಟುಮಾಡುವುದಲ್ಲದೆ, ಶ್ರೀ ಕ್ಷೇತ್ರಕ್ಕಾಗಿ ತಮ್ಮನ್ನು ತೊಡಗಿಸುವ ಮನೋಧರ್ಮವನ್ನೂ ಹೆಚ್ಚಿಸುವುದು ಮಾಡಿದ ಕೆಲವು ಸಾವಿರ ರೂಗಳ ಖರ್ಚಿಗೆ ಈ ಲಾಭವನ್ನು ಹೋಲಿಸಿದಾಗ ಅದು ಪ್ರಶಂಸನೀಯವೇ ಹೊರತು ವ್ಯರ್ಥವೆಚ್ಚವಲ್ಲ ಸಂಬಂಧಿಸಿದ ಅಧಿಕಾರಿಗಳು ಮೇಲಿನ ಉತ್ಸವಗಳನ್ನು ನಡೆಯಿಸುವ ಮುಂಚೆ ನಿಮ್ಮೊಡನೆ ಸಮಾಲೋಚನೆ ಮಾಡಿಲ್ಲವೆಂದು ಅನ್ನಿಸುತ್ತದೆ ಅವರು ಹಾಗೆ ಮಾಡಿದ್ದರೆ ನೀವು ಕಮಿಟಿಗೆ ಬಹಳಷ್ಟು ಖರ್ಚುಗಳನ್ನು ಉಳಿಸಲು ಸಾಧ್ಯವಾಗುತ್ತಿತ್ತು

ಇದು ಎಲ್ಲ ಧಾರ್ಮಿಕ, ಸಾಮಾಜಿಕ, ಹಾಗೂ ಪರೋಪಕಾರಿ ಚಟುವಟಿಕೆಗಳನ್ನು ನಡೆಸುವ ಜವಾಬ್ದಾರಿಯುಳ್ಳ ಮುಜರಾಯಿ ಸಂಸ್ಥೆ

ಸರಿಯಾದ ಲೆಕ್ಕಪತ್ರಗಳನ್ನಿಡುವುದು ಕಾರ್ಯದರ್ಶಿಯವರ ಕಛೇರಿಯ ಜವಾಬ್ದಾರಿ ಎಂದು ಎತ್ತಿತೋರಿಸುವುದು ಅನಗತ್ಯ

ಕಮಿಟಿಯಲ್ಲಿ ಲೆಕ್ಕವನ್ನು ವಿಮರ್ಶಿಸುವ ನಿಮ್ಮಂತಹ ಕೆಲವು ಸದಸ್ಯರಿರುವುದು ಸಂತಸದ ಸಂಗತಿ ಅದಕ್ಕಾಗಿಯೇ ಸರಿಯಾಗಿ ಲೆಕ್ಕಪತ್ರಗಳನ್ನು ಇಡುವಂತೆ ಕಾರ್ಯದರ್ಶಿ, ಹಾಗೂ ಅವರ ಕಾರ್ಯಾಲಯದ ಸಿಬ್ಬಂದಿಯವರಿಗೆ ಸಹಾಯ ಹಾಗೂ ಮಾರ್ಗದರ್ಶನ ಮಾಡುವಂತೆ ನಿಮಗೆ ಒಪ್ಪಿಸಲಾಗಿದೆ ಅಲ್ಲದೆ ಯೋಗ್ಯರಾದ ಒಬ್ಬ ಅಕೌಂಟೆಂಟರನ್ನು ಹುಡುಕುವಂತೆ ಸಮಿತಿಯು ನಿಮ್ಮನ್ನು ಪ್ರಾರ್ಥಿಸಿದ್ದರೂ ನೀವು ಇದನು ಈ ವರೆಗೂ ಮಾಡಿಲ್ಲ

ಮೇಲಿನ ವಿವರಗಳೊಂದಿಗೆ ನಾವು ನಿಮ್ಮ ಅವಗಾಹನೆಗಾಗಿ ಕಮಿಟಿಯ ನಿಲುವನ್ನು ಪ್ರಕಟಿಸಿದ್ದೇವೆ

ಕಡೆಯದಾಗಿ ಮುಕ್ತಾಯಕ್ಕೆ ಮುಂಚೆ ಮಹಾಮಸ್ತಕಾಭಿಷೇಕ ಉತ್ಸವ ವ್ಯವಸ್ಥೆಗೊಳಿಸುವುದಕ್ಕೆ ಸಂಬಂಧಿಸಿದಂತೆ ನಿಮ್ಮ ಸಲಹೆಗಳನ್ನು ಪ್ರಶಂಸಿಸುತ್ತೇವೆ

ಆಶೀರ್ವಾದಗಳೊಂದಿಗೆ
ಸಹಿ
(ಚಾರುಕೀರ್ತಿಭಟ್ಟಾರಕ ಸ್ವಾಮಿಜಿ)
ಛೇರ್ಮನ್

**ಪತ್ರ 2 :**

ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮಿಜಿ
ಛೇರ್ಮನ್

ಎಸ್ ಡಿ ಜೆ ಎಂ ಐ ಮೇ. ಕಮಿಟಿ
ಕಾರ್ಯಾಲಯ
ಶ್ರವಣಬೆಳಗೊಳ

ನಂ ಎಸ್ ಜೆ ಎಂ /354/ ,8-9 ತಾ॥ 14-8-1979

ಶ್ರೀ ಎಸ್ ಪಿ ಶಾಂತರಾಜರಿಗೆ
ಸದಸ್ಯರು, ಎಸ್ ಡಿ ಜೆ ಎಂ ಐ ಮೆನೇಜಿಂಗ್ ಕಮಿಟಿ
'ಪದ್ಮಕೃಪ'
50, ರಮಾವಿಲಾಸ ರಸ್ತೆ
ಮೈಸೂರು-1
ಧರ್ಮಬಂಧು

ನಿಮ್ಮ ತಾ॥ 28-7-1979 ರ ಪತ್ರ ನಮಗೆ ತಲುಪಿದ್ದು ಆ ಪತ್ರದ ವಿವರಗಳನ್ನು ಓದಿದ್ದೇವೆ

ಕಮಿಟಿಯ ಲೆಕ್ಕಪತ್ರಗಳ ಬಗ್ಗೆ ನೀವು ಪೂರ್ಣವಾಗಿ ಪ್ರಸ್ತಾಪಿಸಿದ್ದೀರಿ ಇದೇ ಸಂದರ್ಭದಲ್ಲಿ ನೀವು ಕಮಿಟಿಯ ಲೆಕ್ಕಪತ್ರ ಪರಿಶೋಧನೆಯ ವರದಿ ಮೇಲೆ ಕಳೆದ ವರ್ಷ ಕೆಲವು ಆಕ್ಷೇಪಣೆಗಳನ್ನು ಎತ್ತಿದ್ದಿರೆಂದು ನಿಮ್ಮ ನೆನಪಿಗೆ ತರುತ್ತೇವೆ ಇದರ ಬಗ್ಗೆ ಲೆಕ್ಕಪರಿಶೋಧಕರನ್ನು ಸಂಪರ್ಕಿಸಿ ಪರಿಶೋಧನೆಯ ವರದಿಯನ್ನು ಸರಿಪಡಿಸುವಂತೆ ತಮಗೆ ಜವಾಬ್ದಾರಿ ಹೊರಿಸಲಾಗಿತ್ತು ಕಮಿಟಿಯ ಲೆಕ್ಕಪತ್ರಗಳನ್ನು ಸರಿಯಾಗಿ ನೋಡಿಕೊಳ್ಳುವುದಕ್ಕಾಗಿ ಮತ್ತು ಸಿಬ್ಬಂದಿಯವರು ಅವುಗಳನ್ನು ಸರಿಯಾಗಿ ನೋಡಿಕೊಳ್ಳಲು ಸಹಾಯಮಾಡುವುದಕ್ಕಾಗಿ ಸಹ, ಒಬ್ಬ ಸೂಕ್ತರಾದ ಲೆಕ್ಕಿಗರನ್ನು ಶಿಫಾರಸು

ಮಾಡುವಂತೆ ನಿಮ್ಮನ್ನು ಕಮಿಟಿಯು ಕೋರಿತ್ತು ನಮಗೆ ತಿಳಿದಿರುವ ಮಟ್ಟಿಗೆ ನಮ್ಮ ಸಿಬ್ಬಂದಿವರ್ಗ, ನಿಮ್ಮ ಸಂಪೂರ್ಣ ತೃಪ್ತಿಗಲ್ಲದಿದ್ದರೂ ನಿಮ್ಮ ಲೆಕ್ಕಪತ್ರಗಳ ಪದ್ಧತಿಯನ್ನೇ ಅನುಸರಿಸಿದೆ

ಕಮಿಟಿಯು ಲೆಕ್ಕಪತ್ರಗಳನ್ನು ಹೆಚ್ಚು ಕಮ್ಮಿ ಮಾಡುವುದರಲ್ಲಿ ಸ್ವಾಮೀಜಿಯನ್ನು ಕಾರ್ಯದರ್ಶಿಯವರು ಒಳಗುಮಾಡಿದ್ದಾರೆ ಎಂಬುದಾಗಿ ಸಹ ನೀವು ಅಭಿಪ್ರಾಯ ಪಟ್ಟಿದ್ದೀರಿ ನಮಗೆ ತಿಳಿದಿರುವ ಮಟ್ಟಿಗೆ ಕಮಿಟಿಯು ಲೆಕ್ಕಪತ್ರಗಳ ವಿಚಾರದಲ್ಲಿ ನಮ್ಮನ್ನು ಒಳಪಡಿಸುವ ಯಾವ ಸಂದರ್ಭವೂ ನಮಗೆ ಕಂಡುಬಂದಿಲ್ಲ ಲೆಕ್ಕಪತ್ರದ ಯಾವುದೇ ವರದಿಯೂ ಇಂಥ ವಿಚಾರಗಳನ್ನು ವ್ಯಕ್ತಪಡಿಸುವುದಿಲ್ಲ ಪ್ರಾಯಶಃ ನೀವು ಕಾರ್ಯದರ್ಶಿಯವರು ಶ್ರೀ ಸಿ ಬಿ ಎಂ ಚಂದ್ರಯ್ಯನವರಿಗೆ ಬರೆದಿರುವ ಮತ್ತು ನಮಗೆ ಒಂದು ಪ್ರತಿಯನ್ನು ಕಳುಹಿಸಿರುವ ನಂ ಎಂ ಸಿ 10/78-79, 20-7-79ರ ಪತ್ರದ ಮೊದಲನೆ ಅಂಶದಲ್ಲಿ ಅವರು ಧಾರ್ಮಿಕ ಸಮಾರಂಭಗಳ ಅಂದರೆ ರಥೋತ್ಸವ ಧಾಮಸಂಪ್ರೋಕ್ಷಣೆ,ಮತ್ತು ಶ್ರೀ ಮಹಾವೀರ ಕುಂದ ಕುಂದಭವನದ ಉದ್ಘಾಟನೆ ಬಗ್ಗೆ ಮಾಡಿರುವ ವರದಿಯನ್ನು ಉಲ್ಲೇಖಿಸಿದ್ದೀರೆಂದು ತೋರುತ್ತದೆ

ಆದರೆ ಧಾರ್ಮಿಕ ಸಮಾರಂಭ ಮತ್ತು ಇತರ ಸಮಾರಂಭಗಳನ್ನು ಹೇಗೆ ಮತ್ತು ಯಾವ ರೀತಿಯಲ್ಲಿ ನಡೆಸಬೇಕು ಎಂಬುದಕ್ಕೆ ಅವರು ನಮ್ಮನ್ನು ಸಂಪರ್ಕಿಸಿದ್ದು ಮತ್ತು ಈ ಧಾರ್ಮಿಕ ಮತ್ತು ಇತರ ಸಮಾರಂಭಗಳನ್ನು ನಡೆಸುವುದರಲ್ಲಿ ನಮ್ಮ ನಿರ್ದೇಶನವನ್ನು ತೆಗೆದುಕೊಂಡದ್ದು ನಮಗೆ ಸರಿ ಎಂದು ಕಂಡುಬರುತ್ತದೆ ಏಕೆಂದರೆ ಸಾಮಾನ್ಯವಾಗಿ ಈ ಮಟ್ಟದ ಅಧಿಕಾರಿಗಳು ಧಾರ್ಮಿಕ ವಿಚಾರಗಳನ್ನು ತಿಳಿದುಕೊಂಡಿರುವುದಿಲ್ಲ ಹಲವಾರು ಅಭಿವೃದ್ಧಿ ಕಾರ್ಯಗಳಿಗಾಗಿ ಗೌರವಸ್ಥರನ್ನು ಆಹ್ವಾನಿಸುವುರ ಬಗ್ಗೆ ಮತ್ತು ಈ ಕ್ಷೇತ್ರದ ಘನತೆಯನ್ನು ಎತ್ತಿ ಹಿಡಿಯುವುದಕ್ಕೆ, ಈ ಕಾರ್ಯಗಳನ್ನು ಹೇಗೆ ನಡೆಸಬೇಕೆಂದು ಮತ್ತು ಭೇಟಿಮಾಡುವ ಗೌರವಸ್ಥರಿಗೆ ಒಪ್ಪಿಗೆಯಾಗುವಂತೆ ಈ ವ್ಯವಸ್ಥೆಯ ಮಟ್ಟ ಮತ್ತು ಗೌರವವನ್ನು ಕಾಪಾಡಿಕೊಂಡು ಹೋಗುವುದಕ್ಕಾಗಿ ಕಾರ್ಯದರ್ಶಿಯವರು ಛೇರ್ಮನ್ ಸ್ಥಾನದಲ್ಲಿರುವ ನಮ್ಮನ್ನು ಸೂಕ್ತಯೋಜನೆ, ಮತ್ತು ವ್ಯವಸ್ಥೆಗಳಿಗಾಗಿ ಕಾಣಬೇಕು ಆದುದರಿಂದ ಇಂಜನಿಯರ್ ಆದ ಅವರು ಈ ವಿಚಾರಗಳಲ್ಲಿ ತಿಳಿಯದೆ ಇರುವುದರಿಂದ ನಮ್ಮ ನಿರ್ದೇಶನ ಹಾಗೂ ಸಲಹೆಗಳನ್ನು ತೆಗೆದುಕೊಂಡಿರುವುದು ನಮ್ಮನ್ನು ಒಳಪಡಿಸಿದಂತೆ ಎಂದಾಗುವುದಿಲ್ಲ ಅಭಿವೃದ್ಧಿ ಕಾರ್ಯಗಳ ಬಗ್ಗೆ ಅವರು ಕರ್ತವ್ಯಗಳನ್ನು ಮಾಡುತ್ತಿದ್ದಾರೆ ಮತ್ತು ಅವರು ತಮ್ಮ ದೋಷಗಳಿಗಾಗಿ ನಮ್ಮನ್ನು ಒಳಪಡಿಸುವ ಯತ್ನದ ಕುರುಹುಗಳು ನಮ್ಮಗಮನಕ್ಕೆ ಬಂದಿಲ್ಲ ಈ ಬಗ್ಗೆ ನಿಮ್ಮ ಉಲ್ಲೇಖನ ಆಧಾರರಹಿತವೆನಿಸುತ್ತದೆ

4 ನೇ ಪ್ಯಾರಾದಲ್ಲಿ '' ಇದನ್ನು ಕುರಿತ ನನ್ನ ವರದಿ ಸ್ವಯಂ ವಿವರಣಾತ್ಮಕ

ವಾಗಿದೆ ಮತ್ತು ಕಾರ್ಯದರ್ಶಿಯವರೊಡನಾದ ಮಾತುಕತೆಯಲ್ಲಿ ಪ್ರತಿಯೊಂದು ಖರ್ಚಿಗೂ ಕಮಿಟಿಯ ಕ್ರಮಬದ್ಧ ಮಂಜೂರಾತಿಯಿತ್ತೆಂದು ನನಗೆ ತಿಳಿಸಲಾಯಿತು " ಎಂದು ಉಲ್ಲೇಖಿಸಿದ್ದೀರಿ ಅದು ಕಮಿಟಿಯೇ ಅಥವಾ ಛೇರ್ಮನ್ನರೇ ಎಂಬುದು ಸ್ಪಷ್ಟ ವಾಗಿಲ್ಲ ನೀವು ಸರಿಪಡಿಸಿರುವಂತೆ ಅದು ಛೇರ್ಮನ್ನರಾಗದೆ ಕಮಿಟಿಯಾಗಿದ್ದರೆ ಅದರ ಹೇಳಿಕೆಯ ನೋಟವನ್ನು ನೀವು ತೆಗೆದುಕೊಳ್ಳಬೇಕಾಗಿಲ್ಲ ಕಾರ್ಯದರ್ಶಿಯ ಹೇಳಿಕೆ ಯಂತೆ ಅದು ಛೇರ್ಮನ್ನರಾಗಿದ್ದರೆ ಅದು ಕೇವಲ ಧಾರ್ಮಿಕ ಹಬ್ಬ ಮತ್ತು ಉದ್ಘಾಟನೆಗಳಿಗೆ ಮಾತ್ರ ಸಂಬಂಧಿಸಿದ್ದೇ ಹೊರತು ಕಮಿಟಿಯ ಇತರ ಲೆಕ್ಕಪತ್ರಗಳಿಗೆ ಸಂಬಂಧಿಸಿದ್ದಲ್ಲ

ಲೆಕ್ಕಪತ್ರಗಳಿಗೆ ಸಂಬಂಧಿಸಿದಹಾಗೆ ನೀವು ಗಮನಿಸಿರುವ ಎಲ್ಲ ದೋಷಗಳಿಗೂ ಕಾರ್ಯದರ್ಶಿಯವರು ಉತ್ತರಿಸುತ್ತಾರೆ

1981 ರ ಮಹಾಮಸ್ತಕಾಭಿಷೇಕ ಸಮಾರಂಭಕ್ಕೆ ಮಾಡಬೇಕಾಗಿರುವ ವ್ಯವಸ್ಥೆ ಗಳ ಬಗ್ಗೆ ನಮ್ಮ ಮುಂದಿರುವ ಬಹುದೊಡ್ಡ ಕಾರ್ಯಕ್ಕಾಗಿ ನಿಮ್ಮ ಸಲಹೆ ಬಹಳ ಅಮೂಲ್ಯವಾದದ್ದು ಮತ್ತು ಅದನ್ನು ನಿಜವಾದ ಉತ್ಸಾಹದಿಂದ ತೆಗೆದುಕೊಳ್ಳ ಬೇಕಾಗಿದೆ

ನೀವು ಸ್ವಾಮೀಜಿಯವರ ಗೌರವವನ್ನು ಕಾಪಾಡಿಕೊಳ್ಳಬೇಕು ಎಂದು ನಿಮ್ಮ ಪತ್ರದಲ್ಲಿ ಸರಿಯಾಗಿ ಹೇಳಿದ್ದೀರಿ ಮತ್ತು ಇದೇ ಉದ್ದೇಶಕ್ಕಾಗಿ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಸಭೆಯಲ್ಲಿ ಕಮಿಟಿಯ ಸಂಪರ್ಕವನ್ನು ಸ್ವಾಮೀಜಿಯಿಂದ ತಪ್ಪಿಸುವುದಕ್ಕಾಗಿ ಕಮಿಟಿಯ ಎಲ್ಲ ವ್ಯವಹಾರಗಳಿಗೂ ಉಪ-ಕಮಿಟಿಗಳನ್ನು ರಚಿಸಿ ಕೊಳ್ಳುವಂತೆ ನಾವು ಸಲಹೆ ಮಾಡಿದ್ದೆವು ಅದರಂತೆ ಕಮಿಟಿಯು ಉಪ-ಕಮಿಟಿಯನ್ನು ರಚಿಸಿದೆ

ಈ ಸಂದರ್ಭದಲ್ಲಿ ಈ ಕ್ಷೇತ್ರಕ್ಕಾಗಿ ನಿಮ್ಮ ಸೇವೆಗಳ ಬಗ್ಗೆ ಇಲ್ಲಿಯವರೆಗಿನ ನಿಮ್ಮ ಅಮೂಲ್ಯ ಮತ್ತು ಸುಸ್ಥಿರವಾದ ಸೇವೆಗಳನ್ನು ನಾವು ಮಾನ್ಯಮಾಡುತ್ತೇವೆ ಮತ್ತು ಕಮಿಟಿಯ ಸದಸ್ಯರಾಗಿ ಇನ್ನು ಮುಂದೆಯೂ ಇದೇ ರೀತಿಯ ತೀವ್ರ ಉತ್ಸಾಹವನ್ನು ನಿರೀಕ್ಷಿಸುತ್ತೇವೆ

ಆಶೀರ್ವಾದಗಳೊಂದಿಗೆ

ಸಹಿ

(ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ)

ಛೇರ್ಮನ್

## ಛೇರ್ಮನ್ ಸ್ಥಾನದ ದುರುಪಯೋಗ :

ಚಾರುಕೀರ್ತಿಸ್ವಾಮಿಜಿಯವರು ಬರೆದಿರುವ ಮೇಲಿನ ಎರಡು ಪತ್ರಗಳು ಛೇರ್ಮನ್‌ಸ್ಥಾನದ ಸ್ಪಷ್ಟದುರುಪಯೋಗವಲ್ಲದೆ ಬೇರಲ್ಲ !

ಶಾಂತರಾಜ್‌ರವರು ತಮ್ಮ ವರದಿಯ ಪ್ರತಿಯನ್ನು ಕಾರ್ಯದರ್ಶಿಯವರಿಗೆ ಕಳುಹಿಸಿ ಅದನ್ನು ತಾ॥ 4–8–79 ರ ಸಭೆಯ ಮುಂದೆ ಕಾರ್ಯದರ್ಶಿಯವರ ಅನಿಸಿಕೆಗಳೊಂದಿಗೆ ಮಂಡಿಸಲು ಸೂಚಿಸಿದ್ದಾರೆಯೇ ಹೊರತು ತಮಗೆ ಉತ್ತರ ಕಳುಹಿಸಿ ಎಂದು ಕೇಳಿಲ್ಲ ಹಾಗೆಯೇ ಛೇರ್ಮನ್ನರಾದ ಸ್ವಾಮಿಜಿಯವರನ್ನು ಉದ್ದೇಶಿಸಿ ವರದಿಯನ್ನು ಅವರಿಗೆ ಕಳುಹಿಸಿಕೊಟ್ಟಿದ್ದರೂ, ಛೇರ್ಮನ್ನರನ್ನು ಉತ್ತರ ಕೊಡಿ ಎಂದು ಎಲ್ಲೂ ಕೇಳಿಲ್ಲ ! ಪರಿಸ್ಥಿತಿ ಹೀಗಿರುವಾಗ ಈ ವರದಿಯನ್ನು ಕಮಿಟಿಯ ಸಭೆ ಚರ್ಚಿಸಿ ಅದರ ಬಗ್ಗೆ ತೀರ್ಮಾನಕ್ಕೆ ಬರಬೇಕಾಗಿತ್ತು ಕಮಿಟಿಯ ಸಭೆಗೆ ಕಾರ್ಯದರ್ಶಿಯವರು ಸಮಂಜಸವಾದ ವಿವರಣೆಯನ್ನು ಇನ್ನೂ ಕೊಡದೆ ಇರುವಾಗ, ಅವರ ಪರವಾಗಿ ಉತ್ತರ ಕೊಡಲು ಕಮಿಟಿಯ ಅಧಿಕಾರಸ್ಥಾನದಲ್ಲಿರುವ ಯಾರೇ ಆಗಲಿ ಧಾವಿಸಿದರೆ, ಅದು ತಮ್ಮ ಅಧಿಕಾರಸ್ಥಾನವನ್ನು ದುರುಪಯೋಗ ಪಡಿಸಿಕೊಂಡಂತಾಗುತ್ತದೆ ಆದ್ದರಿಂದ ಈ ಸಂದರ್ಭದಲ್ಲಿ ಚಾರುಕೀರ್ತಿಸ್ವಾಮಿಜಿಯವರು ಅವ್ಯವಹಾರಗಳನ್ನು ಮಾಡಿರುವ ಕಾರ್ಯದರ್ಶಿಯವರ ಪರವಾಗಿ ಅದೂ ಶಾಂತರಾಜರಿಗೆ ಉತ್ತರ ಕೊಡಲು ಹೊರಟು ತಮ್ಮ ಗೌರವಾನ್ವಿತವಾದ ಛೇರ್ಮನ್ ಸ್ಥಾನವನ್ನು ದುರುಪಯೋಗ ಪಡಿಸಿಕೊಂಡಿದ್ದಾರೆ ಸ್ವಾಮಿಜಿಯವರ ಈ ನಡವಳಿಕೆಯಿಂದಾಗಿ ಕಮಿಟಿಯಲ್ಲಿ ಅವ್ಯವಹಾರಗಳನ್ನು ಮಾಡಿರುವವರು ಸ್ವಾಮಿಜಿಯವರು ಎಂದು ಅರ್ಥವಾಗುತ್ತದೆ

ಹೋಗಲಿ ಛೇರ್ಮನ್ನರನ್ನೇ ನಾವು ಕಾರ್ಯದರ್ಶಿಯೆಂದು ಭಾವಿಸೋಣ ! ಅಥವಾ ಛೇರ್ಮನ್ನರ ಪತ್ರಗಳನ್ನೇ ಕಮಿಟಿಗೆ ಕೊಟ್ಟ ವಿವರಣೆಯೆಂದು ಭಾವಿಸೋಣ ! ಹೀಗಾದರೂ ಉತ್ತರಗಳು ಸರಿಯಾಗಿವೆಯೇ ಎಂದರೆ, ಛೇರ್ಮನ್ನರೂ ಸಹ ವರದಿಯ ಹೃದಯವನ್ನೇ ಅರ್ಥಮಾಡಿಕೊಂಡಿಲ್ಲ ಅಡ್ಡದಾರಿ ಹಿಡಿದ ವಿವರಣೆಗಳನ್ನು ಕೊಡುವುದರ ಮೂಲಕ ವರದಿಯು ಪ್ರಸ್ತಾಪಿಸಿರುವ ಕೆಲವು ಮೂಲಭೂತ ಪ್ರಶ್ನೆಗಳನ್ನು ಹಾಗೆಯೇ ಉಳಿಸಿ ಅವರು ಮುಂದೆ ಸಾಗುತ್ತಾರೆ ಖರ್ಚಾದ ಹಣ ಸಣ್ಣ ಮೊತ್ತವೆ ಅಥವಾ ದೊಡ್ಡ ಮೊತ್ತವೇ ಎಂಬುದು ಇಲ್ಲಿ ಮುಖ್ಯವಲ್ಲ 15,000 ರೂಪಾಯಿಗಳನ್ನು ಖರ್ಚುಮಾಡಿರಲಿ, ಅಥವಾ 50,000 ರೂಪಾಯಿಗಳನ್ನು ಖರ್ಚುಮಾಡಿರಲಿ ಆ ಹಣ ಪ್ರಾಮಾಣಿಕವಾಗಿ ಖರ್ಚಾಗಿದೆಯೇ ? ನಿಜವಾದ ಅಗತ್ಯಕ್ಕೆ ತಕ್ಕಂತೆ ಆಗಿದೆಯೆ ? ದುಂದುವೆಚ್ಚಕ್ಕೆ ಅವಕಾಶವಿಲ್ಲದಂತೆ ಆಗಿದೆಯೆ ? ಎಂಬುದು ಬಹಳ ಮುಖ್ಯ ! ಶಾಂತರಾಜರ ವರದಿ ಈ ಮೂಲಭೂತ ಅಂಶಗಳನ್ನೊಳಗೊಂಡಿದೆ

ಈ ಅಂಶವನ್ನು ಇನ್ನೂ ಸ್ಪಷ್ಟಪಡಿಸಲು ಒಂದೆರಡು ನಿದರ್ಶನಗಳನ್ನು ಗಮನಿಸ ಬಹುದು

1 ರಥೋತ್ಸವದ ವೆಚ್ಚಗಳಲ್ಲಿ ಒಂದು ಲಾರಿಲೋಡ್ ಸೌದೆಖರ್ಚು ಎಂದು 1880-00 ರೂಪಾಯಿಗಳನ್ನು ತೋರಿಸಲಾಗಿದೆ ಮಂಡ್ಯದವರು 5 ದಿವಸಗಳ ಕಾಲ ಸೌದೆಯನ್ನು ಉಪಯೋಗಿಸುತ್ತಾರೆ ಊರಿನ ಜನಗಳ ಊಟದ ವ್ಯವಸ್ಥೆಗಾಗಿ 1 ದಿನ ಸೌದೆ ಖರ್ಚಾಗುತ್ತದೆ ಒಟ್ಟು 6 ದಿನಗಳು ಮಾತ್ರ ಉಪಯೋಗಿಸುವ ಸೌದೆಗೆ 1880-00 ರೂಪಾಯಿಗಳು ಖರ್ಚಾಯಿತು ! ಕಡೆಯಲ್ಲಿ ಒಂದು ಸೌದೆಯೂ ಉಳಿಯಲಿಲ್ಲ ಎಂದು ಹೇಳಿದರೆ, ಕೇಳುವವರು ಮೂರ್ಖರಾಗಿರಬೇಕು !

2 ಮಹಾವೀರ ಕುಂದಕುಂದ ಭವನದ ಉದ್ಘಾಟನೆಯ ಸಂದರ್ಭದಲ್ಲಿ ಮುಂದೆ ಹಾಕಿದ್ದ ಪೆಂಡಾಲ್ ಯಾವ ಒಗೆಯದೆಂದು ಎಲ್ಲರೂ ತಿಳಿದಿದ್ದಾರೆ ಇದಕ್ಕೆ 1160-00 ರೂಪಾಯಿಗಳ ಖರ್ಚಾಗಿದೆಯೆಂದರೆ ಎಂತಹವರಿಗೂ ದಿಗ್ಭ್ರಾಂತಿಯಾಗುತ್ತದೆ ಇದನ್ನು ಅಳತೆಗೆಟ್ಟ ವೆಚ್ಚವೆಂದು ಹೇಳಬಾರದೆ?

3 ಧಾಮಸಂಪ್ರೋಕ್ಷಣೆಯ ಸಮಾರಂಭಗಳ ರಶೀದಿ ನಂ 20 ರಲ್ಲಿ 40-00 ರೂಪಾಯಿಗಳನ್ನು ಧ್ವನಿವರ್ಧಕದ ವೆಚ್ಚವೆಂದು ತೋರಿಸಲಾಗಿದೆ ಹಣ ಪಡೆದವರ ಹೆಸರು ಸಹಿ ಯಾವುದೂ ಇಲ್ಲ ! ಇಂತಹ ರಶೀದಿಗಳಿಗೆ ಹಣ ಮಂಜೂರು ಮಾಡುವ ಕಾರ್ಯದರ್ಶಿಯವರ ವರ್ತನೆಯನ್ನು ಏನೆಂದು ಕರೆಯಬೇಕು?

ಇಂತಹ ಪ್ರಸಂಗಗಳನ್ನೆಲ್ಲಾ ಬೆಳಕಿಗೆ ತಂದಿರುವ ವರದಿಯನ್ನು ಚಾರುಕೀರ್ತಿಯವರು ದಾರಿ ತಪ್ಪಿಸುವ ಉದ್ದೇಶವಾದರೂ ಏನು ? "ಕಮಿಟಿಯು ಹಣವನ್ನು ಖರ್ಚುಮಾಡುವುದರಲ್ಲಿ ಎಚ್ಚರವಹಿಸಿದೆ " ಎಂದು ಚಾರುಕೀರ್ತಿಯವರು ಆಲೋಚನೆ ಮಾಡದೆ ಬರೆದು ಬಿಟ್ಟರೆ ದುಂದುವೆಚ್ಚಗಳು ಸರಿ ಎಂಬ ಅರ್ಥವೆ ? ಸ್ವಾಮೀಜಿಯವರ ಪತ್ರಗಳಲ್ಲಿರುವ ತರ್ಕಹೀನವಾದ ವಿವರಣೆಗಳನ್ನು ಗಮನಿಸಿದಾಗ, ಸ್ವಾಮೀಜಿಯವರು ಕಾರ್ಯದರ್ಶಿಯವರ ಸ್ಥಾನವನ್ನೊಳಗೊಂಡಂತೆ ಕಮಿಟಿಯ ಎಲ್ಲಾ ಆಡಳಿತ ವ್ಯವಹಾರಗಳನ್ನೂ ಹೇಗೆ ತಮ್ಮ ಕಪಿಮುಷ್ಟಿಯ ಹಿಡಿತಕ್ಕೊಳಪಡಿಸಿಕೊಂಡಿದ್ದಾರೆ ಎಂಬುದು ಮನದಟ್ಟಾಗುತ್ತದೆ ಮೇನೇಜಿಂಗ್ ಕಮಿಟಿಯೆಂದರೆ ಸ್ವಾಮೀಜಿ, ಸ್ವಾಮೀಜಿಯೆಂದರೆ ಮೇನೇಜಿಂಗ್ ಕಮಿಟಿ, ಆದ್ದರಿಂದ ಅವ್ಯವಹಾರಗಳನ್ನು ಯಾರೂ ಪ್ರಶ್ನಿಸುವ ಹಾಗಿಲ್ಲ ! ಎಂಬ ಸರ್ವಾಧಿಕಾರದ ಧಾಟಿಯಲ್ಲಿ ಸ್ವಾಮೀಜಿಯವರ ಎರಡು ಪತ್ರಗಳಿವೆ ಇದು ಇನ್ನೂ ಮನದಟ್ಟಾಗಬೇಕಾದರೆ ಸ್ವಾಮೀಜಿಯವರ ಪತ್ರಗಳಲ್ಲಿರುವ ಕೆಲವು ವಿವರಣೆಗಳನ್ನೂ ಅವುಗಳ ಮುಂದಿರುವ ನನ್ನ ಟೀಕೆಯನ್ನೂ ಗಮನಿಸಬಹುದು

1 ಶಾಂತರಾಜರು ತಮ್ಮ ವರದಿಯ ಪ್ರತಿಯನ್ನು, ಪದನಿಮಿತ್ತ ಉಪ-ಛೇರ್ಮನ್ನರ ಅವಗಾಹನೆಗೆ ತಂದಿರುವುದನ್ನು ಛೇರ್ಮನ್ನರಾದ ಸ್ವಾಮಿಾಜಿಯವರು ಸಹಿಸಿಲ್ಲ ! ಇದಕ್ಕಾಗಿ ಶಾಂತರಾಜರನ್ನು ಆಕ್ಷೇಪಿಸಿದ್ದಾರೆ

※ ಸ್ವಾಮಿಾಜಿಯವರಿಗೆ ಅಸಹನೆಯ ಈ ಸಂಕುಚಿತ ಸ್ವಭಾವ ಏತಕ್ಕಾದರೂ ಬಂತು ? ಇದು ಕಾರ್ಯದರ್ಶಿಯವರ ಅವ್ಯವಹಾರಗಳನ್ನು ಮುಚ್ಚಿಹಾಕುವ ಪ್ರಯತ್ನವೆ? ಎಲ್ಲಾ ವಿಚಾರಗಳು ತಮ್ಮೊಬ್ಬರಿಗೆ ಮಾತ್ರ ಮೊದಲು ತಿಳಿಯಬೇಕು ಎಂಬುದು ಸರ್ವಾಧಿಕಾರಶಾಹಿ ವರ್ತನೆಯಲ್ಲವೆ ?

2 ಕಮಿಟಿಯ ಸಭೆಯಲ್ಲಿ ವರದಿಯ ವಿಚಾರ ಪರಿಶೀಲಿಸಿ ಅಲ್ಲಿಯ ಕೆಲವಂಶಗಳಿಗೆ ಸರಿಯಾದ ಉತ್ತರ ನೀಡಿದ್ದೇವೆ ಎಂದು ಸ್ವಾಮಿಾಜಿಯವರು ಬರೆದಿದ್ದಾರೆ

※ ಶಾಂತರಾಜರ ವರದಿಗೆ ಉತ್ತರ ನೀಡಬೇಕಾದ್ದು ಕಮಿಟಿಯಲ್ಲ; ಅಥವಾ ಸ್ವಾಮಿಾಜಿಯವರಲ್ಲ ವರದಿಯ ಮೂಲಕ ತಮ್ಮ ಕರ್ತವ್ಯಗಳಿಗೆ ಸಂಬಂಧಿಸಿದಂತೆ ಬಂದಿರುವ ಆರೋಪಗಳಿಗೆ ಕಾರ್ಯದರ್ಶಿಯವರು ಕಮಿಟಿಗೆ ವಿವರಣೆಯನ್ನು ನೀಡಬೇಕಾದ್ದು ಇಲ್ಲಿ ನಿಜವಾಗಿ ಆಗಬೇಕಾಗಿದ್ದ ಕೆಲಸ ಕಾರ್ಯದರ್ಶಿಯವರ ವಿವರಣೆ ಸರಿಯೆ? ಅಲ್ಲವೆ? ಎಂದು ತೀರ್ಮಾನಿಸುವ ಹಕ್ಕು ಕಮಿಟಿಗಿದೆ

3 ವೆಚ್ಚವನ್ನು ಕಡಿತಗೊಳಿಸುವ ಆಕಾಂಕ್ಷೆಯಿದ್ದರೆ ಹೊಸ ಮುಂಗಡ ಪತ್ರವನ್ನು ಸಿದ್ಧಪಡಿಸುವಾಗ ನೀವು ಅದನ್ನು ಧಾರಾಳವಾಗಿ ಮಾಡಬಹುದಿತ್ತು ಎಂದು ಸ್ವಾಮಿಾಜಿಯವರು ಬರೆದಿದ್ದಾರೆ

※ ಸಮಾರಂಭಗಳಿಗಾಗಿ ಮಾಡಿರುವ ವೆಚ್ಚ ಹೆಚ್ಚಾಯಿತು ಎಂದು ಶಾಂತರಾಜರು ವರದಿಯಲ್ಲಿ ಹೇಳಿಲ್ಲ ಆಗಿರುವ ವೆಚ್ಚದಲ್ಲಿ ಕಂಡುಬಂದಿರುವ ದುಂದುವೆಚ್ಚ, ಅನಗತ್ಯ ವೆಚ್ಚ ಮತ್ತು ಕಲ್ಪಿತ ವೆಚ್ಚಗಳನ್ನು ತರ್ಕಬದ್ಧವಾಗಿ ವಿವರಿಸಿದ್ದಾರೆ

4 ಮುಂಗಡಪತ್ರದಲ್ಲಿ ನೀವು 15,000 ರೂಪಾಯಿಗಳನ್ನು ಒದಗಿಸಿದ್ದೀರಿ ಇದಕ್ಕೆ ಕಮಿಟಿಯ ಒಪ್ಪಿಗೆ ದೊರತಿದೆ ಅದರಂತೆ ಖರ್ಚಾಗಿದೆ ಆದ್ದರಿಂದ ಈಗ ನೀವು ವಿಪರೀತ, ಅನಗತ್ಯವೆಂದು ಟೀಕಿಸುವುದು ನ್ಯಾಯೋಚಿತವಲ್ಲವೆಂದು ನಮಗನಿಸುತ್ತದೆ ಎಂದು ಚಾರುಕೀರ್ತಿಸ್ವಾಮಿಾಜಿ ಬರೆದಿದ್ದಾರೆ

※ 15,000 ರೂಪಾಯಿಗಳನ್ನು ಒದಗಿಸಿದ್ದು, ಅದನ್ನು ಕಮಿಟಿ ಒಪ್ಪಿದ್ದು ನಿಜವಾದರೂ, ಆ ಹಣವನ್ನು ಸ್ವೇಚ್ಛೆಯಾಗಿ ಮನಬಂದಂತೆ ವೆಚ್ಚಮಾಡಬಹುದೆಂದು

ಆದರ ಅರ್ಥವಲ್ಲ ವೆಚ್ಚಗಳು ಪ್ರಾಮಾಣಿಕವೂ, ನ್ಯಾಯೋಚಿತವೂ ಆಗಿರಬೇಕೆಂದು ಹೇಳುವುದೇ ಅನ್ಯಾಯವಾಗಿಬಿಟ್ಟರೆ ಸತ್ಯಕ್ಕೆ ಬೆಲೆಯಾದರೂ ಉಂಟೆ ? ಎಂದು ಕೇಳ ಬೇಕಾಗುತ್ತದೆ !

5 ಅಗತ್ಯವಿರುವಷ್ಟೇ ಪ್ರಮಾಣದಲ್ಲಿ ವಸ್ತುಗಳನ್ನು ಪೂರೈಸುವುದರಿಂದ ಉಪಯೋಗಿಸದೇ ಇರುವ ವಸ್ತುಗಳ ಪ್ರಶ್ನೆಯೇ ಏಳುವುದಿಲ್ಲ ಎಂದು ಸ್ವಾಮೀಜಿ ಯವರು ಬರೆದಿದ್ದಾರೆ

※ ಮೂರೂ ಸಮಾರಂಭಗಳಿಗಾಗಿರುವ 27,000 ರೂಪಾಯಿಗಳಿಗೂ ಮಿಕ್ಕ ಖರ್ಚಿನಿಂದಾಗಿ ಕಡೆಯಲ್ಲಿ ಯಾವೊಂದೂ ಸಾಮಗ್ರಿಯೂ ಉಳಿಯಲಿಲ್ಲವೆಂಬುದು ಪರಮಾಶ್ಚರ್ಯವೇ ಸರಿ ! ಕಡೆಗೆ ಉಳಿದದ್ದು ಆಕ್ಷೇಪಣೆಯೊಂದೇ ಎಂದಾದರೂ ಸ್ವಾಮೀಜಿಯವರು ಹೇಳಬಹುದಿತ್ತಲ್ಲ !

6 ಲೆಕ್ಕಗಳು ಹಾಗೂ ರಶೀದಿಗಳಲ್ಲಿ ಆದ ವ್ಯತ್ಯಾಸಗಳ ಬಗ್ಗೆ ಕಾರ್ಯದರ್ಶಿ ಯವರು ನಿಮಗೆ ವಿವರವಾಗಿ ಬರೆಯುತ್ತಾರೆ! ಎಂದು ಸ್ವಾಮೀಜಿಯವರು ತಿಳಿಸಿದ್ದಾರೆ

※ ರಶೀದಿಗಳಲ್ಲಾಗಿರುವ ಲೋಪ, ದೋಷ ಕೃತ್ರಿಮತೆಗಳನ್ನು ಸ್ವಾಮೀಜಿ ಯವರು ಬರೇ ವ್ಯತ್ಯಾಸಗಳೆಂದು ಕರೆದಿರುವುದು ವಿಸ್ಮಯಕರವಾಗಿದೆ ಇದುವರೆಗೂ ಕಾರ್ಯದರ್ಶಿಯವರ ಕುರ್ಚಿಯಲ್ಲಿ ಕುಳಿತು ಉತ್ತರ ನೀಡುತ್ತಿದ್ದ ಸ್ವಾಮೀಜಿಯವರು ಸ್ಪಷ್ಟವಾದ ಲೋಪದೋಷಗಳ ವಿಚಾರ ಬರುತ್ತಿದ್ದಂತೆಯೇ ಕಾರ್ಯದರ್ಶಿಯವರತ್ತ ಕೈ ತೋರಿಸುತ್ತಿರುವುದು ಅತ್ಯಂತ ನಾಟಕೀಯವಾಗಿದೆ

7 ಈ ದಿನಗಳ ಸನ್ನಿವೇಶಗಳಲ್ಲಿ ಜನರಲ್ಲಿ 'ಶ್ರದ್ಧೆ' ಹಾಗೂ 'ಭಕ್ತಿ' ಇಲ್ಲ ಅವರನ್ನು ಆಕರ್ಷಿಸಲು ಇಂಥ ಕಾರ್ಯಕ್ರಮಗಳ ವ್ಯವಸ್ಥೆ ಅಗತ್ಯ ಕೆಲವು ಗಣ್ಯರನ್ನು ಆಹ್ವಾನಿಸುವುದರಿಂದ ನಾವು ದೊಡ್ಡ ಜನಸ್ತೋಮವನ್ನು ಆಕರ್ಷಿಸಬಹುದು ಆದ್ದ ರಿಂದ ಜನರನ್ನು ಆಕರ್ಷಿಸುವುದಕ್ಕಾಗಿಯೇ ನಾವು ಇಂಥ ಕಾರ್ಯಕ್ರಮಗಳನ್ನು ನಿಯೋ ಜಿಸಿದ್ದೆವು ಎಂದು ಚಾರುಕೀರ್ತಿಗಳು ಬರೆದಿದ್ದಾರೆ

※ ಯಾವ ಗಣ್ಯರನ್ನಾದರೂ ಕರೆಸಿರಿ, ಎಷ್ಟು ಹಣವನ್ನಾದರೂ ಖರ್ಚು ಮಾಡಿರಿ, ಅಭ್ಯಂತರವಿಲ್ಲ ! ಆದರೆ ಅದಕ್ಕಾಗಿ ಖರ್ಚಾಗುವ ಹಣ ಪ್ರಾಮಾಣಿಕವಾಗಿ ಅಗತ್ಯಕ್ಕನುಗುಣವಾಗಿ ಆಗಿದೆಯೆ ಎಂಬ 'ಶ್ರದ್ಧೆ' ಮುಖ್ಯ 'ಭಕ್ತಿ'ಯಿಂದ ಜನರು ಕೊಡುವ ಹಣ ದುಂದುವೆಚ್ಚವಾಗಬಾರದಲ್ಲವೆ? ಹಾಗೆಯೇ ಜನಸ್ತೋಮವನ್ನಾಕರ್ಷಿಸು

ವುದೇ ಧ್ಯೇಯವಾಗಬಾರದು ! ಜನರು ಸಂತೆಯಲ್ಲೂ `ಜಾತ್ರೆಯಲ್ಲೂ ನಾನಾ ಕಾರಣಗ ಳಿಂದಾಗಿ ಆಕರ್ಷಿತರಾಗುತ್ತಾರೆ ಜನಸ್ತೋಮಕ್ಕಿಂತ ಗುಣಸ್ತೋಮವನ್ನಾಕರ್ಷಿಸುವುದು ಧರ್ಮಸಂಸ್ಥೆಯ ಆದ್ಯ ಕರ್ತವ್ಯವಾಗಬೇಕು.

8 ಸರಿಯಾದ ಲೆಕ್ಕಪತ್ರಗಳನ್ನಿಡುವುದು ಕಾರ್ಯದರ್ಶಿಯವರ ಕಛೇರಿಯ ಜವಾಬ್ದಾರಿ ಎಂದು ಎತ್ತಿತೋರಿಸುವುದು ಅಸಗತ್ಯ ಎಂದು ಸ್ವಾಮಿಜಿಯವರು ಬರೆದಿದ್ದಾರೆ

❋ ಸರಿಯಾದ ಲೆಕ್ಕ ಪತ್ರಗಳನ್ನಿಡಬೇಕಾದ ಜವಾಬ್ದಾರಿಯುಳ್ಳ ಕಾರ್ಯ ದರ್ಶಿಯವರು ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೇ ಹೋದಾಗ, ಸಂಸ್ಥೆಯ ಹಿತದೀಂದ ಅದನ್ನು ಎತ್ತಿ ತೋರಿಸುವ ಹಕ್ಕು ಸದಸ್ಯರಿಗಿದ್ದೇ ಇರುತ್ತದೆ ಅಲ್ಲಿಗೂ ಅವರು ತಾತ್ಸಾರ ತೋರಿದರೆ ಯಾರನ್ನೇ ಆಗಲಿ ರಾಜೀನಾಮೆಗಾಗಿಯೂ ಒತ್ತಾಯಿಸ ಬೇಕಾಗುತ್ತದೆ !

9 ಲೆಕ್ಕಪತ್ರಗಳನ್ನು ಸರಿಯಾಗಿ ಇಡುವಂತೆ ಕಾರ್ಯದರ್ಶಿ ಹಾಗೂ ಅವರ ಕಾರ್ಯಾಲಯದ ಸಿಬ್ಬಂದಿಯವರಿಗೆ ಸಹಾಯ ಹಾಗೂ ಮಾರ್ಗದರ್ಶನ ಮಾಡುವಂತೆ ನಿಮಗೆ ಒಪ್ಪಿಸಲಾಗಿದೆ ಎಂದೂ ಸಹ ಸ್ವಾಮಿಜಿಯವರು ಬರೆದಿದ್ದಾರೆ

❋ ಒಪ್ಪಿಸಲಾಗಿದೆ ಎಂದು ಹೇಳಿದ ಮೇಲೆ ಈ ಹಿಂದೆ ಜವಾಬ್ದಾರಿಯನ್ನು ಎತ್ತಿತೋರುವುದು ಅಸಗತ್ಯ ಎಂದು ಸ್ವಾಮಿಜಿಯವರು ಹೇಳಬಾರದಿತ್ತು. ಸ್ವಾಮಿಜಿ ಯವರ ಪತ್ರಗಳಲ್ಲಿರುವ ವಿರೋಧಾಭಾಸಗಳಿಗೆ ಇದೊಂದು ನಿದರ್ಶನ

10 ಮೇಲಿನ ವಿವರಗಳೊಂದಿಗೆ ನಾವು ನಿಮ್ಮ ಅವಗಾಹನೆಗಾಗಿ ಕಮಿಟಿಯ ನಿಲುವನ್ನು ಪ್ರಕಟಿಸಿದ್ದೇವೆ ಎಂದು ಸ್ವಾಮಿಜಿ ಬರೆದಿದ್ದಾರೆ.

❋ ಇದು ಕಮಿಟಿಯೆಂದರೆ ಸ್ವಾಮಿಜಿ ಎಂಬ ಭ್ರಮೆಯ ಮೈಮರೆವಿನಲ್ಲಿ ಹೇಳಿರುವ ಸುಳ್ಳು ಮಾತು ! ಕಮಿಟಿಯ ನಿಲುವು, ಕಮಿಟಿಯ ಸಭೆಯಲ್ಲಿ ಸದಸ್ಯರ ಚರ್ಚೆಯ ಮೂಲಕ ಪ್ರಕಟವಾಗಬೇಕೇ ಹೊರತು, ಛೇರ್ಮನ್ನರ ಸ್ಥಾನವನ್ನು ದುರುಪ ಯೋಗ ಪಡಿಸಿಕೊಂಡ ಒಂದು ಪತ್ರದ ಮೂಲಕವಲ್ಲ !

11 ನಮಗೆ ತಿಳಿದಿರುವ ಮಟ್ಟಿಗೆ ಕಮಿಟಿಯ ಲೆಕ್ಕಪತ್ರಗಳ ವಿಚಾರದಲ್ಲಿ ನಮ್ಮನ್ನು ಒಳಪಡಿಸುವ ಯಾವ ಸಂದರ್ಭವೂ ನಮಗೆ ಕಂಡುಬಂದಿಲ್ಲ ಎಂದು ಸ್ವಾಮಿಜಿ ಹೇಳಿದ್ದಾರೆ

11 -

❋ ಪ್ರಶ್ನಿತವಾದ ವೆಚ್ಚಗಳಿಗೆ ಕಾರ್ಯದರ್ಶಿಯವರ ಬದಲಾಗಿ ಸ್ವಾಮಿಜಿಯವರೇ ಉತ್ತರ ಕೊಡಲು ಮುಂದಾಗಿ ಧಾವಿಸಿರುವುದೇ ಅವರು ಲೆಕ್ಕಪತ್ರಗಳ ವಿಚಾರಗಳಲ್ಲಿ ಒಳಗಾಗಿದ್ದಾರೆ ಎಂಬುದನ್ನು ಸ್ಪಷ್ಟಪಡಿಸುತ್ತದೆ ಇಷ್ಟಲ್ಲದೆ ಕಮಿಟಿಯ ಎಲ್ಲಾ ವ್ಯವಹಾರಗಳಿಗೆ ಹಿಡಿದಿರುವ ರಾಹು ಸ್ವಾಮಿಜಿಯವರೆಂಬುದು ಅವರ ಪತ್ರಗಳಿಂದಲೇ ವಿದಿತವಾಗುತ್ತದೆ

12 ಈ ಸಂದರ್ಭದಲ್ಲಿ ಈ ಕ್ಷೇತ್ರಕ್ಕಾಗಿ ನಿಮ್ಮ ಸೇವೆಗಳ ಬಗ್ಗೆ ಇಲ್ಲಿಯವರೆಗೆ ನಿಮ್ಮ ಅಮೂಲ್ಯ ಮತ್ತು ಸುಸ್ಥಿರವಾದ ಸೇವೆಗಳನ್ನು ನಾವು ಮಾನ್ಯ ಮಾಡುತ್ತೇವೆ ಮತ್ತು ಕಮಿಟಿಯ ಸದಸ್ಯರಾಗಿ ಇನ್ನು ಮುಂದೆಯೂ ಇದೇ ರೀತಿಯ ತೀವ್ರ ಉತ್ಸಾಹವನ್ನು ನಿರೀಕ್ಷಿಸುತ್ತೇವೆ. ಎಂಬುದಾಗಿಯೂ ಸಹ ಸ್ವಾಮಿಜಿ ಶಾಂತರಾಜರಿ ಬರೆದಿದ್ದಾರೆ

❋ ಸ್ವಾಮಿಜಿಯವರ ದ್ವಿಮುಖ ನೀತಿ ಮೇಲಿನ ಮಾತುಗಳಲ್ಲಿ ಪಡಿಮೂಡಿದೆ ತೊಟ್ಟಿಲನ್ನೂ ತೂಗುವುದು ಮಗವನ್ನೂ ಚಿವುಟುವುದು ಎಂಬರ್ಥದ ಸ್ವಾಮಿಜಿಯವರ ಮಾತುಗಳಿಂದ ಶಾಂತರಾಜರು ಮೋಸಹೋಗಲು ಸಾಧ್ಯವೆ? ಕಾರ್ಯದರ್ಶಿಯವರಿಗೆ ಬೆನ್ನಹಿಂದೆ ರಕ್ಷಣೆಕೊಟ್ಟುಕೊಂಡು ವರದಿಯನ್ನು ತಿರುವುಮುರುವು ಮಾಡಲು ಹೆಣಗಾಡುತ್ತಿರುವ ಸ್ವಾಮಿಜಿಯವರಿಗೆ ಮಾನ್ಯತೆ ಎಂಬ ಪದದ ಅರ್ಥವಾದರೂ ತಿಳಿದಿದೆಯೇ? ಧರ್ಮಣ್ಣರ ಸ್ಥಾನವನ್ನೇ ಆಯುಧವನ್ನಾಗಿ ಮಾಡಿಕೊಂಡು ಅದನ್ನು ದುರುಪಯೋಗಪಡಿಸುವ ಸ್ವಾಮಿಜಿಯವರನ್ನು ಕಂಡರೆ ವರದಿಯನ್ನು ನೀಡಬೇಕಾದ ಉಪ-ಕಮಿಟಿಯವರಿಗೆ ತೀವ್ರ ಉತ್ಸಾಹವಾದರೂ ಎಲ್ಲಿ ಬಂದೀತು? ತಪ್ಪಿತಸ್ಥರೆನಿಸಿಕೊಂಡ ಕಮಿಟಿಯ ಕಾರ್ಯದರ್ಶಿಯವರಿಗೆ ಧರ್ಮಣ್ಣರ ಅಯಾಚಿತ ರಕ್ಷಣೆ ಸಿಕ್ಕಿಬಿಟ್ಟರೆ ಇನ್ನು ಅವರು ಆದ ತಪ್ಪುಗಳಿಗೆ ವಿವರಣೆ ನೀಡುವಾಗ ತಪ್ಪನ್ನು ಹೊರಿಸಿದವರ ವಿರುದ್ಧ ಸಡ್ಡು ಹೊಡೆದು ನಿಲ್ಲ ಬಹುದಲ್ಲವೆ? ಒಂದು ಕಡೆ ಅಕ್ರಮಗಳಿಗೆ ತೀವ್ರ ಪ್ರೋತ್ಸಾಹವನ್ನೂ ಕೊಡುತ್ತಾ ಇನ್ನೊಂದು ಕಡೆ ಅಕ್ರಮಗಳನ್ನು ಪತ್ತೆಮಾಡುವವರಿಂದ ತೀವ್ರ ಉತ್ಸಾಹವನ್ನೂ ನಿರೀಕ್ಷಿಸುವವರಿಗೆ ಏನೆಂದು ಕರೆಯಬೇಕು?

**ತೀರಾ ವೈಯಕ್ತಿಕ ಪತ್ರ :**

ಕಾರ್ಯದರ್ಶಿಯವರು ತಾ॥ 2–8–79 ರಂದು ಬರೆದ ಪತ್ರದಿಂದಾಗಿ ಶಾಂತರಾಜರ ಮನಸ್ಸಿಗೆ ಬೇಸರವಾಗಿತ್ತು ರಶೀದಿಗಳ ಸ್ಪಷ್ಟವಾದ ಲೋಪದೋಷಗಳನ್ನು ವರದಿಯಲ್ಲಿ ಪ್ರಸ್ತಾಪಿಸಿದ ಕೂಡಲೇ ಕಾರ್ಯದರ್ಶಿಯವರು, ರಶೀದಿಗಳ ಫೈಲೇ ಪೂರ್ಣವಾಗಿರಲಿಲ್ಲ ಎಂದು ಆಪಾದನೆಗಳಿಂದ ಜಾರಿಕೊಳ್ಳಲು ಪ್ರಯತ್ನಿಸಿದ್ದು, ಮತ್ತು

ತಾ॥ 4-8-1979 ರ ಕಮಿಟಿಯ ಸಭೆಯಲ್ಲಿ ತಮ್ಮ ಶ್ರಮಭರಿತ ಪ್ರಯತ್ನದ ಸದಿಚ್ಛೆಯ ವರದಿಗೆ ಸಿಕ್ಕಿದ ಉದ್ದೇಶಪೂರ್ವಕವಾದ ನಿರುತ್ತೇಜನ, ಸ್ವಾಮಿಜಿಯವರೊಂದಿಗೆ ನಿಕಟವಾಗಿ ಸಮಾಲೋಚಿಸಿ ಪೆಚ್ಚಗಳನ್ನು ಮಾಡಿದ್ದೇನೆ ಎಂದು ಕಾರ್ಯದರ್ಶಿಯವರು ಹೇಳಿರುವುದು, ಈ ಎಲ್ಲಾ ವಿಚಾರಗಳಿಂದಾಗಿ ಕಮಿಟಿಯ ಆಡಳಿತ ಹಿಡಿದಿರುವ ಅಡ್ಡದಾರಿ ಮುಂತಾದ ವಿಷಯಗಳನ್ನೆಲ್ಲಾ ಯೋಚಿಸುತ್ತಾ ಹೋದಂತೆ, ಶಾಂತರಾಜರಿಗೆ ಕಮಿಟಿಯ ತಮ್ಮ ಸದಸ್ಯತ್ವ ಕೇವಲ ಕೃತಕವೆನ್ನಿಸತೊಡಗಿತು

ಯಾರೊಬ್ಬರ ಮರ್ಜಿಯನ್ನೂ ಕಾಯದೆ ಮನಸ್ಸಾಕ್ಷಿಗೆ ಒಪ್ಪುವಂತೆ ಕಾರ್ಯನಿರ್ವಹಿಸಲು ಧೀರ್ಮನ್ನರಾದ ಸ್ವಾಮಿಜಿಯವರೇ ಅಡ್ಡಿಯಾಗಿರುವುದರಿಂದ ಇನ್ನು ಕಮಿಟಿಯ ಸದಸ್ಯರಾಗಿ ಮುಂದುವರೆಯುವುದರಲ್ಲಿ ಅರ್ಥವಿಲ್ಲ ಎನ್ನಿಸತೊಡಗಿತು, ಅವ್ಯವಹಾರಗಳಿಗೆ ಬೆಂಬಲ ಕೊಡುವವರ ನೆರಳಾಗಿ ಕೆಲಸ ನಿರ್ವಹಿಸಲು ಶಾಂತರಾಜರ ಅಂತರಂಗ ಒಪ್ಪಲಿಲ್ಲ ! ಅಷ್ಟಾಗಿ ಕಮಿಟಿಯ ಸದಸ್ಯತ್ವವನ್ನು ಶಾಂತರಾಜರೇನೂ ಹಂಬಲಿಸಿ ಕಾಡಿ ಬೇಡಿ ಪಡೆದಿರಲಿಲ್ಲ ! ಶಾಂತರಾಜರು ಹಿಂದೆಲ್ಲಾ ಬೇಡ ಬೇಡವೆಂದು ಒಂದೇ ಸಮನೆ ನಿರಾಕರಿಸಿದ್ದರೂ ಸಹ ಸ್ವಾಮಿಜಿಯವರೇ ಬಿಡದಂತೆ ಒತ್ತಾಯದ ಮೂಲಕ ಅವರಿಗೆ ಸದಸ್ಯತ್ವದ ಪಟ್ಟ ಕಟ್ಟಿದ್ದರು ಆದ್ದರಿಂದ ಶಾಂತರಾಜರಿಗೆ ಕಮಿಟಿಯ ಸದಸ್ಯತ್ವದ ಮೇಲೆ ವ್ಯಾಮೋಹವೇನೂ ಇರಲಿಲ್ಲ ಈ ಎಲ್ಲಾ ಹಿನ್ನೆಲೆಯಲ್ಲಿ ಕಮಿಟಿಗೆ ರಾಜೀನಾಮೆ ಸಲ್ಲಿಸುವ ಆಲೋಚನೆ ಶಾಂತರಾಜರಲ್ಲಿ ಮೂಡಿತು

ಶಾಂತರಾಜರು ಕಮಿಟಿಯಿಂದ ನಿರ್ಗಮಿಸುವ ತಮ್ಮ ಮನದ ಆಲೋಚನೆಯನ್ನು ಚಾರುಕೀರ್ತಿಯವರ ಆಪ್ತರಾದ ವಿಶ್ವಸೇನರ ಮುಂದೆ ವ್ಯಕ್ತಪಡಿಸಿದರು ಈ ಸುದ್ದಿ ಚಾರುಕೀರ್ತಿಯವರನ್ನು ತಲುಪಿತು

ಗೃಹಸ್ಥರಾದ ಶಾಂತರಾಜರು ವ್ಯವಹಾರದ ಪರಿಗ್ರಹಗಳನ್ನು ಕಳಚಿಕೊಳ್ಳಲು ಬಯಸಿರುವ ಈ ಸಂದರ್ಭದಲ್ಲಿ, ತ್ಯಾಗಿಗಳೆನಿಸಿಕೊಂಡು ಕಮಿಟಿಯ ಎಲ್ಲಾ ವ್ಯವಹಾರದ ಪರಿಗ್ರಹಗಳನ್ನು ಕಟ್ಟಿಕೊಳ್ಳಲು ಒಂದೇ ಸಮನೆ ಹಾತೊರೆಯುತ್ತಿರುವ ಚಾರುಕೀರ್ತಿಯವರು ನಡೆದುಕೊಂಡದ್ದಾದರೂ ಹೇಗೆ? ಹೇಗೆಂದರೆ, ಜೈನಸಮಾಜದಲ್ಲಿ ತಮ್ಮ ನೀತಿ ನಡವಳಿಕೆ ಚಾರಿತ್ರ್ಯಗಳಿಂದಾಗಿ ಪ್ರತಿಷ್ಠಿತ ಹೆಸರು, ಕೀರ್ತಿಗಳಿಸಿರುವ ಶಾಂತರಾಜರನ್ನು ಹೇಗಾದರೂ ಮಾಡಿ ಕಮಿಟಿಯಲ್ಲಿ ಉಳಿಸಿಕೊಂಡು ತಮ್ಮ ಎಲ್ಲಾ ಅವ್ಯವಹಾರಗಳಿಗೂ ಅವರ ಬೆಂಬಲ ಪಡೆಯಲು ಚಾರುಕೀರ್ತಿಯವರು ಬಹಳವಾಗಿ ಪ್ರಯತ್ನಿಸಿದರು

ಇದನ್ನು ಸಾಧಿಸುವ ಆಕಾಂಕ್ಷೆಯಿಂದ ಚಾರುಕೀರ್ತಿಯವರು ಶಾಂತರಾಜರಿಗೆ ತಾವು ಎರಡು ಪತ್ರಗಳನ್ನು ಬರೆದ ದಿನವೇ ಅಂದರೆ ತಾ॥ 14-8-79 ರಂದೇ ಮತ್ತೊಂದು ಮೂರನೇ ಪತ್ರವನ್ನೂ ಸಹ ಬರೆದಿದ್ದರು

ಈ ಪತ್ರವನ್ನು ಕಮಿಟಿಯ ಛೇರ್ಮನ್ನರ ಸ್ಥಾನದಿಂದ ಬರೆಯದೆ ಶ್ರೀ ಜೈನಮಠದ ಸ್ವಾಮೀಜಿಸ್ಥಾನದಿಂದ ಬರೆದರು ಬರೆಯುವಾಗ ಪತ್ರಕ್ಕೆ ' ತೀರಾ ವೈಯಕ್ತಿಕ ' **(purely personal)** ಎಂಬ ಅಂಕಿತಹಾಕಿದರು ಚಾರುಕೀರ್ತಿಸ್ವಾಮೀಜಿಯವರು ಯಾವಾಗ ದೀಕ್ಷೆ ತೆಗೆದುಕೊಂಡು ತಮ್ಮ ಪೂರ್ವಾಶ್ರಮದ ಹೆಸರಾದ ರತ್ನವರ್ಮ ಇಂದ್ರ ಎಂಬ ಹೆಸರನ್ನು ಕೈಬಿಟ್ಟರೋ ಆಗಲೇ ಅವರ ವೈಯಕ್ತಿಕ ಆವರಣ ಭಂಗವಾಗಿ ಅವರು ಸಾರ್ವಜನಿಕ ವ್ಯಕ್ತಿಯಾಗಿ ಮಾರ್ಪಟ್ಟರು ಅವರ ಜೀವನ ತೆರೆದಿಟ್ಟ ಪುಸ್ತಕವಾಯಿತು ಇದರಿಂದಾಗಿ ಅವರ ತೀರಾ ವೈಯಕ್ತಿಕ ವ್ಯವಹಾರವೂ ದೀಕ್ಷೆವಹಿಸಿದ ದಿನವೇ ಕಡಿದುಹೋದಂತಾಯಿತು ಆದ್ದರಿಂದ ಸ್ವಾಮೀಜಿಯವರ ಸಂಪೂರ್ಣ ಸಾರ್ವಜನಿಕ ವ್ಯವಹಾರಗಳಲ್ಲಿ ತೀರಾ ವೈಯಕ್ತಿಕ ' ಪದಕ್ಕೆ ಅರ್ಥವೇ ಇಲ್ಲದಿರುವುದರಿಂದ, ಚಾರುಕೀರ್ತಿಸ್ವಾಮೀಜಿಯವರ ತೀರಾ ವೈಯಕ್ತಿಕ ಪತ್ರವನ್ನು ಇಲ್ಲಿ ಬಹಿರಂಗಪಡಿಸುತ್ತಿದ್ದೇನೆ

ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ

' ತೀರಾ ವೈಯಕ್ತಿಕ '

ಶ್ರೀ ಜೈನ ಮಠ
ಶ್ರವಣಬೆಳಗೊಳ 573135
ಕರ್ನಾಟಕ

ತಾ॥ 14-8-1979
ಎಸ್ ಜೆ ಎಂ 356/78-9

ಶ್ರೀ ಎಸ್ ಪಿ ಶಾಂತರಾಜರಿಗೆ
' ಪದ್ಮಕೃಪ '
50, ರಮಾವಿಲಾಸ ರಸ್ತೆ
ಮೈಸೂರು-1

ಧರ್ಮಬಂಧು,

ಇತ್ತೀಚೆಗೆ ನೀವು ಶ್ರೀ ವಿಶ್ವಸೇನರೊಂದಿಗೆ ಸಂಭಾಷಿಸಿ ರಥೋತ್ಸವ ಮತ್ತು ಸಮಾರಂಭಗಳ ಮೇಲೆ ಮಾಡಿದ ವೆಚ್ಚಗಳ ಬಗ್ಗೆ ಆಕ್ಷೇಪಣೆಗಳನ್ನೆತ್ತುವುದಾಗಿಯೂ, ಇಲ್ಲವೆ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸುವುದಾಗಿಯೂ, ಮತ್ತು ಶ್ರವಣಬೆಳಗೊಳದಲ್ಲಿನ ನಿಮ್ಮ ಗೃಹವನ್ನು ಮಾರುವುದಾಗಿಯೂ ಇಚ್ಛಿಸಿದ್ದೀರಿ ತಕ್ಷಣ ' ನೀವು ಆಕ್ಷೇಪಣೆಗಳನ್ನು ಎತ್ತಬಹುದು ಆದರೆ ರಾಜೀನಾಮೆ ಸಲ್ಲಿಸುವುದು ಬೇಡವೆಂದು ನಾವು ಫೋನ್ ಮೂಲಕ ನಿಮಗೆ ತಿಳಿಸಿದ್ದೆವು ಇದಕ್ಕೆ ಅನುಗುಣವಾಗಿ ನೀವು ಆಕ್ಷೇಪಣೆಗಳನ್ನೆತ್ತಿದ್ದೀರಿ ಇದಕ್ಕೆ ಈಗಾಗಲೇ ನಾವು ಉತ್ತರ ನೀಡಿದ್ದೇವೆ

ಈ ಕ್ಷೇತ್ರದ ಸರ್ವಾಂಗೀಣ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ನಾವು ನಿಮಗೆ ಈ ವೈಯಕ್ತಿಕ ಪತ್ರವನ್ನು ಬರೆಯಲು ಇಚ್ಛಿಸುತ್ತೇವೆ

ನಾವು 1969 ರಿಂದಲೂ ಶ್ರೀ ಜೈನಮಠದ ಸ್ವಾಮೀಜಿಯಾಗಿ ಇಲ್ಲಿದ್ದೇವೆ ಅಂದಿನಿಂದಲೂ ನಾವು ನಿಮ್ಮ ಸಹವಾಸ ಮತ್ತು ಸಂಪರ್ಕದ ಸಂತೋಷವನ್ನು ಹೊಂದಿದ್ದೆವು ನೀವು ನಿಮ್ಮ ಅಮೂಲ್ಯವಾದ ಸೇವೆಗಳನ್ನು ಸಲ್ಲಿಸಿದ್ದೀರಿ ನೀವು ಅನೇಕ ವಿಧಗಳಲ್ಲಿ ನಮಗೆ ಸಹಾಯ ಮಾಡಿದ್ದೀರಿ ಆದ್ದರಿಂದ ನಾವು ಈ ಕ್ಷೇತ್ರವನ್ನು ಈಗಿರುವ ಮಟ್ಟಕ್ಕೆ ಅಭಿವೃದ್ಧಿಪಡಿಸಲು ಸಮರ್ಥರಾಗಿದ್ದೇವೆ. ಇದು ಈ ಕ್ಷೇತ್ರಕ್ಕಾಗಿ ನೀವು ಮಾಡಿರುವ ಸೇವೆಯ ಪ್ರಶಂಸೆಯಲ್ಲ ನೇರವಾದ ಸತ್ಯ ನೀವು ಈ ಮಠದ ಶ್ರೇಷ್ಠರಾದ ಶಿಷ್ಯರಾಗಿದ್ದು ನಿಮ್ಮ ಕರ್ತವ್ಯಗಳನ್ನು ಸಮರ್ಥವಾಗಿ ನಿರ್ವಹಿಸಿದ್ದೀರಿ ಭವಿಷ್ಯದಲ್ಲಿ ನಾವು ಅಸಂಖ್ಯಾತ ಅಭಿವೃದ್ಧಿ ಕಾರ್ಯಗಳನ್ನು ಯೋಜಿಸಿದ್ದೇವೆ ನೀವು ನಮ್ಮ ಹಿಂದಿನ ಚಟುವಟಿಕೆಗಳಲ್ಲಿ ಸಹಕರಿಸಿದ್ದೀರಿ ಮತ್ತು ಈಗಲೂ ಸಹ ನೀವು ನಮ್ಮ ಚಟುವಟಿಕೆಗಳಲ್ಲಿ ಸಹಕರಿಸುತ್ತಿದ್ದೀರಿ ಭವಿಷ್ಯದಲ್ಲೂ ಇದೇರೀತಿಯ ಮನೋಧರ್ಮವನ್ನು ನಿರೀಕ್ಷಿಸುತ್ತೇವೆ ಕೇವಲ ಸಹಕಾರ ಮತ್ತು ಪರಸ್ಪರ ಸದ್ಭಾವನೆಗಳು ಮಾತ್ರ ಒಂದು ಯಶಸ್ವಿ ಸಂಘಟನೆಗೆ ಕೊಡುಗೆಯಾಗಬಲ್ಲುವು ಎಂದು ನಾವು ಭಾವಿಸುತ್ತೇವೆ

ರಥೋತ್ಸವದ ಕಾರ್ಯಗಳು ಧಾಮಸಂಪ್ರೋಕ್ಷಣೆ, ಶ್ರೀ ಮಹಾವೀರ ಕುಂದಕುಂದ ಭವನದ ಉದ್ಘಾಟನೆ ಮತ್ತು ಚಂದ್ರಪ್ರಭತೀರ್ಥಂಕರರ ಪ್ರತಿಷ್ಠಾಪನಾ ಕಾರ್ಯಗಳನ್ನು ರಥೋತ್ಸವದ ಸಮಯದಲ್ಲಿ ನಡೆಸಲಾಯಿತೆಂದು ನೀವು ಚನ್ನಾಗಿ ಅರಿತಿದ್ದೀರಿ ಜೀರ್ಣೋದ್ಧಾರಗೊಂಡ ದೇವಾಲಯಗಳ ಧಾಮಸಂಪ್ರೋಕ್ಷಣಾ ಪೂಜೆಗಳನ್ನು ಒಟ್ಟಿಗೆ ನಡೆಸಬೇಕೆಂದು, ಮತ್ತು ಕರ್ನಾಟಕದ ಮಾನ್ಯ ರಾಜ್ಯಪಾಲರನ್ನು ಮಹಾವೀರ ಕುಂದಕುಂದಭವನದ ಉದ್ಘಾಟನಾ ಸಮಾರಂಭಕ್ಕೆ ಆಹ್ವಾನಿಸಬೇಕೆಂದು ಕಮಿಟಿಯು ಈ ಮೊದಲೇ ಒಪ್ಪಿತ್ತು ಈ ಕಾರ್ಯಗಳು ನಡೆಯುವುದಕ್ಕೆ ಮುಂಚೆಯೂ ನೀವು ಇಲ್ಲಿ ಇದ್ದಿರಿ, ಮತ್ತು ಕಡೆಯ ಕಾರ್ಯಕ್ರಮಗಳನ್ನೊಳಗೊಂಡಂತೆ ನಮ್ಮ ಎಲ್ಲಾ ಸಮಾರಂಭಗಳಲ್ಲೂ ನೀವು ಭಾಗವಹಿಸಿದ್ದಿರಿ ಈ ಅವಿಶ್ರಾಂತ ಸಮಾರಂಭಗಳನ್ನು ನಡೆಸುವುದಕ್ಕಾಗಿ ಕಮಿಟಿ, ಶ್ರೀ ಜೈನಮಠ, ಮತ್ತು ಸಮಾಜ, ಅವುಗಳನ್ನು ಬಹು ಯಶಸ್ವಿಗೊಳಿಸುವುದಕ್ಕಾಗಿ ಒಟ್ಟಾಗಿ ಕೆಲಸಮಾಡಿದುವು ಇಷ್ಟೆಲ್ಲಾ ಪ್ರಯತ್ನಗಳಾದರೂ ಸಹ ಅವುಗಳು ನೂರಕ್ಕೆ ನೂರರಷ್ಟು ಯಶಸ್ವಿಯಾದವೆಂದು ನಾವು ಹೇಳುವುದಕ್ಕೆ ಸಾಧ್ಯವಿಲ್ಲ ಆದರೆ ಈ ರೀತಿಯ ದೊಡ್ಡ ಮತ್ತು ಶೀಘ್ರವಾಗಿ ಸಂಯೋಜಿಸಲಾದ ಸಮಾರಂಭಗಳನ್ನು ನಡೆಸುವಲ್ಲಿ ಕೆಲವು ನ್ಯೂನತೆಗಳಿದ್ದಿರಬಹುದು ಈ ಕ್ಷೇತ್ರದ ಉನ್ನತ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ನಾವು ಇವುಗಳನ್ನು ಕಡೆಗಣಿಸಬೇಕಾಗುತ್ತದೆ.

ಈ ಸಮಾರಂಭಗಳು ಈ ಕ್ಷೇತ್ರಕ್ಕೆ ಏನು ಒಳಿತನ್ನು ಮಾಡಿವೆ ಮತ್ತು ಜನರಲ್ಲಿ ಹೇಗೆ ಧಾರ್ಮಿಕ ಮನೋಭಾವನೆಯನ್ನು ಮೂಡಿಸಿವೆ ಎಂಬುದನ್ನು ಮಾತ್ರ ಯೋಚಿಸ ಬೇಕಾಗುತ್ತದೆ. ಹಣ ಎಷ್ಟು ಖರ್ಚಾಗಿದೆ ಎಂಬ ಆರ್ಥಿಕ ಅಳತೆಗೋಲು ಮಾತ್ರ ಇಂತಹ ಸಂದರ್ಭಗಳಲ್ಲಿ ಯೋಚಿಸಬೇಕಾದ ಮುಖ್ಯಾಂಶವಲ್ಲ ಏಕೆ ಹೊರಗಿನಿಂದ ಬಂದ ವಾದ್ಯಗೋಷ್ಠಿಯವರು ಮುಂತಾದ ನಿಮ್ಮ ಹಲವಾರು ಹೇಳಿಕೆಗಳು ನಮ್ಮಲ್ಲಿ ವಿಷಾಧದ ಭಾವನೆಯನ್ನು ಉಂಟುಮಾಡಿವೆ

ಇಂತಹ ಹಲವಾರು ಸಮಾರಂಭಗಳನ್ನು ಮಠ ಇಲ್ಲವೆ ಕಮಿಟಿಯು ಏರ್ಪಡಿಸಿ ನೆರವೇರಿಸಿದ್ದನ್ನು, ಇದರಲ್ಲಿ ನೀವು ಪ್ರಧಾನ ಪಾತ್ರವನ್ನು ವಹಿಸಿ ಸಮಾರಂಭಗಳನ್ನು ಯಶಸ್ವಿಗೊಳಿಸುವುದಕ್ಕೋಸ್ಕರ ಸೇವೆ ಸಲ್ಲಿಸಿದ್ದನ್ನು, ಪ್ರತಿಯೊಬ್ಬರೂ ಇವುಗಳಿಂದ ಸಂತೋಷಪಟ್ಟು ಸಂತೃಪ್ತಿ ಮತ್ತು ಹರ್ಷದಿಂದ ಹೊಗಳಿದ್ದನ್ನು ಬಲ್ಲಿರಿ ಇಷ್ಟೆಲ್ಲಾ ಇದ್ದರೂ ಸಮಾರಂಭಗಳಿಗಾಗಿ ಜನರನ್ನಾಕರ್ಷಿಸಲು ಮತ್ತು ಯಶಸ್ವಿಯಾಗಲು ಮಾಡಿದ ಕೆಲವು ವೆಚ್ಚಗಳನ್ನು ನೀವು ಅನಾವಶ್ಯಕ ಎಂದು ಭಾವಿಸಿರುವುದು ನಮಗೆ ಆಶ್ಚರ್ಯ ವನ್ನುಂಟುಮಾಡಿದೆ

ಮುನಿ ವಿದ್ಯಾನಂದಜಿ ಮಹಾರಾಜರ ದಕ್ಷಿಣ ಪಥವಿಹಾರ ಸಮಿತಿಗೆ 25,000 ರೂಪಾಯಿಗಳನ್ನು ನೀಡಬೇಕಾಗಿರುವ ವಿಚಾರವನ್ನೂ ಸಹ ವಿವಾದಾತ್ಮಕ ವಿವರಣೆ ಗಳೊಂದಿಗೆ ಹರಡಲಾಗಿದೆ ಇದುವರೆಗೂ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಸಭೆಗಳಿಗೆ ಹಾಜರಾಗದಿದ್ದ ಇಂದೂರಿನ ಶ್ರೀ ರಾಜಕುಮಾರ್ ಸಿಂಗ್‌ರವರು ಈ ಬಾರಿ ಹಾಜರಿದ್ದರು, ಮತ್ತು ಈ ವಿಷಯವನ್ನು ಅವರಿಗೆ ಮನದಟ್ಟು ಮಾಡಲು ನಾವು ಕಠಿಣಶ್ರಮವನ್ನು ತೆಗೆದುಕೊಳ್ಳಬೇಕಾಯಿತು ಕಮಿಟಿಯ ಎಲ್ಲಾ ಸದಸ್ಯರು ಮಹಾಮಸ್ತಕಾಭಿಷೇಕ ಆಚರಣೆಯ ಬಾಬ್ತಿನಲ್ಲಿ ಈ ವೆಚ್ಚದ ಬಾಬ್ತನ್ನು ಸೇರಿಸುವುದಕ್ಕೆ ಅನುಕೂಲಕರರಾಗಿದ್ದರು ಮತ್ತು ಇಂತಹ ಸಂದರ್ಭಗಳಲ್ಲಿ ವಿಹಾರ ಮತ್ತು ಸ್ವಾಗತ ಗಳನ್ನು ಏರ್ಪಡಿಸುವುದು ಕಮಿಟಿಯ ಹೊಣೆ ಎಂದು ಅಭಿಪ್ರಾಯಪಟ್ಟರು ತೀರ ಖೇದಕರವಾದ ಮತ್ತು ಅವಮಾನಕರವಾದ ವಿಚಾರವೆಂದರೆ ಈ ವಿಷಯವು ಬೀದಿಯ ಪಾಲಾಯಿತಲ್ಲ ಎಂಬುದು ಮುನಿಶ್ರೀಜಿಯವರ ಮಂಗಲ ವಿಹಾರ ಮತ್ತು ಸ್ವಾಗತ ಕ್ಕಾಗಿ ಹಣ ವೆಚ್ಚಮಾಡುವುದನ್ನು ನೀವು ವಿರೋಧಿಸುತ್ತಿಲ್ಲ ಎಂಬುದು ನಮಗೆ ತಿಳಿದಿದೆ ಆದರೆ ಸ್ವಾಗತ ಸಮಿತಿಗೆ ಎಸ್,ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ನಿಧಿಯಿಂದ ಹಣ ಮಂಜೂರು ಮಾಡುವುದಕ್ಕೆ ನೀವು ವಿರೋಧಿ

ಈ ಹಣವನ್ನು ಮಹಾಮಸ್ತಕಾಭಿಷೇಕ ಆಚರಣೆಯ ಕಮಿಟಿಯಿಂದ ಇದಕ್ಕೆ ಉಪ ನಿಯಮದ ಒಪ್ಪಿಗೆಯಿಲ್ಲದಿದ್ದರೂ ಸಹ ಮಂಜೂರು ಮಾಡಲಾಗಿದೆಯೆಂದು ನಿಮಗೆ

It has been already made clear to you that this money is sanctioned by the Mahamastakabhisheka Celebration Committee, though the by-law does not permit the same, we may request the Government to amend the by-law to facilitate this issue, which fact we have already cleareo to you in person. Though you have instructed the Secretary to place this issue before the Committee for reconsideration. Accordingly he obayed your suggestion.

Now we are feeling that you have some dissatisfaction regarding the activities of the Kshetra. Therefore as a precautionery measure it would be better to consult people like you(though it is not necessary) before doing any such functions. When this is so, we as the head of the Nath and Kshetra must also take note of the feelings of the disciples like you. Therefore we are thinking of keeping ourselves quiet from the active part as we desire that the desciples should not be dissatisfied. However we would continue to discharge of our duties as Swamiji normally.

We express darely that we have accepted and implemented all your suggestions so far. We would have done better progress if better staff were arranged. However with the present staff we have done the things to the best possible extents. We do not want to write more to you in this behalf as you know things better.

With Blessings,

(Charukeerty Bhattarak Swamiji).

Bvk/-

ಚಾರುಕೀರ್ತಿಸ್ವಾಮಿಗಳು ತಾ|| 14-8-79 ರಂದು ಬರೆದ " ತೀರಾ ವೈಯಕ್ತಿಕ ಪತ್ರ"ದ ಕಡೆಯ ಪುಟ. ಸ್ವಾಮಿಗಳು ಇದರಲ್ಲಿ, ವಿದ್ಯಾನಂದರ ಸ್ವಾಗತ ಸಮಿತಿಗೆ 25,000 ರೂಪಾಯಿಗಳ ಹಣ ಮಂಜೂರು ಮಾಡುವ ನಿರ್ಣಯ ಅಕ್ರಮ ಎಂದು ಸ್ವತಃ ಒಪ್ಪಿಕೊಂಡಿದ್ದಾರೆ. ಈ ಪತ್ರ ಚಾರುಕೀರ್ತಿಗಳ ದುಷ್ಟಹಠಸಾಧನೆಯ ಪ್ರತೀಕ

ಈಗಾಗಲೇ ಸ್ಪಷ್ಟಪಡಿಸಿಯಾಗಿದೆ ಈ ವಿಷಯದಲ್ಲಿ ಅನುಕೂಲವಾಗುವಂತೆ ಉಪ ನಿಯಮವನ್ನು ಮಾರ್ಪಾಟು ಮಾಡಲು ನಾವು ಸರಕಾರವನ್ನು ಕೋರಬಹುದೆಂಬ ವಿಷಯವನ್ನು ನಿಮಗೆ ಮುಖತಃ ಸ್ಪಷ್ಟಪಡಿಸಲಾಗಿದೆ ಆದರೂ ಸಹ ಪುನರಾಲೋಚಿಸುವುದಕ್ಕಾಗಿ ಈ ವಿಷಯವನ್ನು ಕಮಿಟಿಯ ಮುಂದೆ ಇಡಲು ನೀವು ಕಾರ್ಯದರ್ಶಿಯವರಿಗೆ ತಿಳಿಸಿದ್ದೀರಿ ಅದರಂತೆ ನಿಮ್ಮ ಸಲಹೆಗನುಗುಣವಾಗಿ ಅವರು ನಡೆದುಕೊಂಡಿದ್ದಾರೆ

ನೀವು ಕ್ಷೇತ್ರದ ಚಟುವಟಿಕೆಗಳ ಬಗ್ಗೆ ಸ್ವಲ್ಪ ಅತೃಪ್ತಿಯನ್ನು ಹೊಂದಿದ್ದೀರಿ ಎಂದು ನಾವು ಭಾವಿಸಿದ್ದೇವೆ ಆದ್ದರಿಂದ ಮುನ್ನೆಚ್ಚರಿಕೆಯ ಕ್ರಮವಾಗಿ ಇಂತಹ ಯಾವುದೇ ಸಮಾರಂಭಗಳನ್ನು ಮಾಡುವುದಕ್ಕೆ ಮುಂಚೆ, ನಿಮ್ಮಂತಹ ಜನರೊಂದಿಗೆ ಅದು ಅನಗತ್ಯವಾದರೂ ಸಹ ಸಮಾಲೋಚಿಸುವುದು ಉತ್ತಮ ಇದು ಹೀಗಿರುವುದರಿಂದ ನಾವು ಮಠದ ಮತ್ತು ಕ್ಷೇತ್ರದ ಮುಖ್ಯಸ್ಥರಾಗಿ ನಿಮ್ಮಂತಹ ಶಿಷ್ಯರ ಭಾವನೆಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ ಆದ್ದರಿಂದ ಶಿಷ್ಯರು ಅತೃಪ್ತಿ ಹೊಂದಬಾರದು ಎಂದು ನಾವು ಆಶಿಸುವುದರಿಂದ, ನಾವು ನಮ್ಮನ್ನು ಸಕ್ರಿಯ ಪಾತ್ರದಿಂದ ದೂರವಾಗಿರಿಸಿಕೊಳ್ಳಲು ಯೋಚಿಸುತ್ತಿದ್ದೇವೆ ಆದರೆ ನಾವು ಸ್ವಾಮಿಜಿಯಾಗಿ ನಮ್ಮ ದೈನಂದಿನ ಮಾಮೂಲು ಕರ್ತವ್ಯಗಳನ್ನು ನಿರ್ವಹಿಸುವುದನ್ನು ಮುಂದುವರೆಸುತ್ತೇವೆ

ಇದುವರೆಗೂ ನಾವು ನಿಮ್ಮ ಎಲ್ಲಾ ಸಲಹೆಗಳನ್ನು ಒಪ್ಪಿಕೊಂಡಿದ್ದೇವೆ ಮತ್ತು ಕಾರ್ಯಗತಗೊಳಿಸಿದ್ದೇವೆ, ಎಂದು ಧೈರ್ಯವಾಗಿ ಹೇಳುತ್ತೇವೆ ಇನ್ನೂ ಒಳ್ಳೆಯ ಸಿಬ್ಬಂದಿಯ ಏರ್ಪಾಟಾಗಿದ್ದರೆ, ನಾವು ಇನ್ನೂ ಹೆಚ್ಚಿನ ಪ್ರಗತಿಯನ್ನು ಮಾಡಬಹುದಿತ್ತು ಆದರೆ ಈಗಿರುವ ಸಿಬ್ಬಂದಿಯಿಂದಲೇ ನಾವು ಅತ್ಯಂತ ಹೆಚ್ಚು ಸಾಧ್ಯವಾದ ಮಟ್ಟಿಗೂ ಕೆಲಸಗಳನ್ನು ಮಾಡಿದ್ದೇವೆ ನೀವು ವಿಚಾರಗಳನ್ನು ಚನ್ನಾಗಿ ತಿಳಿದಿರುವುದರಿಂದ ನಾವು ಈ ವಿಚಾರದಲ್ಲಿ ನಿಮಗೆ ಹೆಚ್ಚಿಗೆ ಬರೆಯಬೇಕಾಗಿಲ್ಲ

ಆಶೀರ್ವಾದಗಳೊಂದಿಗೆ

(ಸಹಿ)

ಚಾರುಕೀರ್ತಿ ಭಟ್ಟಾರಕ ಸ್ವಾಮಿಜಿ

ಈ ಪತ್ರದಲ್ಲಿ ಮುಖ್ಯವಾದ ಭಾಗವೆಂದರೆ, ಚಾರುಕೀರ್ತಿಯವರು ವಿದ್ಯಾನಂದರ ವಂತಿಗೆಯ ವಿಚಾರವನ್ನು ಪ್ರಸ್ತಾಪಿಸಿರುವುದು ಇದರಲ್ಲಿ ಚಾರುಕೀರ್ತಿಯವರು

**" ಈ ಹಣವನ್ನು ಮಹಾಮಸ್ತಕಾಭಿಷೇಕ ಆಚರಣೆಯ ಕಮಿಟಿಯಿಂದ ಇದಕ್ಕೆ ಉಪನಿಯಮದ ಒಪ್ಪಿಗೆಯಿಲ್ಲದಿದ್ದರೂ ಸಹ ಮಂಜೂರು ಮಾಡಲಾಗಿದೆಯೆಂದು ನಿಮಗೆ ಈಗಾಗಲೇ ಸ್ಪಷ್ಟಪಡಿಸಿಯಾಗಿದೆ. ಈ ವಿಷಯದಲ್ಲಿ ಅನುಕೂಲವಾಗುವಂತೆ ಉಪನಿಯಮನ್ನು ಮಾರ್ಪಾಟು ಮಾಡಲು ನಾವು ಸರಕಾರವನ್ನು ಕೋರಬಹುದೆಂಬ ವಿಷಯವನ್ನು ನಿಮಗೆ ಮುಖತಃ ಸ್ಪಷ್ಟಪಡಿಸಲಾಗಿದೆ."** ಎಂದು ಸ್ಪಷ್ಟವಾಗಿ ಬರೆದು ವಿದ್ಯಾನಂದರ ಸ್ವಾಗತಕ್ಕಾಗಿ 25,000 ರೂಪಾಯಿಗಳ ವಂತಿಗೆಯನ್ನು ಮಂಜೂರು ಮಾಡಿರುವುದು ನಿಯಮವಿರುದ್ಧವಾದ ಅಕ್ರಮ ಕಾರ್ಯ ಎಂದು ಅವರು ಸ್ವತಃ ಒಪ್ಪಿಕೊಂಡಿದ್ದಾರೆ ಆದರೆ ಆ ನಿಯಮಭ್ರಷ್ಟವಾದ ಅಕ್ರಮ ಮಂಜೂರಾತಿಯನ್ನು ಅವರು ಕೈಬಿಡಲು ಯಾವ ಕಾರಣಕ್ಕೂ ಸಿದ್ಧರಿಲ್ಲ ! ಕಮಿಟಿಯು ಮಾಡಿರುವ, ನಿಯಮಗಳ ಉಲ್ಲಂಘನೆ ಪ್ರಕರಣವನ್ನು ಕ್ರಮಗೊಳಿಸುವುದಕ್ಕಾಗಿ ಕಮಿಟಿಯು ನಿಯಮಗಳನ್ನೇ ತಿದ್ದುವಂತೆ ಸರ್ಕಾರವನ್ನು ಮುಂದೆ ಕೇಳೋಣ ಎಂಬ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರ ಮಾತುಗಳು ಅವರ ನಿಜವಾದ ಬಣ್ಣವನ್ನು ಬಯಲು ಮಾಡುತ್ತವೆ

ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವುದು ಅಕ್ರಮವಾಗುತ್ತದೆ ಎಂದು ಒಂದೇ ಸಮನೆ ಚಂದ್ರಯ್ಯನವರೂ, ಶಾಂತರಾಜರೂ ಹೇಳುತ್ತಾ ಬಂದಿದ್ದನ್ನು ಚಾರುಕೀರ್ತಿಯವರೂ ಸಹ ಪತ್ರ ಬರೆಯುವುದರ ಮೂಲಕ ಸರಿ ಎಂದು ಒಪ್ಪಿಕೊಳ್ಳುತ್ತಾರೆ ಆದರೆ ವಿಚಿತ್ರವೆಂದರೆ ಅಕ್ರಮ ಮಂಜೂರಾತಿಗೆ ಬೆಂಬಲ ಕೊಡಿ ಎಂದು ಅದೇ ಸಮಯದಲ್ಲಿ ಒತ್ತಾಯವನ್ನೂ ಮಾಡುತ್ತಾರೆ ! ತತ್ವನಿಷ್ಠರಾದ ಶಾಂತರಾಜರನ್ನು ತತ್ವಭ್ರಷ್ಟರಾಗಿ ಎಂಬಂತೆ ಪತ್ರವನ್ನೂ ಬರೆದು ಅವರ ಚಾರಿತ್ರ್ಯಕ್ಕೇ ಶೂಲ ಹಾಕಲು ಪ್ರಯತ್ನಿಸುತ್ತಾರೆ ! ಅವರ ನಿಯಮ ಪಾಲನೆಯ ಧರ್ಮಕ್ಕೆ ಚ್ಯುತಿಯುಂಟುಮಾಡಲು ಹರಹಿಡಿದು ಪ್ರಯತ್ನಿಸುತ್ತಾರೆ ! ಕಾನೂನಿಗೆ ವಿರುದ್ಧವಾಗಿ ಮೊದಲು ನಡೆದುಬಿಡೋಣ, ನಂತರ ಕಾನೂನನ್ನೆ ತಿದ್ದುಪಡಿ ಮಾಡಿ ಎಂದು ಸರ್ಕಾರಕ್ಕೆ ಬರೆಯೋಣ ಎಂಬರ್ಥದ ಚಾರುಕೀರ್ತಿಸ್ವಾಮೀಜಿಯವರ ಮಾತುಗಳು " ನಮಗೆ ಹಣವನ್ನೊಪ್ಪಿಸದ ಈ ಮನುಷ್ಯನನ್ನು ಮೊದಲು ಸಾಯಿಸಿ ಹಣ ಕಸಿದುಕೊಳ್ಳೋಣ , ನಂತರ ಕೇಳಿದ ಕೂಡಲೆ ಹಣ ಕೊಡುವಂತಹ ಮನುಷ್ಯರು ನಮಗೆ ಸಿಗಲಿ ಎಂದು ದೇವರನ್ನು ಪ್ರಾರ್ಥಿಸಿಕೊಳ್ಳೋಣ " ಎಂಬಂತಹ ಕಳ್ಳಕಾಕರ ಮಾತುಗಳಂತೆ ಇವೆ !

ವಿದ್ಯಾನಂದರ ಸ್ವಾಗತ ಸಮಾರಂಭಗಳಿಗಾಗಿ ಹಣ

ಶಾಂತರಾಜರು ಸ್ವಾಮೀಜಿಯವರಿಗೆ ಒಂದು ಉತ್ತಮ ಸಲಹೆ ನೀಡಿದ್ದೂ ಉಂಟು "ಕಮಿಟಿಯಿಂದಲೇ ಹಣವನ್ನು ತೆಗೆದುಕೊಳ್ಳಬೇಕೆಂಬ ಛಲವಾದರೂ ಏತಕ್ಕೆ? ಈ

ಗಾಗಲೇ ರಚಿಸಲಾಗಿರುವ ಸ್ವಾಗತ ಸಮಿತಿಯ ಮೂಲಕ ಸಾರ್ವಜನಿಕರಿಂದ ಎಷ್ಟು ಬೇಕಾದರೂ ಹಣವನ್ನು ಸಂಗ್ರಹಿಸಬಹುದಲ್ಲವೆ ?" ಈ ಸಲಹೆ ಚಾರುಕೀರ್ತಿಯವರಿಗೆ ಪಥ್ಯವಾಗಲಿಲ್ಲ ! ಅವರು ತಮ್ಮ ಕಾನೂನುಭಂಗ ಮಾರ್ಗವನ್ನೇ ಪಟ್ಟು ಹಿಡಿದು ಕುಳಿತರು ಸ್ವರ್ಗದ ಹಾದಿಯನ್ನು ತೋರಿದರೂ ನರಕದ ಹಾದಿಯಲ್ಲೇ ಮುನ್ನು ಗ್ಗುವ ಈ ಮತಿಹೀನ ಮತ್ತು ಹೃದಯಹೀನ ಹಠ, ಧರ್ಮಪೀಠದಲ್ಲಿ ವಿರಾಜಮಾನ ರಾಗಿರುವ ಸ್ವಾಮಿಜಿಯವರಿಗೆ ಏತಕ್ಕಾದರೂ ಬಂತು?

## ಹಿರಿಮೆಯ ಪ್ರತೀಕ :

ಶಾಂತರಾಜರಿಗೆ ಚಾರುಕೀರ್ತಿಸ್ವಾಮಿಜಿಯವರಿಂದ ಒಂದೇ ದಿನದಲ್ಲಿ ಬಂದ ಮೂರು ಪತ್ರಗಳು, ಸ್ವಾಮಿಜಿಯವರು ಹೇಗೆ ಕಮಿಟಿಯ ಎಲ್ಲಾ ವ್ಯವಹಾರಗಳನ್ನು ಕೈವಶ ಮಾಡಿಕೊಂಡು ಆಡಳಿತ ನಡೆಸುವ ಸಮಗ್ರ ಸೂತ್ರದಾರರಾಗಿದ್ದಾರೆ ಎಂಬಂಶ ವನ್ನು ಸಂದೇಹಕ್ಕೆ ಅವಕಾಶವಿಲ್ಲದಂತೆ ಸ್ಪಷ್ಟಪಡಿಸಿದವು ತೀರಾ ವೈಯಕ್ತಿಕ ಪತ್ರ ದಲ್ಲಿದ್ದ ತಮ್ಮ ಮುಖಸ್ತುತಿಯ ಮಾತುಗಳ ಬಲೆಗೆ ಶಾಂತರಾಜರು ಬೀಳಲಿಲ್ಲ ! ಪ್ರಶಂ ಸೆಯ ಮಾತುಗಳಿಗೆ ಮರುಳಾಗಲಿಲ್ಲ ! ಸ್ವಾಮಿಜಿಯವರ ಮೂರು ಪತ್ರಗಳ ಶಾಂತ ರಾಜರ ನಿಯಮನಿಷ್ಠೆ ಮತ್ತು ಆತ್ಮಸಾಕ್ಷಿಯನ್ನು ತುಸಮಾತ್ರವೂ ಕದಲಿಸಲು ಸಮರ್ಥ- ವಾಗಲಿಲ್ಲ !

ಸ್ವಾಮಿಜಿಯವರ ಪತ್ರಗಳ ಔಚಿತ್ಯ ಹಾಗೂ ಅವರು ಕೊಡುತ್ತಿರುವ ವಿವರಣೆ ಗಳ ಸಿಂಧುತ್ವ, ಅದರ ಲೋಪದೋಷಗಳು ಮುಂತಾದ ಅಂಶಗಳ ಬಗೆಗೆ ಟೀಕಿಸುವ ಮುಕ್ತ ಅವಕಾಶ ಶಾಂತರಾಜರಿಗಿದ್ದರೂ, ಈ ವಿಚಾರದಲ್ಲಿ ಅವರು ಔದಾರ್ಯ ತೋರಿ ದರು ಸ್ವಾಮಿಜಿಯ ಸ್ಥಾನದ ಘನತೆಯನ್ನು ಸ್ವಾಮಿಜಿಯವರೇ ಉಳಿಸಿಕೊಂಡಿರ ದಿದ್ದರೂ, ಆ ಘನತೆಯನ್ನು ಸಂರಕ್ಷಿಸುವ ದೃಷ್ಟಿಯಿಂದ ಆ ಪತ್ರಗಳ ವಿವರವಾದ ಸಮೀಕ್ಷೆಗೆ ಶಾಂತರಾಜರು ಕೈಹಾಕಲಿಲ್ಲ ತಾ॥ 17-8-1979 ರಂದು ಶಾಂತರಾಜರು ಸ್ವಾಮಿಜಿಯವರಿಗೆ ಬರೆದ ಪತ್ರ ಶಾಂತರಾಜರ ಹಿರಿಮೆ ಮತ್ತು ಸದ್ಭಾವನೆಗಳ ಪ್ರತೀಕ ವಾಗಿದೆ ಅದರ ಸಾರಾಂಶ ಮುಂದಿದೆ

"ಪೂಜ್ಯ ಸ್ವಾಮಿಜಿಯವರೆ, ನನ್ನ ತಾ॥ 25-7-1979 ರ ವರದಿಯನ್ನು ನಾನು ಯಾರನ್ನೇ ಆಗಲಿ ಕೆರಳಿಸುವ ಉದ್ದೇಶದಿಂದ ಸಲ್ಲಿಸಿಲ್ಲ ಮತ್ತು ತಮ್ಮಿಂದ ಉತ್ತರ ಪಡೆಯುವ ಉದ್ದೇಶದಿಂದಲೇ ಅದು ಕೂಡಿಲ್ಲ ಈ ವಿಷಯ ತಮ್ಮನ್ನು ಇಷ್ಟು ದೂರದವರೆಗೂ ಸೆಳೆದು ನನ್ನ ವರದಿಗೆ ಉತ್ತರ ಕೊಡುವಂತೆ ಮಾಡಿರುವುದು

ನನ್ನ ಮನಸ್ಸಿಗೆ ನೋವನ್ನುಂಟುಮಾಡಿದೆ ಏಕೆಂದರೆ ಸಂಸ್ಥೆಯ ದಿನನಿತ್ಯದ ಆಡಳಿತ ವ್ಯವಹಾರಗಳಲ್ಲಿ ತಾವು ಯಾವ ರೀತಿಯಲ್ಲೂ ನೇರವಾಗಿ ಜವಾಬ್ದಾರರಲ್ಲ ಎಂಬುದು ನನಗೆ ಸ್ಪಷ್ಟವಾಗಿರುವುದೇ ಇದಕ್ಕೆ ಕಾರಣವಾಗಿದೆ.

ನನ್ನ ವರದಿಯ ಶೋಧನೆಗಳನ್ನು ತಾವೂ ಸಹ ಯಥಾವತ್ತಾಗಿ ಅರ್ಥಮಾಡಿ ಕೊಂಡಿಲ್ಲ ಇನ್ನೊಂದು ಕಡೆ, ಈಗಾಗಲೇ ನಾನು ಪರಿಶೀಲನೆಗಳ ಮೂಲಕ ಎತ್ತಿ ತೋರಿಸಿರುವ, ಈಗಾಗಲೇ ವೆಚ್ಚವಾಗಿರುವ, ಕ್ರಮಬದ್ಧವಲ್ಲದ ವೆಚ್ಚಗಳನ್ನು ಸಮರ್ಥಿಸಿ ಕೊಳ್ಳುವ ಮತ್ತು ಕ್ರಮಪಡಿಸುವ ನಿರಂತರ ಪ್ರಯತ್ನಗಳು ನಡೆಯುತ್ತಿವೆ ತಮ್ಮ ಬಗ್ಗೆ ಇರುವ ನನ್ನ ಗೌರವಗಳಿಂದಾಗಿ ತಮ್ಮ ಪತ್ರದಲ್ಲಿ ಅನೇಕ ವಿಷಯಗಳಿಗೆ ತಾವು ಒದಗಿಸಿರುವ ವಿವರಣೆಗಳನ್ನು ನಾನು ಟೀಕಿಸತೊಡಗುವುದರಲ್ಲಿ ನಿರತನಾಗುವುದಿಲ್ಲ. "

ಶಾಂತರಾಜರು ಈ ಪತ್ರ ಬರೆದ ಮರುದಿವಸವೇ ತಾ॥ 18–8–79 ರಂದು ಚಾರುಕೀರ್ತಿಸ್ವಾಮೀಜಿ ಅದಕ್ಕೆ ಉತ್ತರ ನೀಡಿದರು ಸ್ವಾಮೀಜಿಯವರ ಪತ್ರ ಕ್ರೋಧ ಮತ್ತು ಅವಿವೇಕಗಳ ಮೂರ್ತಸ್ವರೂಪವಾಗಿದೆ ಸಾರಾಂಶ ಹೀಗಿದೆ " ಸಂಸ್ಥೆಯ ದಿನನಿತ್ಯದ ಆಡಳಿತಕ್ಕೆ ನಾವು ಸಂಬಂಧ ಪಡದವರಾದರೆ, ಅಂತಹ ಕೆಲಸ ಕಾರ್ಯಗಳನ್ನು ನಮ್ಮ ಗಮನಕ್ಕೆ ತರುವುದು ಅನಗತ್ಯವಾಗಿತ್ತು ನಿಮ್ಮ ಅಭಿಪ್ರಾಯ ಗಳನ್ನು ನಾವು ಯಥಾವತ್ತಾದ ರೀತಿಯಲ್ಲಿಯೇ ಅರ್ಥಮಾಡಿಕೊಂಡಿದ್ದೇವೆ ಹಿಂದೆಲ್ಲಾ ಕ್ಷೇತ್ರದ ಕಾರ್ಯಗಳಲ್ಲಿ ಪಾಲ್ಗೊಂಡಿದ್ದರೂ ಹಿಂದಿನ ವೆಚ್ಚಗಳ ಬಗ್ಗೆ ಪ್ರಶ್ನಿಸಿರಲಿಲ್ಲ ಈಗ ಸಂಗತಿಗಳೆಲ್ಲಾ ಮುಗಿದ ಮೇಲೆ, ಪರಿಶೀಲನೆಗಳನ್ನೆತ್ತಿರುವ ನಿಮ್ಮ ಕ್ರಮ ನ್ಯಾಯೋಚಿತವಲ್ಲ "

ಸ್ವಾಮೀಜಿಯವರಿಂದ ಮೇಲಿನ ಪತ್ರ ಬಂದ ಮರುದಿವಸವೇ ತಾ॥ 19–8–79 ರಂದು ಇದುವರೆಗೂ ಮೌನವಾಗಿದ್ದ ಕಾರ್ಯದರ್ಶಿಯವರಿಂದಲೂ ಒಂದು ಪತ್ರ ಬಂದಿತು ಶಾಂತರಾಜರ ತಾ॥ 7–8–79 ರ ಪತ್ರಕ್ಕೆ ಇದು ಉತ್ತರವಾಗಿದೆ ಚಾರುಕೀರ್ತಿಯವರಿಂದ ರಕ್ಷಣೆ ಸಿಕ್ಕಿದ್ದರಿಂದಾಗಿ ಈ ಪತ್ರ ನಿಜವಾಗಿಯೂ ಸಡ್ಡು ಹೊಡೆದು ನಿಂತ ರೂಪದಲ್ಲಿಯೇ ಇದೆ ಫೈಲ್ ತೆಗೆದುಕೊಂಡು ಹೋದದ್ದು ನನ್ನ ಗಮನಕ್ಕೆ ಬಂದೇ ಇಲ್ಲ ಎಂದು ಕಾರ್ಯದರ್ಶಿಯವರು ಮತ್ತೆ ತಿಳಿಸಿದ್ದಾರೆ ಫೈಲನ್ನು ತಾವು ನೋಡಿದಾಗ ಕೆಲವು ಸಾಮಾನ್ಯ ತಪ್ಪುಗಳು ಕಂಡುದಾಗಿಯೂ ಅವುಗಳನ್ನು ಅಕೌಂಟಂಟರು ಸಂಬಂಧಪಟ್ಟ ಪಾರ್ಟಿಗಳನ್ನು ಪತ್ತೆಹಚ್ಚಿ ಸರಿಪಡಿಸುತ್ತಾರೆ . ಈ ಧಾಟಿಯಲ್ಲಿ ಪತ್ರ ಸಾಗುತ್ತದೆ

ಈ ಪತ್ರದ ನಂತರ ಮರುದಿನ ತಾ। 20–8–1979 ರಂದು ಕಾರ್ಯದರ್ಶಿಯ

ವರು ಶಾಂತರಾಜರ 25-7-79 ರ ವರದಿಗೆ ತಮ್ಮ ವಿವರಣೆಗಳನ್ನು ಒದಗಿಸಿ ಪತ್ರ ಬರೆದರು ವಾಸ್ತವವಾಗಿ ಕಮಿಟಿಗೆ ವಿವರಣೆ ಕೊಡಬೇಕಾಗಿದ್ದ ಕಾರ್ಯದರ್ಶಿಯವರು ಶಾಂತರಾಜರಿಗೇ ನೇರವಾಗಿ ವಿವರಣೆಯನ್ನು ಕೊಟ್ಟಿರುವುದು ನಿಜಸಂಗತಿ ಬಯಲಾಗದಂತೆ ತಡೆಯುವ ಪ್ರಯತ್ನವಾಗಿದೆ ಈಗಾಗಲೇ ಈ ವಿಚಾರದಲ್ಲಿ ಸ್ವಾಮಿಜಿಯವರು ಹಸ್ತಕ್ಷೇಪಮಾಡಿ ಮೂರುಪತ್ರಗಳನ್ನು ಬ ರೆದಿ ರು ವ ಹಿನ್ನೆಲೆಯಲ್ಲಿ ಮತ್ತು 4-8-79 ರ ಕಮಿಟಿಯ ಸಭೆಯಲ್ಲಿ ಏಪ್ರಿಲ್ 79 ರ ವೆಚ್ಚಗಳು ವಿಚಾರಹೀನವಾಗಿ ಅನುಮೋದಿತವಾಗಿರುವುದರ ಹಿನ್ನೆಲೆಯಲ್ಲಿ, ಕಾರ್ಯದರ್ಶಿಯವರ ವಿವರಣೆಯ ಪತ್ರ ಕೇವಲ ಕಣ್ಣೊರೆಸುವ ತಂತ್ರವಾಗಿದೆ ಮತ್ತು ಅರ್ಥವನ್ನು ಕಳೆದುಕೊಂಡ ವ್ಯವಹಾರವಾಗಿದೆ !

## ಅನೈತಿಕವಾಗಿ ನಡೆಸಿಕೊಳ್ಳುವ ಪತ್ರ :

ವ್ಯವಹಾರ ಮೇಲಿನಂತೆ ಸಾಗಿದ್ದರೂ ಸಹ, ಶಾಂತರಾಜರು ತಾಳ್ಮೆಯನ್ನು ಕಳೆದುಕೊಳ್ಳದೆ ಕಾರ್ಯದರ್ಶಿಯವರ ವಿರಡುಪತ್ರಗಳನ್ನು ಸ್ವೀಕರಿಸಿ ಈ ವಿಷಯಕ್ಕೆ ಸಂಬಂಧಪಟ್ಟಹಾಗೆ ಮತ್ತೆ ಪರಿಶೀಲನೆ ನಡೆಸಲು ಸಂಬಂಧಪಟ್ಟ ಮೂರು ಫೈಲುಗಳನ್ನು ಕಳುಹಿಸಿಕೊಡುವಂತೆ ತಾ 22-8-1979 ರಲ್ಲಿ ಕಾರ್ಯದರ್ಶಿಯವರಿಗೆ ಪತ್ರ ಬರೆದರು

ರಥೋತ್ಸವ ಸಮಾರಂಭಗಳ ವೆಚ್ಚಕ್ಕೆ ಸಂಬಂಧಪಟ್ಟ ವ್ಯವಹಾರ ಈ ಘಟ್ಟವನ್ನು ಮುಟ್ಟಿರುವಾಗ, ಅವುಗಳ ಫೈಲನ್ನು ಶಾಂತರಾಜರು ಮತ್ತೆ ಪರಿಶೀಲಿಸಬೇಕೆಂದಿರುವಾಗ, ಇದ್ದಕ್ಕಿದ್ದಂತೆಯೇ ಚಾರುಕೀರ್ತಿಯವರು ತಮ್ಮ ಛೇರ್ಮನ್ನರ ಸ್ಥಾನವನ್ನು ಮತ್ತೊಮ್ಮೆ ದುರುಪಯೋಗಪಡಿಸಿಕೊಂಡು ದೆಹಲಿ ವಾಸ್ತವ್ಯದಿಂದ ಬರೆದ ತಾ॥ 26-8-1979 ರ ಪತ್ರ ಶಾಂತರಾಜರಿಗೆ ಬಂದಿತು ಈ ಪತ್ರದ ವಿವರವಾದ ವ್ಯಾಖ್ಯಾನವನ್ನು ಈಗಾಗಲೇ 2 ನೇ ಅಧ್ಯಾಯದಲ್ಲಿ ಮಾಡಿದ್ದೇನೆ

ಚಾರುಕೀರ್ತಿಯವರು ಈ ಪತ್ರದಲ್ಲಿ ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವ ವಿಚಾರದಲ್ಲಿ ಶಾಂತರಾಜರು ಹಾಕಿರುವ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳದಿದ್ದರೆ, ವಿದ್ಯಾನಂದ ಮುನಿಗಳನ್ನು ಒಪ್ಪಿಸಲು ತಾವು ಕಠಿಣವಾಗಿ ಹೋರಾಡಬೇಕಾಗುತ್ತದೆ ಅನೈತಿಕ ಹಾಗೂ ನತದೃಷ್ಟಕರವಾದ ಸಂದರ್ಭಗಳನ್ನು ವಿದ್ಯಾನಂದರ ಮುಂದೆ ಎದುರಿಸಬೇಕಾಗುತ್ತದೆ ಎಂದು ಬರೆದು ಆಕ್ಷೇಪಣೆಗಳನ್ನು ಕೂಡಲೇ ಹಿಂದಕ್ಕೆ ಪಡೆಯುವಂತೆ ಒತ್ತಾಯ ಪಡಿಸಿದರು

ಚಾರುಕೀರ್ತಿಯವರ ಪತ್ರದಿಂದಾಗಿ ವಿದ್ಯಾನಂದ ಮುನಿಗಳೇ ಸ್ವತಃ ತಮ್ಮ ಸ್ವಾಗತ ಸಮಾರಂಭಗಳ ವಿಚಾರದಲ್ಲಿ ಆಸಕ್ತಿ ವಹಿಸಿದ್ದಾರೆ ಎಂಬಂಶ ಶಾಂತರಾಜರಿಗೆ

ಮೊಟ್ಟಮೊದಲು ತಿಳಿಯಿತು ತಮ್ಮ ಸ್ವಾಗತಕ್ಕೆ ಸಂಬಂಧಪಟ್ಟ ಈ ಹಣಕಾಸಿನ ವಿವಾದಕ್ಕೆ ವಿದ್ಯಾನಂದಮುನಿಗಳೂ ಸಹ ಪ್ರವೇಶ ಮಾಡಿರುವುದು ಶಾಂತರಾಜರ ಆಶ್ಚರ್ಯಕ್ಕೆ ಕಾರಣವಾಯಿತು ಈ ಹಿನ್ನೆಲೆಯಲ್ಲಿ ತಾವು ಕಮಿಟಿಯಲ್ಲಿ ನಿಯಮಗಳಿಗನುಗುಣವಾಗಿ ಮತ್ತು ಆತ್ಮಸಾಕ್ಷಿಗನುಗುಣವಾಗಿ ಭಾಗವಹಿಸುವುದು ಇನ್ನು ಮುಂದೆ ಸಾಧ್ಯವೇ ಇಲ್ಲ ಎಂದು ಗ್ರಹಿಸಿದರು ತಕ್ಷಣವೇ ಒಂದು ಖಚಿತ ನಿರ್ಧಾರಕ್ಕೆ ಬಂದರು ಸ್ವಾಮಿಜಿಯವರ ಒತ್ತಾಯದಂತೆ ಶಾಂತರಾಜರು ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವ ವಿಷಯಕ್ಕೆ ಹಾಕಿದ್ದ ಆಕ್ಷೇಪಣೆಗಳನ್ನು ಹಿಂದಕ್ಕೆ ಪಡೆದರು ಜೊತೆಗೆ ತಾವು 1979 ರ ರಥೋತ್ಸವದ ವೆಚ್ಚಗಳಿಗೆ ಸಂಬಂಧಿಸಿದಂತೆ ಹಾಕಿದ್ದ ಆಕ್ಷೇಪಣೆಗಳನ್ನೂ ಸಹ ಹಿಂದಕ್ಕೆ ಪಡೆದರು ಇಷ್ಟು ಮಾತ್ರವಲ್ಲದೆ ಎಸ್ ಡಿ ಜೆ.ಎಂ ಐ ಮೇನೇಜಿಂಗ್ ಕಮಿಟಿಯ ಎಲ್ಲಾ ಅಧಿಕಾರ ಸ್ಥಾನಗಳಿಗೂ ತಾ॥ 30-8-79 ರಂದು ರಾಜೀನಾಮೆ ಸಲ್ಲಿಸಿದರು ಶಾಂತರಾಜರು ಶ್ರವಣಬೆಳಗೊಳದ ಸಂಪರ್ಕವನ್ನು ಪೂರ್ಣವಾಗಿ ಕಡಿದುಕೊಂಡದ್ದನ್ನು ನಿರೂಪಿಸುವ ಎರಡು ಪತ್ರಗಳು ಮುಂದಿವೆ

**ಪತ್ರ 1 :**

ಎಸ್ ಬಿ ಶಾಂತರಾಜ್

' ಪದ್ಮಕೃಪ '
50, ರಮಾವಿಲಾಸ ರಸ್ತೆ
ಮೈಸೂರು–1

ತಾ॥ 30-8-1979

ಛೇರ್ಮನ್ನರಿಗೆ
ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ
ಶ್ರವಣಬೆಳಗೊಳ

ಗೌರವಾನ್ವಿತ ಸ್ವಾಮಿಜಿಯವರೆ,

ತಾವು ನನ್ನನ್ನು ಮೇನೇಜಿಂಗ್ ಕಮಿಟಿಯ ಸದಸ್ಯನನ್ನಾಗಿ ಮಾಡುವುದರ ಮೂಲಕ ಆಶೀರ್ವದಿಸಿ ಸಂಸ್ಥೆಯ ಸೇವೆ ಮಾಡುವ ಸದವಕಾಶವನ್ನು ಮಾಡಿಕೊಟ್ಟಿರಿ ಪೂಜ್ಯರಿಗೆ ನಾನು ತಿಳಿಸುವುದೇನೆಂದರೆ ನನಗೆ ವಹಿಸಿದ ಕರ್ತವ್ಯಗಳನ್ನು ನಿರ್ವಹಿಸುವಾಗ, ನನ್ನ ಶೋಧನೆಗಳನ್ನು ಮತ್ತು ಕೆಲವು ವಿಚಾರ ವಿಮರ್ಶೆಗಳನ್ನು ನನ್ನ ಮನಸ್ಸಾಕ್ಷಿಗೆ ವೇದ್ಯವಾದಂತೆ ಕಮಿಟಿಯ ಮುಂದೆ ಇರಿಸಿದ್ದೆ ಅವು ಸಂಸ್ಥೆಯ ಪ್ರಗತಿಗೆ ಹಿತಕಾರಿಯಲ್ಲವೆಂಬ ಮಾತು ಕಂಡು ಬಂದಿತು

ಆದರೆ ನಾನು ಮಾಡಿರುವ ಶೋಧನೆಗಳನ್ನು ತಪ್ಪಾಗಿ ಗ್ರಹಿಸಿರುವುದು ನನಗೆ ಖೇದವನ್ನುಂಟುಮಾಡಿದೆ ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳು ಇದರಿಂದಾಗಿ ಘಾತ ಗೊಂಡಂತೆ ಅಭಿಪ್ರಾಯಗಳನ್ನು ಬೆಳೆಸಿಕೊಂಡಿರುವುದು ನನಗೆ ಕಂಡುಬಂದಿದೆ ಹೀಗಿರು ವುದರಿಂದ, ಸಂಸ್ಥೆಯ ಸಾರ್ವತ್ರಿಕ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ನಾನು ಎತ್ತಿರುವ ಎಲ್ಲ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳುವಂತೆ ನನ್ನ ಆತ್ಮಸಾಕ್ಷಿ ಪ್ರೇರೇಪಿಸಿದೆ, ಮತ್ತು ಅದರಂತೆ ಈ ದಶಲಕ್ಷಣ ಪರ್ವದ ಸುಸಮಯವನ್ನು ನಾನು ಕಮಿಟಿಯ ಮುಂದೆ ಇಟ್ಟಿರುವ ಎಲ್ಲಾ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳುವುದಕ್ಕಾಗಿ ಉಪಯೋಗಿಸಿಕೊಳ್ಳುತ್ತೇನೆ.

ತಮಗೆ ಗೌರವದೊಂದಿಗೆ

ತಮ್ಮ ಭಕ್ತ
(ಸಹಿ)
ಎಸ್ ಪಿ ಶಾಂತರಾಜ್

**ಪತ್ರ 2 :**

ಛೇರ್ಮನ್ನರಿಗೆ ತಾ॥ 30-8-1979

ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ,
ಶ್ರವಣಬೆಳಗೊಳ

ಗೌರವಾನ್ವಿತ ಸ್ವಾಮೀಜಿಯವರೆ,

ಈ ಎಲ್ಲಾ ವರ್ಷಗಳಲ್ಲಿ ಸಂಸ್ಥೆಗೆ ನನ್ನ ಅಲ್ಪಸೇವೆ ಸಲ್ಲಿಸುವ ಸದವಕಾಶ ನನಗೆ ದೊರಕಿದ್ದರಿಂದಾಗಿ ನಿಜವಾಗಿಯೂ ನಾನು ಆಶೀರ್ವದಿಸಲ್ಪಟ್ಟಿದ್ದೇನೆ ಆಗಾಗ್ಗೆ ನನಗೆ ವಹಿಸಿದ ಕರ್ತವ್ಯವನ್ನು ನನ್ನ ಮನಸ್ಸಾಕ್ಷಿಗೆ ತೃಪ್ತಿಯಾಗುವಂತೆ ನಿರ್ವಹಿಸಲು ಬಹುಶಃ ಸಾಧ್ಯವಾಗದಿರಬಹುದು ಎಂದು ನಾನು ತಿಳಿದುಕೊಂಡಿದ್ದೇನೆ ಈ ಸಂದರ್ಭದಲ್ಲಿ ನಾನು ಪ್ರಾಮಾಣಿಕವಾಗಿ ಯೋಚಿಸುವುದೇನೆಂದರೆ, ಮೇನೇಜಿಂಗ್ ಕಮಿಟಿ ಮತ್ತು ಇತರ ಉಪ-ಕಮಿಟಿಗಳಲ್ಲಿ ನಾನು ಸದಸ್ಯನಾಗಿ ಮುಂದುವರೆಯುವುದರಿಂದ ಯಾವ ಉದ್ದೇಶವನ್ನೂ ಸಾಧಿಸಿದಂತಾಗುವುದಿಲ್ಲವಾಗಿ ನಾನು ಮೇನೇಜಿಂಗ್ ಕಮಿಟಿ ಮತ್ತು ಉಪ-ಕಮಿಟಿಗಳ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸುತ್ತಿದ್ದೇನೆ

ನನಗೆ ಸಹಕಾರ ನೀಡಿದವರೆಲ್ಲರಿಗೂ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುವುದು ನನ್ನ ಕರ್ತವ್ಯವೆಂದೂ ಸಹ ನಾನು ಭಾವಿಸುತ್ತೇನೆ ಮತ್ತು ತಮ್ಮ

ಆಶೀರ್ವಾದಗಳನ್ನು ಬಯಸುತ್ತೇನೆ

ಪ್ರಣಾಮಗಳೊಂದಿಗೆ ತಮ್ಮ ಭಕ್ತ
(ಸಹಿ)
ಎಸ್ ಪಿ ಶಾಂತರಾಜ್

**ರಾಜೀನಾಮೆಯ ಬಳಿಕ :**

ಹೀಗೆ ಎಸ್ ಪಿ ಶಾಂತರಾಜರ ವರದಿಯ ಚರ್ಚೆ ನಡೆಯಬೇಕಾದ ವೇದಿಕೆಯಲ್ಲಿ ನಡೆಯದೆ ಕಮಿಟಿಯ ಹೊರಗೇ ನಡೆದು ಚಾರುಕೀರ್ತಿಯವರಿಂದ ಅದು ಮೂಲೆಗುಂಪಾದಾಗ ಶಾಂತರಾಜರು ಕಮಿಟಿಯ ಸದಸ್ಯತ್ವದಿಂದ ನಿರ್ಗಮಿಸಿದರು. 35 ದಿನಗಳ ಅವಧಿಯಲ್ಲಿ ವರದಿಯ ಮೇಲಿನ, ಎಲ್ಲಾ ವ್ಯವಹಾರವೂ ಮುಗಿದು ಹೋಯಿತು! ರಾಜೀನಾಮೆ ಪತ್ರ ಕೈಸೇರಿದ 58 ದಿನಗಳ ನಂತರ ಚಾರುಕೀರ್ತಿಯವರು ತಾ॥ 28-10-1979 ರಲ್ಲಿ ಶಾಂತರಾಜರಿಗೆ ಪತ್ರ ಬರೆದು ರಾಜೀನಾಮೆಗಾಗಿ ಒತ್ತಾಯ ಪಡಿಸಬಾರದಾಗಿ ತಿಳಿಸಿದರು

ಶಾಂತರಾಜರ ವರದಿ ಮೂಲೆಗುಂಪಾದ್ದು, ಮತ್ತು ಅವರು ರಾಜೀನಾಮೆ ಸಲ್ಲಿಸಿದ್ದು, ಈ ಎಲ್ಲಾ ಪ್ರಕರಣಗಳನ್ನೂ ಚಂದ್ರಯ್ಯನವರು ಗಮನಿಸುತ್ತಲೇ ಇದ್ದರು ಚಂದ್ರಯ್ಯನವರು ತಾವು ಹಾಕಿದ್ದ ಯಾವ ಆಕ್ಷೇಪಣೆಯನ್ನೂ ಹಿಂದಕ್ಕೆ ಪಡೆದಿರಲಿಲ್ಲ ಸ್ವಾಮಿಯಾಜಿಯವರ ಕ್ರಮಬಾಹಿರ ಚಟುವಟಿಕೆಗಳಿಂದ ಅವರು ಅಸಮಾಧಾನಗೊಂಡಿದ್ದರು. ಈ ಹೊತ್ತಿಗೆ ನ್ಯಾಯಬದ್ಧವಾಗಿ ಕಮಿಟಿಯ ಬೊಕ್ಕಸಕ್ಕೆ ಸೇರಬೇಕಾದ ಹಣವನ್ನು ಚಾರುಕೀರ್ತಿಯವರು ಮಠದ ಹೆಸರಿನಲ್ಲಿ ಅಕ್ರಮವಾಗಿ ಸಂಗ್ರಹಿಸುತ್ತಿರುವ ಪ್ರಕರಣಗಳು ಚಂದ್ರಯ್ಯನವರ ಗಮನಕ್ಕೆ ಬಂದಿದ್ದವು ಈ ಅಕ್ರಮ ವ್ಯವಹಾರಗಳನ್ನು ನಿಲ್ಲಿಸುವ ಸದುದ್ದೇಶದಿಂದ ತಾ॥ 26-10-1979 ರಂದು ಚಂದ್ರಯ್ಯನವರು ಕಾರ್ಯದರ್ಶಿಯವರಿಗೆ ಪತ್ರ ಬರೆದು ಒಂದು ನಿರ್ಣಯವನ್ನು ಅದರ ಜೊತೆ ಕಳುಹಿಸಿ ಅದನ್ನು ಕಮಿಟಿಯ ಸಭೆಯ ಮುಂದಿಡುವಂತೆ ಪ್ರಾರ್ಥಿಸಿದರು

ನಿರ್ಣಯದಲ್ಲಿ ಈ ಹಿಂದೆ ಕಮಿಟಿಯ ವಶದಲ್ಲಿದ್ದಂತೆ, ಮಠ ಮತ್ತು ಜಿನ್ನೇದೇವರು ಈ ಎರಡು ವಿಷಯಗಳನ್ನು ಪುನಃ ಕಮಿಟಿಗೆ ಸೇರಿಸುವಂತೆ ಷೆಡ್ಯೂಲಿಗೆ ತಿದ್ದುಪಡಿ ತರಬಯಸುವ ವಿಚಾರವಿತ್ತು ಮಠವನ್ನು ಕಮಿಟಿಯ ಹತೋಟಿಗೊಳಪಡಿಸಬೇಕೆಂಬ ಚಂದ್ರಯ್ಯನವರ ಸೂಚಿತ ನಿರ್ಣಯದ ಸುದ್ದಿ ಚಾರುಕೀರ್ತಿಯವರಿಗೆ ಸಿಕ್ಕ ಕೂಡಲೇ ಅವರು ಈ ವಿಚಾರದಲ್ಲಿ ಹಸ್ತಕ್ಷೇಪ ನಡೆಸಿ, ಕಾರ್ಯದರ್ಶಿಯವರು ಆ ನಿರ್ಣಯವನ್ನು ಕಮಿಟಿಯ ತಾ॥ 7-12-1979 ರ ಸಭೆಯ ಮುಂದಿಡದಂತೆ ನೋಡಿ

ಕೊಂಡರು ಕಾರ್ಯದರ್ಶಿಯವರು ಚಂದ್ರಯ್ಯನವರ ನಿರ್ಣಯವನ್ನು ಉಪೇಕ್ಷೆಯಿಂದ ಕಂಡ ಪ್ರಸಂಗವನ್ನು ಈಗಾಗಲೇ 2 ನೇ ಅಧ್ಯಾಯದ ಕಡೆಯಲ್ಲಿ ' ಅಸ್ಪೃಶ್ಯವಾದ ಸೂಚಿತ ನಿರ್ಣಯ ' ಎಂಬ ಉಪ ಶೀರ್ಷಿಕೆಯ ಅಡಿಯಲ್ಲಿ ವಿವರಿಸಿದ್ದೇನೆ

ತಾ॥ 7-12-79 ರ ಸಭೆಯ ಅಜೆಂಡಾ ಪಟ್ಟಿಯಲ್ಲಿ ಈ ನಿರ್ಣಯ ಸೇರದೇ ಹೋದಾಗ ಚಂದ್ರಯ್ಯನವರು ತಾ॥ 3-12-79 ರಂದು ಕಾರ್ಯದರ್ಶಿಯವರಿಗೆ ತಂತಿ ಸಂದೇಶದ ಮೂಲಕ ಪ್ರತಿಭಟನೆ ಸಲ್ಲಿಸಿ ಅದೇ ದಿವಸವೇ ಚಾರಿಟಬಲ್ ಎಂಡೋ ಮೆಂಟ್ಸ್ ಕಮಿಷನರಿಗೆ, ಕಾರ್ಯದರ್ಶಿಯವರ ವರ್ತನೆಯ ವಿರುದ್ಧ ದೂರು ಸಲ್ಲಿಸಿದರು ಹಾಗೆಯೇ ತಮ್ಮ ಸೂಚಿತ ನಿರ್ಣಯವನ್ನು ಸಭೆಯ ಮುಂದಿಡುವಂತೆ ಕಾರ್ಯದರ್ಶಿ ಯವರಿಗೆ ಸೂಚನೆಗಳನ್ನು ನೀಡಬೇಕೆಂದು ಪ್ರಾರ್ಥಿಸಿದರು

ಇಷ್ಟಾದರೂ ಚಂದ್ರಯ್ಯನವರ ನಿರ್ಣಯ ತಾ॥ 7-12-79 ರ ಕಮಿಟಿಯ ಸಭೆಯಲ್ಲಿ ಪ್ರಸ್ತಾಪಕ್ಕೆ ಬರಲಿಲ್ಲ ಮುಂದಿನ ಸಭೆಯಲ್ಲಿ ಈ ವಿಷಯಗಳನ್ನು ಪ್ರಸ್ತಾ ಪಿಸಬಹುದೆಂದು ಅವರಿಗೆ ತಿಳಿಸಲಾಯಿತು ಆದರೆ ತಾ॥ 31-12-1979 ಕ್ಕೆ 8 ಜನ ಸದಸ್ಯರು ನಿವೃತ್ತರಾಗಲಿದ್ದರು ಇವರಲ್ಲಿ ಚಂದ್ರಯ್ಯನವರೂ ಒಬ್ಬರು ಆ 8 ಜನರಲ್ಲಿ ಒಬ್ಬರಾದ ಶ್ರೀ ಎ ಕೆ ಎ ಪಾರ್ಶ್ವನಾಥರು ಆ ವೇಳೆಗಾಗಲೇ ಸ್ವರ್ಗಸ್ಥ ರಾಗಿದ್ದರು ಉಳಿದ 7 ಜನರಲ್ಲಿ 5 ಜನರು ಮತ್ತೆ ಮುಂದುವರೆದು ಸದಸ್ಯತ್ವವನ್ನು ಉಳಿಸಿಕೊಂಡರು ಇಬ್ಬರು ಸದಸ್ಯರಾದ, ಶ್ರೀ ಸಿ ಬಿ ಎಂ ಚಂದ್ರಯ್ಯ ಮತ್ತು ಶ್ರೀ ಎಸ್ ಡಿ ನಾಗರಾಜರನ್ನು ಕೈಬಿಡಲಾಯಿತು ಚಂದ್ರಯ್ಯನವರ ಸ್ಥಾನದಲ್ಲಿ ಮೈಸೂರಿನ ಶ್ರೀ ಸಿ ಬಿ ಮಹಾವೀರ ಪ್ರಸಾದ್ ಮತ್ತು ನಾಗರಾಜರ ಸ್ಥಾನದಲ್ಲಿ ಹೆಚ್ ಎನ್ ರಾಜೇಂದ್ರ ಕುಮಾರರು ನೇಮಕಗೊಂಡರು ಈ ಬಗ್ಗೆ ತಾ॥ 14-5-80 ರಲ್ಲಿ ಸರ್ಕಾರದ ಆಜ್ಞೆ ಹೊರಬಿತ್ತು ಈ ಎಲ್ಲಾ ಮಾರ್ಪಾಟುಗಳೂ ಧರ್ಮಜ್ಞರಾದ ಸ್ವಾಮೀಜಿಯವರ ಸಲಹೆಯಂತೆ ನಡೆಯಿತು

**ಅಂದಾಜನ್ನು ಮೀರಿದ ಇನ್ನೊಂದು ವೆಚ್ಚ :**

ಈ ಸಮಯದಲ್ಲಿ ಚಂದ್ರಯ್ಯನವರು ತಮ್ಮ ಅಧಿಕಾರಾವಧಿ ಮುಗಿಯುತ್ತಿದ್ದರೂ ಅದರ ಕಡೆ ಗಮನ ಕೊಡದೆ, ಕಮಿಟಿಯ ವೆಚ್ಚಗಳಲ್ಲಿ ನಡೆದಿರಬಹುದಾದ ಅಕ್ರಮಗಳನ್ನು ಪತ್ತೆ ಹಚ್ಚುವ ಕಾರ್ಯದಲ್ಲಿಯೇ ನಿರತರಾಗಿದ್ದರು ತಾ॥ 5-10-1979 ರಂದು ಇಂದೂರಿನಲ್ಲಿ ನಡೆದ ಕಮಿಟಿಯ ಸಭೆಯಲ್ಲಿ, ಚಿಕ್ಕಲವ್ವ ಬಸ್ತಿ, ಎರಡುಕಟ್ಟೆ ಬಸ್ತಿ, ಮತ್ತು ಸವತಿಗಂಧವಾರಣ ಬಸ್ತಿ ಇವುಗಳ ಜೀರ್ಣೋದ್ಧಾರಕ್ಕೆ ಮಾಡಿದ ಒಟ್ಟು ವೆಚ್ಚ 62·297-37 ರೂಪಾಯಿಗಳಿಗೆ ಅನುಮೋದನೆಯನ್ನು ಪಡೆಯಲಾಗಿತ್ತು ಈ ಮುಂಚೆ ಈಕಾರ್ಯಕ್ಕಾಗಿ ಆಯವ್ಯಯದಲ್ಲಿ ಮಂಜೂರು ಮಾಡಿದ್ದ ಒಟ್ಟು ಅಂದಾಜು ಮೊತ್ತ

**"ಈ ಹಣವನ್ನು ಮಹಾಮಸ್ತಕಾಭಿಷೇಕ ಆಚರಣೆಯ ಕಮಿಟಿಯಿಂದ ಇದಕ್ಕೆ ಉಪನಿಯಮದ ಒಪ್ಪಿಗೆಯಿಲ್ಲದಿದ್ದರೂ ಸಹ ಮಂಜೂರು ಮಾಡ ಲಾಗಿದೆಯೆಂದು ನಿಮಗೆ ಈಗಾಗಲೇ ಸ್ಪಷ್ಟಪಡಿಸಿಯಾಗಿದೆ ಈ ವಿಷಯ ದಲ್ಲಿ ಅನುಕೂಲವಾಗುವಂತೆ ಉಪನಿಯಮನ್ನು ಮಾರ್ಪಾಟು ಮಾಡಲು ನಾವು ಸರಕಾರವನ್ನು ಕೋರಬಹುದೆಂಬ ವಿಷಯವನ್ನು ನಿಮಗೆ ಮುಖತಃ ಸ್ಪಷ್ಟಪಡಿಸಲಾಗಿದೆ."** ಎಂದು ಸ್ಪಷ್ಟವಾಗಿ ಬರೆದು ವಿದ್ಯಾನಂದರ ಸ್ವಾಗತಕ್ಕಾಗಿ 25,000 ರೂಪಾಯಿಗಳ ವಂತಿಗೆಯನ್ನು ಮಂಜೂರು ಮಾಡಿರುವುದು ನಿಯಮವಿರುದ್ಧವಾದ ಅಕ್ರಮ ಕಾರ್ಯ ಎಂದು ಅವರು ಸ್ವತಃ ಒಪ್ಪಿಕೊಂಡಿದ್ದಾರೆ. ಆದರೆ ಆ ನಿಯಮಭ್ರಷ್ಟವಾದ ಅಕ್ರಮ ಮಂಜೂರಾತಿಯನ್ನು ಅವರು ಕೈಬಿಡಲು ಯಾವ ಕಾರಣಕ್ಕೂ ಸಿದ್ಧರಿಲ್ಲ! ಕಮಿಟಿಯು ಮಾಡಿರುವ, ನಿಯಮಗಳ ಉಲ್ಲಂಘನೆ ಪ್ರಕರಣವನ್ನು ಕ್ರಮಗೊಳಿಸುವುದಕ್ಕಾಗಿ ಕಮಿಟಿಯ ನಿಯಮಗಳನ್ನೇ ತಿದ್ದುವಂತೆ ಸರ್ಕಾರವನ್ನು ಮುಂದೆ ಕೇಳೋಣ ಎಂಬ ಚಾರುಕೀರ್ತಿ ಭಟ್ಟಾರಕ ಸ್ವಾಮಿಜಿಯವರ ಮಾತುಗಳು ಅವರ ನಿಜವಾದ ಬಣ್ಣವನ್ನು ಬಯಲು ಮಾಡುತ್ತವೆ

ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವುದು ಅಕ್ರಮ ವಾಗುತ್ತದೆ ಎಂದು ಒಂದೇ ಸಮನೆ ಚಂದ್ರಯ್ಯನವರೂ, ಶಾಂತರಾಜರೂ ಹೇಳುತ್ತಾ ಬಂದಿದ್ದನ್ನು ಚಾರುಕೀರ್ತಿಯವರೂ ಸಹ ಪತ್ರ ಬರೆಯುವುದರ ಮೂಲಕ ಸರಿ ಎಂದು ಒಪ್ಪಿಕೊಳ್ಳುತ್ತಾರೆ ಆದರೆ ವಿಚಿತ್ರವೆಂದರೆ ಅಕ್ರಮ ಮಂಜೂರಾತಿಗೆ ಬೆಂಬಲ ಕೊಡಿ ಎಂದು ಅದೇ ಸಮಯದಲ್ಲಿ ಒತ್ತಾಯವನ್ನೂ ಮಾಡುತ್ತಾರೆ! ತತ್ವನಿಷ್ಠರಾದ ಶಾಂತ ರಾಜರನ್ನು ತತ್ವಭ್ರಷ್ಟರಾಗಿ ಎಂಬಂತೆ ಪತ್ರವನ್ನೂ ಬರೆದು ಅವರ ಚಾರಿತ್ರ್ಯಕ್ಕೇ ಶೂಲ ಹಾಕಲು ಪ್ರಯತ್ನಿಸುತ್ತಾರೆ! ಅವರ ನಿಯಮ ಪಾಲನೆಯ ಧರ್ಮಕ್ಕೆ ಚ್ಯುತಿ ಯುಂಟುಮಾಡಲು ಹಠಹಿಡಿದು ಪ್ರಯತ್ನಿಸುತ್ತಾರೆ! ಕಾನೂನಿಗೆ ವಿರುದ್ಧವಾಗಿ ಮೊದಲು ನಡೆದುಬಿಡೋಣ, ನಂತರ ಕಾನೂನನ್ನೆ ತಿದ್ದುಪಡಿ ಮಾಡಿ ಎಂದು ಸರ್ಕಾರಕ್ಕೆ ಬರೆಯೋಣ ಎಂಬರ್ಥದ ಚಾರುಕೀರ್ತಿಸ್ವಾಮಿಜಿಯವರ ಮಾತುಗಳು "ನಮಗೆ ಹಣ ವನ್ನೊಪ್ಪಿಸದ ಈ ಮನುಷ್ಯನನ್ನು ಮೊದಲು ಸಾಯಿಸಿ ಹಣ ಕಸಿದುಕೊಳ್ಳೋಣ, ನಂತರ ಕೇಳಿದ ಕೂಡಲೆ ಹಣ ಕೊಡುವಂತಹ ಮನುಷ್ಯರು ನಮಗೆ ಸಿಗಲಿ ಎಂದು ದೇವರನ್ನು ಪ್ರಾರ್ಥಿಸಿಕೊಳ್ಳೋಣ" ಎಂಬಂತಹ ಕಳ್ಳಕಾಕರ ಮಾತುಗಳಂತೆ ಇವೆ!

ವಿದ್ಯಾನಂದರ ಸ್ವಾಗತ ಸಮಾರಂಭಗಳಿಗಾಗಿ ಹಣ ೭೭ ಸ

ಶಾಂತರಾಜರು ಸ್ವಾಮಿಜಿಯವರಿಗೆ ಒಂದು ಉತ್ತಮ ಸಲಹೆ ನೀಡಿದ್ದೂ ಉಂಟು. "ಕಮಿಟಿಯಿಂದಲೇ ಹಣವನ್ನು ತೆಗೆದುಕೊಳ್ಳಬೇಕೆಂಬ ಛಲವಾದರೂ ಏತಕ್ಕೆ? ಈ

ಗಾಗಲೇ ರಚಿಸಲಾಗಿರುವ ಸ್ವಾಗತ ಸಮಿತಿಯ ಮೂಲಕ ಸಾರ್ವಜನಿಕರಿಂದ ಎಷ್ಟು ಬೇಕಾದರೂ ಹಣವನ್ನು ಸಂಗ್ರಹಿಸಬಹುದಲ್ಲವೆ ?" ಈ ಸಲಹೆ ಚಾರುಕೀರ್ತಿಯವರಿಗೆ ಪಥ್ಯವಾಗಲಿಲ್ಲ ! ಅವರು ತಮ್ಮ ಕಾನೂನುಭಂಗ ಮಾರ್ಗವನ್ನೇ ಪಟ್ಟು ಹಿಡಿದು ಕುಳಿತರು ಸ್ವರ್ಗದ ಹಾದಿಯನ್ನು ತೋರಿದರೂ ನರಕದ ಹಾದಿಯಲ್ಲೇ ಮುನ್ನುಗ್ಗುವ ಈ ಮತಿಹೀನ ಮತ್ತು ಹೃದಯಹೀನ ಹಠ, ಧರ್ಮಪೀಠದಲ್ಲಿ ವಿರಾಜಮಾನರಾಗಿರುವ ಸ್ವಾಮಿಜಿಯವರಿಗೆ ಎತಕ್ಕಾದರೂ ಬಂತು?

## ಹಿರಿಮೆಯ ಪ್ರತೀಕ :

ಶಾಂತರಾಜರಿಗೆ ಚಾರುಕೀರ್ತಿಸ್ವಾಮಿಜಿಯವರಿಂದ ಒಂದೇ ದಿನದಲ್ಲಿ ಬಂದ ಮೂರು ಪತ್ರಗಳು, ಸ್ವಾಮಿಜಿಯವರು ಹೇಗೆ ಕಮಿಟಿಯ ಎಲ್ಲಾ ವ್ಯವಹಾರಗಳನ್ನು ಕೈವಶ ಮಾಡಿಕೊಂಡು ಆಡಳಿತ ನಡೆಸುವ ಸಮಗ್ರ ಸೂತ್ರದಾರರಾಗಿದ್ದಾರೆ ಎಂಬುದನ್ನು ಸಂದೇಹಕ್ಕೆ ಅವಕಾಶವಿಲ್ಲದಂತೆ ಸ್ಪಷ್ಟಪಡಿಸಿದವು ತೀರಾ ವೈಯಕ್ತಿಕ ಪತ್ರದಲ್ಲಿದ್ದ ತಮ್ಮ ಮುಖಸ್ತುತಿಯ ಮಾತುಗಳ ಬಲೆಗೆ ಶಾಂತರಾಜರು ಬೀಳಲಿಲ್ಲ ! ಪ್ರಶಂಸೆಯ ಮಾತುಗಳಿಗೆ ಮರುಳಾಗಲಿಲ್ಲ ! ಸ್ವಾಮಿಜಿಯವರ ಮೂರು ಪತ್ರಗಳ ಶಾಂತರಾಜರ ನಿಯಮನಿಷ್ಠೆ ಮತ್ತು ಆತ್ಮಸಾಕ್ಷಿಯನ್ನು ತುಸಮಾತ್ರವೂ ಕದಲಿಸಲು ಸಮರ್ಥವಾಗಲಿಲ್ಲ !

ಸ್ವಾಮಿಜಿಯವರ ಪತ್ರಗಳ ಔಚಿತ್ಯ ಹಾಗೂ ಅವರು ಕೊಡುತ್ತಿರುವ ವಿವರಣೆಗಳ ಸಿಂಧುತ್ವ, ಅದರ ಲೋಪದೋಷಗಳು ಮುಂತಾದ ಅಂಶಗಳ ಬಗೆಗೆ ಟೀಕಿಸುವ ಮುಕ್ತ ಅವಕಾಶ ಶಾಂತರಾಜರಿಗಿದ್ದರೂ, ಈ ವಿಚಾರದಲ್ಲಿ ಅವರು ಔದಾರ್ಯ ತೋರಿದರು ಸ್ವಾಮಿಜಿಯ ಸ್ಥಾನದ ಘನತೆಯನ್ನು ಸ್ವಾಮಿಜಿಯವರೇ ಉಳಿಸಿಕೊಂಡಿರದಿದ್ದರೂ, ಆ ಘನತೆಯನ್ನು ಸಂರಕ್ಷಿಸುವ ದೃಷ್ಟಿಯಿಂದ ಆ ಪತ್ರಗಳ ವಿವರವಾದ ಸಮೀಕ್ಷೆಗೆ ಶಾಂತರಾಜರು ಕೈಹಾಕಲಿಲ್ಲ ತಾ॥ 17–8–1979 ರಂದು ಶಾಂತರಾಜರು ಸ್ವಾಮಿಜಿಯವರಿಗೆ ಬರೆದ ಪತ್ರ ಶಾಂತರಾಜರ ಹಿರಿಮೆ ಮತ್ತು ಸದ್ಭಾವನೆಗಳ ಪ್ರತೀಕವಾಗಿದೆ ಅದರ ಸಾರಾಂಶ ಮುಂದಿದೆ

"ಪೂಜ್ಯ ಸ್ವಾಮಿಜಿಯವರೆ, ನನ್ನ ತಾ॥ 25–7–1979 ರ ವರದಿಯನ್ನು ನಾನು ಯಾರನ್ನೇ ಆಗಲಿ ಕೆರಳಿಸುವ ಉದ್ದೇಶದಿಂದ ಸಲ್ಲಿಸಿಲ್ಲ ಮತ್ತು ತಮ್ಮಿಂದ ಉತ್ತರ ಪಡೆಯುವ ಉದ್ದೇಶದಿಂದಲೇ ಅದು ಕೊಡಿಲ್ಲ ಈ ವಿಷಯ ತಮ್ಮನ್ನು ಇಷ್ಟು ದೂರದವರೆಗೂ ಸೆಳೆದು ನನ್ನ ವರದಿಗೆ ಉತ್ತರ ಕೊಡುವಂತೆ ಮಾಡಿರುವುದು

ನನ್ನ ಮನಸ್ಸಿಗೆ ನೋವನ್ನುಂಟುಮಾಡಿದೆ. ಏಕೆಂದರೆ ಸಂಸ್ಥೆಯ ದಿನನಿತ್ಯದ ಆಡಳಿತ ವ್ಯವಹಾರಗಳಲ್ಲಿ ತಾವು ಯಾವ ರೀತಿಯಲ್ಲೂ ನೇರವಾಗಿ ಜವಾಬ್ದಾರರಲ್ಲ ಎಂಬುದು ನನಗೆ ಸ್ಪಷ್ಟವಾಗಿರುವುದೇ ಇದಕ್ಕೆ ಕಾರಣವಾಗಿದೆ

ನನ್ನ ವರದಿಯ ಶೋಧನೆಗಳನ್ನು ತಾವೂ ಸಹ ಯಥಾವತ್ತಾಗಿ ಅರ್ಥಮಾಡಿ ಕೊಂಡಿಲ್ಲ ಇನ್ನೊಂದು ಕಡೆ, ಈಗಾಗಲೇ ನಾನು ಪರಿಶೀಲನೆಗಳ ಮೂಲಕ ಎತ್ತಿ ತೋರಿಸಿರುವ, ಈಗಾಗಲೇ ವೆಚ್ಚವಾಗಿರುವ, ಕ್ರಮಬದ್ಧವಲ್ಲದ ವೆಚ್ಚಗಳನ್ನು ಸಮರ್ಥಿಸಿ ಕೊಳ್ಳುವ ಮತ್ತು ಕ್ರಮಪಡಿಸುವ ನಿರಂತರ ಪ್ರಯತ್ನಗಳು ನಡೆಯುತ್ತಿವೆ ತಮ್ಮ ಬಗ್ಗೆ ಇರುವ ನನ್ನ ಗೌರವಗಳಿಂದಾಗಿ ತಮ್ಮ ಪತ್ರದಲ್ಲಿ ಅನೇಕ ವಿಷಯಗಳಿಗೆ ತಾವು ಒದಗಿಸಿರುವ ವಿವರಣೆಗಳನ್ನು ನಾನು ಟೀಕಿಸತೊಡಗುವುದರಲ್ಲಿ ನಿರತನಾಗುವುದಿಲ್ಲ. ''

ಶಾಂತರಾಜರು ಈ ಪತ್ರ ಬರೆದ ಮರುದಿವಸವೇ ತಾ॥ 18–8–79 ರಂದು ಚಾರುಕೀರ್ತಿಸ್ವಾಮಿಜಿ ಅದಕ್ಕೆ ಉತ್ತರ ನೀಡಿದರು ಸ್ವಾಮಿಜಿಯವರ ಪತ್ರ ಕ್ರೋಧ ಮತ್ತು ಅವಿವೇಕಗಳ ಮೂರ್ತಸ್ವರೂಪವಾಗಿದೆ ಸಾರಾಂಶ ಹೀಗಿದೆ '' ಸಂಸ್ಥೆಯ ದಿನನಿತ್ಯದ ಅಡಳಿತಕ್ಕೆ ನಾವು ಸಂಬಂಧ ಪಡದವರಾದರೆ, ಅಂತಹ ಕೆಲಸ ಕಾರ್ಯಗಳನ್ನು ನಮ್ಮ ಗಮನಕ್ಕೆ ತರುವುದು ಅನಗತ್ಯವಾಗಿತ್ತು ನಿಮ್ಮ ಅಭಿಪ್ರಾಯ ಗಳನ್ನು ನಾವು ಯಥಾವತ್ತಾದ ರೀತಿಯಲ್ಲಿಯೇ ಅರ್ಥಮಾಡಿಕೊಂಡಿದ್ದೇವೆ ಹಿಂದೆಲ್ಲಾ ಕ್ಷೇತ್ರದ ಕಾರ್ಯಗಳಲ್ಲಿ ಪಾಲ್ಗೊಂಡಿದ್ದರೂ ಹಿಂದಿನ ವೆಚ್ಚಗಳ ಬಗ್ಗೆ ಪ್ರಶ್ನಿಸಿರಲಿಲ್ಲ ಈಗ ಸಂಗತಿಗಳೆಲ್ಲಾ ಮುಗಿದ ಮೇಲೆ, ಪರಿಶೀಲನೆಗಳನ್ನೆತ್ತಿರುವ ನಿಮ್ಮ ಕ್ರಮ ನ್ಯಾಯೋಚಿತವಲ್ಲ ''

ಸ್ವಾಮಿಜಿಯವರಿಂದ ಮೇಲಿನ ಪತ್ರ ಬಂದ ಮರುದಿವಸವೇ ತಾ॥ 19–8–79 ರಂದು ಇದುವರೆಗೂ ಮೌನವಾಗಿದ್ದ ಕಾರ್ಯದರ್ಶಿಯವರಿಂದಲೂ ಒಂದು ಪತ್ರ ಬಂದಿತು ಶಾಂತರಾಜರ ತಾ॥ 7–8–79 ರ ಪತ್ರಕ್ಕೆ ಇದು ಉತ್ತರವಾಗಿದೆ ಚಾರುಕೀರ್ತಿಯವರಿಂದ ರಕ್ಷಣೆ ಸಿಕ್ಕಿದ್ದರಿಂದಾಗಿ ಈ ಪತ್ರ ನಿಜವಾಗಿಯೂ ಸಡ್ಡು ಹೊಡೆದು ನಿಂತ ರೂಪದಲ್ಲಿಯೇ ಇದೆ ಫೈಲ್ ತೆಗೆದುಕೊಂಡು ಹೋದದ್ದು ನನ್ನ ಗಮನಕ್ಕೆ ಬಂದೇ ಇಲ್ಲ ಎಂದು ಕಾರ್ಯದರ್ಶಿಯವರು ಮತ್ತೆ ತಿಳಿಸಿದ್ದಾರೆ ಫೈಲನ್ನು ತಾವು ನೋಡಿದಾಗ ಕೆಲವು ಸಾಮಾನ್ಯ ತಪ್ಪುಗಳು ಕಂಡುದಾಗಿಯೂ ಅವುಗಳನ್ನು ಅಕೌಂಟಂಟರು ಸಂಬಂಧಪಟ್ಟ ಪಾರ್ಟಿಗಳನ್ನು ಪತ್ತೆಹಚ್ಚಿ ಸರಿಪಡಿಸುತ್ತಾರೆ . ಈ ಧಾಟಿಯಲ್ಲಿ ಪತ್ರ ಸಾಗುತ್ತದೆ

ಈ ಪತ್ರದ ನಂತರ ಮರುದಿನ ತಾ। 20–8–1979 ರಂದು ಕಾರ್ಯದರ್ಶಿಯ

ವರು ಶಾಂತರಾಜರ 25-7-79 ರ ವರದಿಗೆ ತಮ್ಮ ವಿವರಣೆಗಳನ್ನು ಒದಗಿಸಿ ಪತ್ರ ಬರೆದರು ವಾಸ್ತವವಾಗಿ ಕಮಿಟಿಗೆ ವಿವರಣೆ ಕೊಡಬೇಕಾಗಿದ್ದ ಕಾರ್ಯದರ್ಶಿಯವರು ಶಾಂತರಾಜರಿಗೇ ನೇರವಾಗಿ ವಿವರಣೆಯನ್ನು ಕೊಟ್ಟಿರುವುದು ನಿಜಸಂಗತಿ ಬಯಲಾಗದಂತೆ ತಡೆಯುವ ಪ್ರಯತ್ನವಾಗಿದೆ ಈಗಾಗಲೇ ಈ ವಿಚಾರದಲ್ಲಿ ಸ್ವಾಮೀಜಿಯವರು ಹಸ್ತಕ್ಷೇಪಮಾಡಿ ಮೂರುಪತ್ರಗಳನ್ನು ಬರೆದಿರುವ ಹಿನ್ನೆಲೆಯಲ್ಲಿ ಮತ್ತು 4-8-79 ರ ಕಮಿಟಿಯ ಸಭೆಯಲ್ಲಿ ಏಪ್ರಿಲ್ 79 ರ ವೆಚ್ಚಗಳು ವಿಚಾರಹೀನವಾಗಿ ಅನುಮೋದಿತವಾಗಿರುವುದರ ಹಿನ್ನೆಲೆಯಲ್ಲಿ, ಕಾರ್ಯದರ್ಶಿಯವರ ವಿವರಣೆಯ ಪತ್ರ ಕೇವಲ ಕಣ್ಣೊರೆಸುವ ತಂತ್ರವಾಗಿದೆ ಮತ್ತು ಅರ್ಥವನ್ನು ಕಳೆದುಕೊಂಡ ವ್ಯವಹಾರವಾಗಿದೆ !

**ಅನೈತಿಕವಾಗಿ ನಡೆಸಿಕೊಳ್ಳುವ ಪತ್ರ :**

ವ್ಯವಹಾರ ಮೇಲಿನಂತೆ ಸಾಗಿದ್ದರೂ ಸಹ, ಶಾಂತರಾಜರು ತಾಳ್ಮೆಯನ್ನು ಕಳೆದುಕೊಳ್ಳದೆ ಕಾರ್ಯದರ್ಶಿಯವರ ಎರಡುಪತ್ರಗಳನ್ನು ಸ್ವೀಕರಿಸಿ ಈ ವಿಷಯಕ್ಕೆ ಸಂಬಂಧಪಟ್ಟಹಾಗೆ ಮತ್ತೆ ಪರಿಶೀಲನೆ ನಡೆಸಲು ಸಂಬಂಧಪಟ್ಟ ಮೂರು ಫೈಲುಗಳನ್ನು ಕಳುಹಿಸಿಕೊಡುವಂತೆ ತಾ 22-8-1979 ರಲ್ಲಿ ಕಾರ್ಯದರ್ಶಿಯವರಿಗೆ ಪತ್ರ ಬರೆದರು

ರಥೋತ್ಸವ ಸಮಾರಂಭಗಳ ವೆಚ್ಚಕ್ಕೆ ಸಂಬಂಧಪಟ್ಟ ವ್ಯವಹಾರ ಈ ಘಟ್ಟವನ್ನು ಮುಟ್ಟಿರುವಾಗ, ಅವುಗಳ ಫೈಲನ್ನು ಶಾಂತರಾಜರು ಮತ್ತೆ ಪರಿಶೀಲಿಸಬೇಕೆಂದಿರುವಾಗ, ಇದ್ದಕ್ಕಿದ್ದಂತೆಯೇ ಚಾರುಕೀರ್ತಿಯವರು ತಮ್ಮ ಧರ್ಮಸ್ಥರ ಸ್ಥಾನವನ್ನು ಮತ್ತೊಮ್ಮೆ ದುರುಪಯೋಗಪಡಿಸಿಕೊಂಡು ಪಕ್ಷಪಾತದಿಂದ ಬರೆದ ತಾ॥ 26-8-1979 ರ ಪತ್ರ ಶಾಂತರಾಜರಿಗೆ ಬಂದಿತು ಈ ಪತ್ರದ ವಿವರವಾದ ವ್ಯಾಖ್ಯಾನವನ್ನು ಈಗಾಗಲೇ 2 ನೇ ಅಧ್ಯಾಯದಲ್ಲಿ ಮಾಡಿದ್ದೇನೆ

ಚಾರುಕೀರ್ತಿಯವರು ಈ ಪತ್ರದಲ್ಲಿ ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವ ವಿಚಾರದಲ್ಲಿ ಶಾಂತರಾಜರು ಹಾಕಿರುವ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳದಿದ್ದರೆ, ವಿದ್ಯಾನಂದ ಮುನಿಗಳನ್ನು ಒಪ್ಪಿಸಲು ತಾವು ಕಠಿಣವಾಗಿ ಹೋರಾಡಬೇಕಾಗುತ್ತದೆ ಅನೈತಿಕ ಹಾಗೂ ನತದೃಷ್ಟಕರವಾದ ಸಂದರ್ಭಗಳನ್ನು ವಿದ್ಯಾನಂದರ ಮುಂದೆ ಎದುರಿಸಬೇಕಾಗುತ್ತದೆ ಎಂದು ಬರೆದು ಆಕ್ಷೇಪಣೆಗಳನ್ನು ಕೂಡಲೇ ಹಿಂದಕ್ಕೆ ಪಡೆಯುವಂತೆ ಒತ್ತಾಯ ಪಡಿಸಿದರು

ಚಾರುಕೀರ್ತಿಯವರ ಪತ್ರದಿಂದಾಗಿ ವಿದ್ಯಾನಂದ ಮುನಿಗಳೇ ಸ್ವತಃ ತಮ್ಮ ಸ್ವಾಗತ ಸಮಾರಂಭಗಳ ವಿಚಾರದಲ್ಲಿ ಆಸಕ್ತಿ ವಹಿಸಿದ್ದಾರೆ ಎಂಬಂಶ ಶಾಂತರಾಜರಿಗೆ

ಮೊಟ್ಟಮೊದಲು ತಿಳಿಯಿತು. ತಮ್ಮ ಸ್ವಾಗತಕ್ಕೆ ಸಂಬಂಧಪಟ್ಟ ಈ ಹಣಕಾಸಿನ ವಿವಾದಕ್ಕೆ ವಿದ್ಯಾನಂದಮುನಿಗಳೂ ಸಹ ಪ್ರವೇಶ ಮಾಡಿರುವುದು ಶಾಂತರಾಜರ ಆಶ್ಚರ್ಯಕ್ಕೆ ಕಾರಣವಾಯಿತು. ಈ ಹಿನ್ನೆಲೆಯಲ್ಲಿ ತಾವು ಕಮಿಟಿಯಲ್ಲಿ ನಿಯಮಗಳಿಗನುಗುಣವಾಗಿ ಮತ್ತು ಆತ್ಮಸಾಕ್ಷಿಗನುಗುಣವಾಗಿ ಭಾಗವಹಿಸುವುದು ಇನ್ನು ಮುಂದೆ ಸಾಧ್ಯವೇ ಇಲ್ಲ ಎಂದು ಗ್ರಹಿಸಿದವರು ತಕ್ಷಣವೇ ಒಂದು ಖಚಿತ ನಿರ್ಧಾರಕ್ಕೆ ಬಂದರು ಸ್ವಾಮಿಜಿಯವರ ಒತ್ತಾಯದಂತೆ ಶಾಂತರಾಜರು ವಿದ್ಯಾನಂದರ ಸ್ವಾಗತ ಸಮಿತಿಗೆ ಹಣ ಮಂಜೂರು ಮಾಡುವ ವಿಷಯಕ್ಕೆ ಹಾಕಿದ್ದ ಆಕ್ಷೇಪಣೆಗಳನ್ನು ಹಿಂದಕ್ಕೆ ಪಡೆದರು ಜೊತೆಗೆ ತಾವು 1979 ರ ರಥೋತ್ಸವದ ವೆಚ್ಚಗಳಿಗೆ ಸಂಬಂಧಿಸಿದಂತೆ ಹಾಕಿದ್ದ ಆಕ್ಷೇಪಣೆಗಳನ್ನೂ ಸಹ ಹಿಂದಕ್ಕೆ ಪಡೆದರು ಇಷ್ಟು ಮಾತ್ರವಲ್ಲದೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಎಲ್ಲಾ ಅಧಿಕಾರ ಸ್ಥಾನಗಳಿಗೂ ತಾ॥ 30–8–79 ರಂದು ರಾಜೀನಾಮೆ ಸಲ್ಲಿಸಿದರು ಶಾಂತರಾಜರು ಶ್ರವಣಬೆಳಗೊಳದ ಸಂಪರ್ಕವನ್ನು ಪೂರ್ಣವಾಗಿ ಕಡಿದುಕೊಂಡದ್ದನ್ನು ನಿರೂಪಿಸುವ ಎರಡು ಪತ್ರಗಳು ಮುಂದಿವೆ

**ಪತ್ರ 1 :**

ಎಸ್ ಪಿ ಶಾಂತರಾಜ್

' ಪದ್ಮಕೃಪ '
50, ರಮಾವಿಲಾಸ ರಸ್ತೆ
ಮೈಸೂರು–1

ತಾ॥ 30–8–1979

ಧರ್ಮಿಷ್ಠರಿಗೆ
ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ
ಶ್ರವಣಬೆಳಗೊಳ
ಗೌರವಾನ್ವಿತ ಸ್ವಾಮಿಜಿಯವರೆ,

ತಾವು ನನ್ನನ್ನು ಮೇನೇಜಿಂಗ್ ಕಮಿಟಿಯ ಸದಸ್ಯನನ್ನಾಗಿ ಮಾಡುವುದರ ಮೂಲಕ ಆಶೀರ್ವದಿಸಿ ಸಂಸ್ಥೆಯ ಸೇವೆ ಮಾಡುವ ಸದವಕಾಶವನ್ನು ಮಾಡಿಕೊಟ್ಟಿರಿ. ಪೂಜ್ಯರಿಗೆ ನಾನು ತಿಳಿಸುವುದೇನೆಂದರೆ ನನಗೆ ವಹಿಸಿದ ಕರ್ತವ್ಯಗಳನ್ನು ನಿರ್ವಹಿಸುವಾಗ, ನನ್ನ ಶೋಧನೆಗಳನ್ನು ಮತ್ತು ಕೆಲವು ವಿಚಾರ ವಿಮರ್ಶೆಗಳನ್ನು ನನ್ನ ಮನಸ್ಸಾಕ್ಷಿಗೆ ವೇದ್ಯವಾದಂತೆ ಕಮಿಟಿಯ ಮುಂದೆ ಇರಿಸಿದ್ದೆ ಅವು ಸಂಸ್ಥೆಯ ಪ್ರಗತಿಗೆ ಹಿತಕಾರಿಯೆಲ್ಲವೆಂಬ ಮಾತು ಕಂಡು ಬಂದಿತು

ಆದರೆ ನಾನು ಮಾಡಿರುವ ಶೋಧನೆಗಳನ್ನು ತಪ್ಪಾಗಿ ಗ್ರಹಿಸಿರುವುದು ನನಗೆ ಖೇದವನ್ನುಂಟುಮಾಡಿದೆ ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳು ಇದರಿಂದಾಗಿ ಘಾತ ಗೊಂಡಂತೆ ಅಭಿಪ್ರಾಯಗಳನ್ನು ಬೆಳೆಸಿಕೊಂಡಿರುವುದು ನನಗೆ ಕಂಡುಬಂದಿದೆ ಹೀಗಿರು ವುದರಿಂದ, ಸಂಸ್ಥೆಯ ಸಾರ್ವತ್ರಿಕ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ನಾನು ಎತ್ತಿರುವ ಎಲ್ಲ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳುವಂತೆ ನನ್ನ ಆತ್ಮಸಾಕ್ಷಿ ಪ್ರೇರೇಪಿ ಸಿದೆ, ಮತ್ತು ಅದರಂತೆ ಈ ದಶಲಕ್ಷಣ ಪರ್ವದ ಸುಸಮಯವನ್ನು ನಾನು ಕಮಿಟಿಯ ಮುಂದೆ ಇಟ್ಟಿರುವ ಎಲ್ಲಾ ಆಕ್ಷೇಪಣೆಗಳನ್ನು ಹಿಂತೆಗೆದುಕೊಳ್ಳುವುದಕ್ಕಾಗಿ ಉಪಯೋ ಗಿಸಿಕೊಳ್ಳುತ್ತೇನೆ

ತಮಗೆ ಗೌರವದೊಂದಿಗೆ

ತಮ್ಮ ಭಕ್ತ
(ಸಹಿ)
ಎಸ್ ಪಿ ಶಾಂತರಾಜ್

**ಪತ್ರ 2 :**

ಚೇರ್ಮನ್ನರಿಗೆ

ತಾ॥ 30-8-1979

ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ,
ಶ್ರವಣಬೆಳಗೊಳ

ಗೌರವಾನ್ವಿತ ಸ್ವಾಮೀಜಿಯವರೆ,

ಈ ಎಲ್ಲಾ ವರ್ಷಗಳಲ್ಲಿ ಸಂಸ್ಥೆಗೆ ನನ್ನ ಅಲ್ಪಸೇವೆ ಸಲ್ಲಿಸುವ ಸದವಕಾಶ ನನಗೆ ದೊರಕಿದ್ದರಿಂದಾಗಿ ನಿಜವಾಗಿಯೂ ನಾನು ಆಶೀರ್ವದಿಸಲ್ಪಟ್ಟಿದ್ದೇನೆ ಆಗಾಗ್ಗೆ ನನಗೆ ವಹಿಸಿದ ಕರ್ತವ್ಯವನ್ನು ನನ್ನ ಮನಸ್ಸಾಕ್ಷಿಗೆ ತೃಪ್ತಿಯಾಗುವಂತೆ ನಿರ್ವಹಿಸಲು ಬಹುಶಃ ಸಾಧ್ಯವಾಗದಿರಬಹುದು ಎಂದು ನಾನು ತಿಳಿದುಕೊಂಡಿದ್ದೇನೆ ಈ ಸಂದರ್ಭದಲ್ಲಿ ನಾನು ಪ್ರಾಮಾಣಿಕವಾಗಿ ಯೋಚಿಸುವುದೇನೆಂದರೆ, ಮೇನೇಜಿಂಗ್ ಕಮಿಟಿ ಮತ್ತು ಇತರ ಉಪ-ಕಮಿಟಿಗಳಲ್ಲಿ ನಾನು ಸದಸ್ಯನಾಗಿ ಮುಂದುವರೆಯುವುದರಿಂದ ಯಾವ ಉದ್ದೇಶ ವನ್ನೂ ಸಾಧಿಸಿದಂತಾಗುವುದಿಲ್ಲವಾಗಿ ನಾನು ಮೇನೇಜಿಂಗ್ ಕಮಿಟಿ ಮತ್ತು ಉಪ- ಕಮಿಟಿಗಳ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸುತ್ತಿದ್ದೇನೆ

ನನಗೆ ಸಹಕಾರ ನೀಡಿದವರೆಲ್ಲರಿಗೂ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುವುದು ನನ್ನ ಕರ್ತವ್ಯವೆಂದೂ ಸಹ ನಾನು ಭಾವಿಸುತ್ತೇನೆ ಮತ್ತು ತಮ್ಮ

ಆಶೀರ್ವಾದಗಳನ್ನು ಬಯಸುತ್ತೇನೆ.

ಪ್ರಣಾಮಗಳೊಂದಿಗೆ ತಮ್ಮ ಭಕ್ತ
(ಸಹಿ)
ಎಸ್. ಪಿ ಶಾಂತರಾಜ್

**ರಾಜೀನಾಮೆಯ ಬಳಿಕ :**

ಹೀಗೆ ಎಸ್ ಪಿ. ಶಾಂತರಾಜರ ವರದಿಯು ಚರ್ಚೆ ನಡೆಯಬೇಕಾದ ವೇದಿಕೆಯಲ್ಲಿ ನಡೆಯದೆ ಕಮಿಟಿಯ ಹೊರಗೇ ನಡೆದು ಚಾರುಕೀರ್ತಿಯವರಿಂದ ಅದು ಮೂಲೆಗುಂಪಾದಾಗ ಶಾಂತರಾಜರು ಕಮಿಟಿಯ ಸದಸ್ಯತ್ವದಿಂದ ನಿರ್ಗಮಿಸಿದರು 35 ದಿನಗಳ ಅವಧಿಯಲ್ಲಿ ವರದಿಯ ಮೇಲಿನ, ಎಲ್ಲಾ ವ್ಯವಹಾರವೂ ಮುಗಿದು ಹೋಯಿತು! ರಾಜೀನಾಮ ಪತ್ರ ಕೈಸೇರಿದ 58 ದಿನಗಳ ನಂತರ ಚಾರುಕೀರ್ತಿಯವರು ತಾ॥ 28-10-1979 ರಲ್ಲಿ ಶಾಂತರಾಜರಿಗೆ ಪತ್ರ ಬರೆದು ರಾಜೀನಾಮೆಗಾಗಿ ಒತ್ತಾಯ ಪಡಿಸಬಾರದಾಗಿ ತಿಳಿಸಿದರು

ಶಾಂತರಾಜರ ವರದಿ ಮೂಲೆಗುಂಪಾದ್ದು, ಮತ್ತು ಅವರು ರಾಜೀನಾಮೆ ಸಲ್ಲಿಸಿದ್ದು, ಈ ಎಲ್ಲಾ ಪ್ರಕರಣಗಳನ್ನೂ ಚಂದ್ರಯ್ಯನವರು ಗಮನಿಸುತ್ತಲೇ ಇದ್ದರು ಚಂದ್ರಯ್ಯನವರು ತಾವು ಹಾಕಿದ್ದ ಯಾವ ಆಕ್ಷೇಪಣೆಯನ್ನೂ ಹಿಂದಕ್ಕೆ ಪಡೆದಿರಲಿಲ್ಲ ಸ್ವಾಮೀಜಿಯವರ ಕ್ರಮಬಾಹಿರ ಚಟುವಟಿಕೆಗಳಿಂದ ಅವರು ಅಸಮಾಧಾನಗೊಂಡಿದ್ದರು ಈ ಹೊತ್ತಿಗೆ ನ್ಯಾಯಬದ್ಧವಾಗಿ ಕಮಿಟಿಯ ಬೊಕ್ಕಸಕ್ಕೆ ಸೇರಬೇಕಾದ ಹಣವನ್ನು ಚಾರುಕೀರ್ತಿಯವರು ಮಠದ ಹೆಸರಿನಲ್ಲಿ ಅಕ್ರಮವಾಗಿ ಸಂಗ್ರಹಿಸುತ್ತಿರುವ ಪ್ರಕರಣಗಳು ಚಂದ್ರಯ್ಯನವರ ಗಮನಕ್ಕೆ ಬಂದಿದ್ದವು ಈ ಅಕ್ರಮ ವ್ಯವಹಾರಗಳನ್ನು ನಿಲ್ಲಿಸುವ ಸದುದ್ದೇಶದಿಂದ ತಾ॥ 26-10-1979 ರಂದು ಚಂದ್ರಯ್ಯನವರು ಕಾರ್ಯದರ್ಶಿಯವರಿಗೆ ಪತ್ರ ಬರೆದು ಒಂದು ನಿರ್ಣಯವನ್ನು ಅದರ ಜೊತೆ ಕಳುಹಿಸಿ ಅದನ್ನು ಕಮಿಟಿಯ ಸಭೆಯ ಮುಂದಿಡುವಂತೆ ಪ್ರಾರ್ಥಿಸಿದರು.

ನಿರ್ಣಯದಲ್ಲಿ ಈ ಹಿಂದೆ ಕಮಿಟಿಯ ವಶದಲ್ಲಿದ್ದಂತೆ, ಮಠ ಮತ್ತು ಜಿನ್ನೇದೇವರು ಈ ಎರಡು ವಿಷಯಗಳನ್ನು ಪುನಃ ಕಮಿಟಿಗೆ ಸೇರಿಸುವಂತೆ ಷಡ್ಯೂಲಿಗೆ ತಿದ್ದುಪಡಿ ತರಬಯಸುವ ವಿಚಾರವಿತ್ತು, ಮಠವನ್ನು ಕಮಿಟಿಯ ಹತೋಟಿಗೊಳಪಡಿಸಬೇಕೆಂಬ ಚಂದ್ರಯ್ಯನವರ ಸೂಚಿತ ನಿರ್ಣಯದ ಸುದ್ದಿ ಚಾರುಕೀರ್ತಿಯವರಿಗೆ ಸಿಕ್ಕ ಕೂಡಲೇ ಅವರು ಈ ವಿಚಾರದಲ್ಲಿ ಹಸ್ತಕ್ಷೇಪ ನಡೆಸಿ, ಕಾರ್ಯದರ್ಶಿಯವರು ಆ ನಿರ್ಣಯವನ್ನು ಕಮಿಟಿಯ ತಾ॥ 7-12-1979 ರ ಸಭೆಯ ಮುಂದಿಡದಂತೆ ನೋಡಿ

ಕೊಂಡರು ಕಾರ್ಯದರ್ಶಿಯವರು ಚಂದ್ರಯ್ಯನವರ ನಿರ್ಣಯವನ್ನು ಉಪೇಕ್ಷೆಯಿಂದ ಕಂಡ ಪ್ರಸಂಗವನ್ನು ಈಗಾಗಲೇ 2 ನೇ ಅಧ್ಯಾಯದ ಕಡೆಯಲ್ಲಿ ' ಅಸ್ಪೃಶ್ಯವಾದ ಸೂಚಿತ ನಿರ್ಣಯ ' ಎಂಬ ಉಪ ಶೀರ್ಷಿಕೆಯ ಅಡಿಯಲ್ಲಿ ವಿವರಿಸಿದ್ದೇನೆ

ತಾ॥ 7-12-79 ರ ಸಭೆಯ ಅಜೆಂಡಾ ಪಟ್ಟಿಯಲ್ಲಿ ಈ ನಿರ್ಣಯ ಸೇರದೇ ಹೋದಾಗ ಚಂದ್ರಯ್ಯನವರು ತಾ॥ 13-12-79 ರಂದು ಕಾರ್ಯದರ್ಶಿಯವರಿಗೆ ತಂತಿ ಸಂದೇಶದ ಮೂಲಕ ಪ್ರತಿಭಟನೆ ಸಲ್ಲಿಸಿ ಅದೇ ದಿವಸವೇ ಚಾರಿಟಬಲ್ ಎಂಡೋಮೆಂಟ್ಸ್ ಕಮಿಷನರಿಗೆ, ಕಾರ್ಯದರ್ಶಿಯವರ ವರ್ತನೆಯ ವಿರುದ್ಧ ದೂರು ಸಲ್ಲಿಸಿದರು ಹಾಗೆಯೇ ತಮ್ಮ ಸೂಚಿತ ನಿರ್ಣಯವನ್ನು ಸಭೆಯ ಮುಂದಿಡುವಂತೆ ಕಾರ್ಯದರ್ಶಿಯವರಿಗೆ ಸೂಚನೆಗಳನ್ನು ನೀಡಬೇಕೆಂದು ಪ್ರಾರ್ಥಿಸಿದರು

ಇಷ್ಟಾದರೂ ಚಂದ್ರಯ್ಯನವರ ನಿರ್ಣಯ ತಾ॥ 7-12-79 ರ ಕಮಿಟಿಯ ಸಭೆಯಲ್ಲಿ ಪ್ರಸ್ತಾಪಕ್ಕೆ ಬರಲಿಲ್ಲ ಮುಂದಿನ ಸಭೆಯಲ್ಲಿ ಈ ವಿಷಯಗಳನ್ನು ಪ್ರಸ್ತಾಪಿಸಬಹುದೆಂದು ಅವರಿಗೆ ತಿಳಿಸಲಾಯಿತು ಆದರೆ ತಾ॥ 31-12-1979 ಕ್ಕೆ 8 ಜನ ಸದಸ್ಯರು ನಿವೃತ್ತರಾಗಲಿದ್ದರು ಇವರಲ್ಲಿ ಚಂದ್ರಯ್ಯನವರೂ ಒಬ್ಬರು ಆ 8 ಜನರಲ್ಲಿ ಒಬ್ಬರಾದ ಶ್ರೀ ಎ ಕೆ ಎ ಪಾರ್ಶ್ವನಾಥರು ಆ ವೇಳೆಗಾಗಲೇ ಸ್ವರ್ಗಸ್ಥರಾಗಿದ್ದರು ಉಳಿದ 7 ಜನರಲ್ಲಿ 5 ಜನರು ಮತ್ತೆ ಮುಂದುವರೆದು ಸದಸ್ಯತ್ವವನ್ನು ಉಳಿಸಿಕೊಂಡರು ಇಬ್ಬರು ಸದಸ್ಯರಾದ, ಶ್ರೀ ಸಿ ಬಿ ಎಂ ಚಂದ್ರಯ್ಯ ಮತ್ತು ಶ್ರೀ ಎಸ್ ಡಿ ನಾಗರಾಜರನ್ನು ಕೈಬಿಡಲಾಯಿತು ಚಂದ್ರಯ್ಯನವರ ಸ್ಥಾನವಲ್ಲಿ ಮೈಸೂರಿನ ಶ್ರೀ ಸಿ ಬಿ ಮಹಾವೀರ ಪ್ರಸಾದ್ ಮತ್ತು ನಾಗರಾಜರ ಸ್ಥಾನದಲ್ಲಿ ಹೆಚ್ ಎನ್ ರಾಜೇಂದ್ರಕುಮಾರರು,ನೇಮಕಗೊಂಡರು ಈ ಒಗ್ಗೆ ತಾ॥ 14-5-80 ರಲ್ಲಿ ಸರ್ಕಾರದ ಆಜ್ಞೆ ಹೊರಬಿತ್ತು ಈ ಎಲ್ಲಾ ಮಾರ್ಪಾಟುಗಳೂ ಧರ್ಮಜ್ಞರಾದ ಸ್ವಾಮಿಜಿಯವರ ಸಲಹೆಯಂತೆ ನಡೆಯಿತು

**ಅಂದಾಜನ್ನು ಮೀರಿದ ಇನ್ನೊಂದು ವೆಚ್ಚ :**

ಈ ಸಮಯದಲ್ಲಿ ಚಂದ್ರಯ್ಯನವರು ತಮ್ಮ ಅಧಿಕಾರಾವಧಿ ಮುಗಿಯುತ್ತಿದ್ದರೂ ಅದರ ಕಡೆ ಗಮನ ಕೊಡದೆ, ಕಮಿಟಿಯ ಪಕ್ಷಗಳಲ್ಲಿ ನಡೆದಿರಬಹುದಾದ ಅಕ್ರಮಗಳನ್ನು ಪತ್ತೆ ಹಚ್ಚುವ ಕಾರ್ಯದಲ್ಲಿಯೇ ನಿರತರಾಗಿದ್ದರು ತಾ॥ 5-10-1979 ರಂದು ಇಂದೂರಿನಲ್ಲಿ ನಡೆದ ಕಮಿಟಿಯ ಸಭೆಯಲ್ಲಿ, ಜಕ್ಕಲವ್ವ ಬಸ್ತಿ, ಎರಡುಕಟ್ಟೆ ಬಸ್ತಿ, ಮತ್ತು ಸವತಿಗಂಧವಾರಣ ಬಸ್ತಿ ಇವುಗಳ ಜೀರ್ಣೋದ್ಧಾರಕ್ಕೆ ಮಾಡಿದ ಒಟ್ಟು ವೆಚ್ಚ 62·297-37 ರೂಪಾಯಿಗಳಿಗೆ ಅನುಮೋದನೆಯನ್ನು ಪಡೆಯಲಾಗಿತ್ತು ಈ ಮುಂಚೆ ಈಕಾರ್ಯಕ್ಕಾಗಿ ಆಯವ್ಯಯದಲ್ಲಿ ಮಂಜೂರು ಮಾಡಿದ್ದ ಒಟ್ಟು ಅಂದಾಜು ಮೊತ್ತ

27500-00 ರೂಪಾಯಿಗಳಾಗಿತ್ತು. ನಿಗದಿಯಾದ ಹಣಕ್ಕಿಂತಲೂ ಎರಡು ಪಟ್ಟು ಮೀರಿ ಹಣ ಅಧಿಕವಾಗಿ ವೆಚ್ಚವಾದಾಗ, ಚಂದ್ರಯ್ಯನವರು ಇದರ ಪರಿಶೀಲನೆಗೆ ಕೂಡಲೇ ತೊಡಗಿದರು. ಈ ಬಗ್ಗೆ ತಾ॥ 10-11-79 ರಂದು ಕಾರ್ಯದರ್ಶಿಯವರಿಗೆ ಒಂದು ಪತ್ರ ಬರೆದಿದ್ದರು. ಮುಂದೆ ತಾ॥ 11-12-1979 ರಂದು ಲೆಕ್ಕಪತ್ರಗಳ ಉಪಸಮಿತಿಯ ಛೇರ್ಮನ್ನರಾದ ಶಾಂತರಾಜರಿಗೆ ಒಂದು ಪತ್ರ ಬರೆದು ಮೇಲಿನ ಮೂರು ದೇವಸ್ಥಾನಗಳ ರಶೀದಿಗಳನ್ನು ಪರೀಕ್ಷಿಸಲು ಪ್ರಾರ್ಥಿಸಿದರು.

ಮೇನೇಜಿಂಗ್ ಕಮಿಟಿಯ ಎಲ್ಲಾ ಅಧಿಕಾರ ಸ್ಥಾನಗಳಿಗೂ ರಾಜೀನಾಮೆ ಸಲ್ಲಿಸಿ ಅವುಗಳ ಅಂಗೀಕಾರಕ್ಕಾಗಿ ಕಾಯುತ್ತಿದ್ದ ಶಾಂತರಾಜರಿಗೆ ಇನ್ನೊಮ್ಮೆ ಇನ್ನೊಂದು ಹಗರಣದ ವರದಿ ತಯಾರಿಸುವ ಉತ್ಸಾಹ ಉಂಟಾಗಲೇ ಇಲ್ಲ! ಇಷ್ಟು ಹೊತ್ತಿಗೆ ಅವರಿಗೆ ಮೇನೇಜಿಂಗ್ ಕಮಿಟಿ, ಛೇರ್ಮನ್, ಸದಸ್ಯ, ಉಪಸಮಿತಿಗಳ ಛೇರ್ಮನ್‌ಗಿರಿ ಮುಂತಾದ ಈ ಎಲ್ಲಾ ವಿಷಯಗಳ ಬಗೆಗೆ ಭ್ರಮನಿರಸನವಾಗಿತ್ತು! ಕ್ಷೇತ್ರದಲ್ಲಿ ಅಧಿಕಾರ-ಹಣ-ಅನಾಚಾರ-ಭ್ರಷ್ಟಾಚಾರಗಳ ಅರೆಗಳುಳ್ಳ ವಿಷಚಕ್ರ ಸುತ್ತುತ್ತಿರುವುದರ ಅನುಭವ ಶಾಂತರಾಜರಿಗೆ ಮನವರಿಕೆಯಾಗಿತ್ತು. ಈ ಕಹಿ ಅನುಭವದ ಹಿನ್ನೆಲೆಯಲ್ಲಿ ಕ್ಷೇತ್ರದ ಸಂಪರ್ಕವನ್ನು ಪೂರ್ಣವಾಗಿ ಕಳಚಿಕೊಳ್ಳಲು ಇಷ್ಟಪಟ್ಟರು. ತಾವು ಈ ಮೊದಲೇ ಸಲ್ಲಿಸಿದ್ದ ರಾಜೀನಾಮೆ ಇನ್ನೂ ಅಂಗೀಕೃತವಾಗಿಲ್ಲದ್ದರಿಂದ ಅವರು ಪುನಃ ತಾ 25-12-1979 ರಲ್ಲಿ ಛೇರ್ಮನ್ನರಾದ ಸ್ವಾಮಿಾಜಿಗೆ ತಮ್ಮ ರಾಜೀನಾಮೆಯ ಬಗ್ಗೆ ಪತ್ರ ಬರೆದು ತಮ್ಮ ಅಧಿಕಾರಾವಧಿ ತಾ॥ 31-12-79 ರಂದು ಮುಗಿಯಲಿರುವುದಾಗಿಯೂ, ತಾವು ಕಮಿಟಿಯಲ್ಲಿ ಮುಂದುವರಿಯಲಿಷ್ಟಪಡುವುದಿಲ್ಲವೆಂದೂ, ಆದ್ದರಿಂದ ಕಮಿಟಿಯಿಂದ ನಿರ್ಗಮಿಸುವ ತಮ್ಮ ಇಚ್ಛೆಯನ್ನು ಪುನರುಚ್ಚರಿಸುತ್ತಿರುವುದಾಗಿಯೂ, ಸಹಕಾರ ನೀಡಿದವರೆಲ್ಲರಿಗೂ ಮತ್ತೆ ಕೃತಜ್ಞತೆಗಳನ್ನು ಸಲ್ಲಿಸುತ್ತಿರುವುದಾಗಿಯೂ ತಿಳಿಸಿ ಕಮಿಟಿಯ ಸಂಪರ್ಕಗಳಿಗೆ ಪೂರ್ಣ ಮಂಗಳ ಹಾಡಿದರು

ಶಾಂತರಾಜರ ಪತ್ರವನ್ನು ಛೇರ್ಮನ್ನರು ತಾ॥ 6-1-1980 ರಂದು ನೇರವಾಗಿ ಸರ್ಕಾರದ ಎಂಡೋಮೆಂಟ್ಸ್ ಕಮಿಷನರಿಗೆ ರವಾನಿಸಿ ಅದರ ಬಗ್ಗೆ ತೆಗೆದುಕೊಂಡ ಕ್ರಮವನ್ನು ಕಮಿಟಿಗೆ ತಿಳಿಸಬೇಕೆಂದು ಕೇಳಿದರು. ಕರ್ನಾಟಕ ಸರ್ಕಾರ ಶಾಂತರಾಜರ ರಾಜೀನಾಮೆಯನ್ನು ತಾ॥ 14-5-80 ರಂದು ಅಂಗೀಕರಿಸಿತು. ಅದೇ ದಿನ ಶಾಂತ ರಾಜರ ಸ್ಥಾನದಲ್ಲಿ ಹಾಸನದ ಹೆಚ್ ಎಸ್ ನಾಗರತ್ನರಾಜರನ್ನು ಸದಸ್ಯರನ್ನಾಗಿ ನೇಮಿಸಿತು. ತಾ॥ 22-5-80 ರಂದು ಕಮಿಟಿಯ ಇಂಚಾರ್ಜ್ ಕಾರ್ಯದರ್ಶಿಯವರು ರಾಜೀನಾಮೆ ಅಂಗೀಕೃತವಾದ ಸುದ್ದಿಯನ್ನು ಶಾಂತರಾಜರಿಗೆ ತಿಳಿಸಿ, ಕ್ಷೇತ್ರದ ಬಗೆಗೆ ಅವರು ತೋರಿಸಿದ ಆತ್ಯಾಸಕ್ತಿಗಾಗಿ ಕೃತಜ್ಞತೆ ಸಲ್ಲಿಸಿದರು

**ಮುರಿಯದ ಸಂಬಂಧ :**

ಶಾಂತರಾಜರು ತಮ್ಮ ರಾಜೀನಾಮೆಯ ಅಂಗೀಕಾರಕ್ಕಾಗಿ ಒತ್ತಾಯಪಡಿಸಿದ ನಂತರವೂ, ಸ್ವಾಮೀಜಿಯವರೊಂದಿಗಿನ ಅವರ ಸಂಬಂಧಕ್ಕೆ ಯಾವ ಧಕ್ಕೆಯೂ ಉಂಟಾಗಲಿಲ್ಲ ! ಕಮಿಟಿಯಲ್ಲಿ, ನಂತರ ಅದರ ಹೊರಗೆ ಎಷ್ಟೆಲ್ಲಾ ಆಗುಹೋಗುಗಳು ನಡೆದಿದ್ದರೂ ಸಹ, ಶಾಂತರಾಜರು ಯಾವುದನ್ನೂ ಮನಸ್ಸಿಗೆ ಹಚ್ಚಿಕೊಂಡವರಲ್ಲ ಸ್ಥಿತಪ್ರಜ್ಞರ ಹಾಗೆ ಆ ಸಂದರ್ಭದಲ್ಲಿ ನಡೆದುಕೊಂಡರು ಅವರ ಸಮಚಿತ್ತತೆಯೇ ಸ್ವಾಮೀಜಿಯವರೊಂದಿಗಿನ ಅನ್ಯೋನ್ಯತೆ ಮುರಿಯದಿರಲು ಕಾರಣವಾಯಿತು ಶಾಂತರಾಜರ ಈ ಯೋಗಿಸದೃಶ ಮನೋಧರ್ಮವನ್ನು ಬೆಂಬಲಿಸುವ ಒಂದು ಪತ್ರವನ್ನು ಇಲ್ಲಿ ಗಮನಿಸಬಹುದು. ಈ ಪತ್ರವನ್ನು ತಾ॥ 14-1-1980 ರಂದು ಶ್ರೀ ಚಾರುಕೀರ್ತಿ ಸ್ವಾಮೀಜಿಯವರೇ ಸ್ವತಃ ತಮ್ಮ ಸ್ವಹಸ್ತಾಕ್ಷರದಲ್ಲಿ ಬರೆದಿದ್ದಾರೆ ಪತ್ರದ ಪೂರ್ಣಪಾಠ ಹೀಗಿದೆ

ತಾ॥ 14-1-1980

ಧರ್ಮಬಂಧು ಶ್ರೀ ಎಸ್ ಪಿ ಶಾಂತರಾಜ್, ಮೈಸೂರು
ಇವರಿಗೆ ಅನೇಕ ಶುಭಾಶೀರ್ವಾದಗಳು

ದಿನಾಂಕ 10-1-80 ರಂದು ಬರೆದ ಪತ್ರ ತಲುಪಿದೆ ನಿಮ್ಮ ಕ್ಷೇಮ ಸಮಾಚಾರ ತಿಳಿದು ಸಂತೋಷವಾಯಿತು ನಾವೂ ದೆಹಲಿಗೆ ಹೋಗಿ ಬಂದೆವು ಕಲಶ ವಿತರಣಾ ಸಮಿತಿ ಮೀಟಿಂಗ್ ಮತ್ತು ಪ್ರಚಾರ ಸಮಿತಿ ಮೀಟಿಂಗ್ ಯಶಸ್ವಿಯಾಗಿ ಜರುಗಿತು ತಂಡಿ ಹವಾದಿಂದ ಆರೋಗ್ಯ ಚನ್ನಾಗಿಲ್ಲ ಗಂಟಲು ನೋವಾಗಿ ಆಹಾರಕ್ಕೆ ಸ್ವಲ್ಪ ತೊಂದರೆಯಾಗಿದೆ ENT ಡಾಕ್ಟರ್‌ರಲ್ಲಿ ಮತ್ತೊಮ್ಮೆ ಪರೀಕ್ಷಿಸಬೇಕಾಗಿದೆ ಅತೀ ಆವಶ್ಯಕ ಕಾರ್ಯ ಪೂರೈಸಿಕೊಂಡು ಮೈಸೂರು ಅಥವಾ ಬೆಂಗಳೂರಿಗೆ ಹೋಗಬೇಕಾಗಿದೆ ಚಿಂತಿಸುವ ಅವಶ್ಯಕತೆ ಇಲ್ಲ

ದೆಹಲಿಯಿಂದ ವಾಪಸು ಬಂದಾಗ ಬೆಂಗಳೂರಲ್ಲಿ ನಿಮ್ಮ ಮೊಮ್ಮೊಗಳನ್ನು ನೋಡಿ, ಅಲ್ಲೇ ಆಹಾರ ಮಾಡಿ ಹರ್ಷವಾಯಿತು ನಿಮ್ಮ ಧರ್ಮಪತ್ನಿ ಶ್ರೀಮತಿ ನಾಗರತ್ನಮ್ಮನವರಿಗೂ ಮತ್ತು ಅಪ್ಪಿಗೂ ಆಶೀರ್ವಾದಗಳನ್ನು ತಿಳಿಸಿ

(ಸಹಿ)

ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ

ಶಾಂತರಾಜರ ಮತ್ತು ಸ್ವಾಮೀಜಿಯವರ ಈ ರೀತಿಯ ಸಂಬಂಧಕ್ಕೆ, ವಿದ್ಯಾನಂದ ಮುನಿಗಳು ಕರ್ನಾಟಕಕ್ಕೆ ಬಂದು ತಾ॥ 13-7-80 ರಂದು ಬೆಳ್ಳೂರಿಗೆ ಹೆಜ್ಜೆಯಿಡುವ ವರೆಗೂ ಯಾವ ರೀತಿಯ ತೊಡಕೂ ಉಂಟಾಗಿರಲಿಲ್ಲ

**ಕಮಿಟಿಯ ಚೊಕ್ಕಸಕ್ಕೆ ಕನ್ನ :**

ಮೇನೇಜಿಂಗ್ ಕಮಿಟಿಯಲ್ಲಿ ತಮ್ಮ ಸೂಚಿತ ನಿರ್ಣಯವನ್ನು ಕಡೆಗಣಿಸಿದ್ದು, ತತ್ವಬೋಧನೆಯನ್ನೇ ವೃತ್ತಿಯಾಗಿ ಉಳ್ಳವರಿಂದ ತಮ್ಮ ತತ್ವಬದ್ಧವಾದ ಆಕ್ಷೇಪಣೆ ಗಳು ಮೂಲೆಗುಂಪಾದದ್ದು, ಮುಂತಾದ ಘಟನೆಗಳಿಂದಾಗಿ ಚಂದ್ರಯ್ಯನವರು ನಿರು ತ್ಸಾಹಗೊಳ್ಳಲಿಲ್ಲ

ಈ ಸಂದರ್ಭದಲ್ಲಿ ಚಾರುಕೀರ್ತಿಯವರು ತಾ॥ 18-12-1979 ರಂದು ಚಂದ್ರಯ್ಯನವರಿಗೆ ಒಂದು ಪತ್ರ ಬರೆದು ಸರ್ಕಾರ ಮಠದ ಕೆಲವು ಸ್ವತ್ತುಗಳನ್ನು ಕೇವಲ ಆಡಳಿತ ಮತ್ತು ಅಭಿವೃದ್ಧಿಯ ಉದ್ದೇಶದಿಂದಾಗಿ ಕಮಿಟಿಗೆ ಕೊಟ್ಟಿದೆ ಎಂದು ಬರೆದು ಮಠದ ಅಧಿಕಾರವೇ ಮುಖ್ಯ ಎಂಬುದನ್ನು ಸ್ಥಾಪಿಸಲು ಪ್ರಯತ್ನಪಟ್ಟರು ಮತ್ತು ಆ ಪತ್ರದಲ್ಲಿ ಚಂದ್ರಯ್ಯನವರ ಬಗ್ಗೆ ಕೆಲವು ಆಕ್ಷೇಪಾರ್ಹವಾದ ಮಾತುಗಳನ್ನೂ ಸಹ ಬರೆದರು ಮಠವನ್ನು ಕಮಿಟಿಯ ಹತೋಟಿಗೊಳಪಡಿಸಬೇಕೆಂದು ಚಂದ್ರಯ್ಯ ನವರು ತಮ್ಮ ಸೂಚಿತ ನಿರ್ಣಯದಲ್ಲಿ ಪ್ರಸ್ತಾಪಿಸಿದ್ದು ಸ್ವಾಮೀಜಿಯನ್ನು ಕೆರಳಿಸಿತ್ತು ಇದು ಸಾಲದೆಂಬಂತೆ ಸ್ವಾಮೀಜಿ ತಾ॥ 20-12-80 ರಂದು ಮತ್ತೊಂದು ಬಹಳ ಆಕ್ಷೇಪಾರ್ಹವಾದ ಪತ್ರವನ್ನು ಚಂದ್ರಯ್ಯನವರಿಗೆ ಬರೆದರು ಈ ಪತ್ರದ ಶೈಲಿ ಭಟ್ಟಾರಕ ಸ್ಥಾನದ ಘನತೆ ಗೌರವಗಳಿಗೆ ಅನುಗುಣವಾಗಿಲ್ಲ !

ಸ್ವಾಮೀಜಿಯವರ ವರ್ತನೆಯಿಂದ ಚಂದ್ರಯ್ಯನವರಿಗೆ ಬಹಳ ಬೇಸರವುಂಟಾ ಯಿತು ಇದರಿಂದಾಗಿ ಶ್ರವಣಬೆಳಗೊಳ ಕ್ಷೇತ್ರದ ಹಣಕಾಸಿನ ಅವ್ಯವಹಾರಗಳು, ಆಡಳಿತದ ಅವ್ಯವಹಾರಗಳ ಕಡೆ ಅವರು ತೀವ್ರ ಗಮನ ಕೊಡುವಂತಾಯಿತು !

ಶ್ರವಣಬೆಳಗೊಳ ಕ್ಷೇತ್ರಕ್ಕೆ ಭಕ್ತರಿಂದ ಕಾಣಿಕೆ ದಾನರೂಪವಾಗಿ ಬರುವ ಎಲ್ಲಾ ಬಗೆಯ ಹಣವನ್ನೂ ಸ್ವೀಕರಿಸುವ ಪರಮಾಧಿಕಾರ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ಮಾತ್ರ ಇದೆ ಕಮಿಟಿಯ ನಿಯಮ 8ರಲ್ಲಿ ಉಪನಿಯಮ 2 (g), ನಿಯಮ 10ರಲ್ಲಿ ಉಪನಿಯಮ 6, ಮತ್ತು ನಿಯಮ 11ರ ವಿಷಯ (iv) (v) (vi) (viii) —ಇವುಗಳು ದಾನ ಕಾಣಿಕೆಗಳನ್ನು ಸ್ವೀಕರಿಸಲು ಕಮಿಟಿಗೆ ಮಾತ್ರ ಇರುವ ಪರ ಮಾಧಿಕಾರವನ್ನು ಸಂದೇಹಕ್ಕೆ ಅವಕಾಶವಿಲ್ಲದಂತೆ ಸ್ಪಷ್ಟಪಡಿಸುತ್ತವೆ ಮಠಕ್ಕೆ ಸಂಬಂಧ ಪಟ್ಟ ವ್ಯಕ್ತಿಗಳೇ ಆಗಲಿ ಅಥವಾ ಇನ್ನಾರೇ ಆಗಲಿ ಕ್ಷೇತ್ರದ ಪರವಾಗಿ ಹಣ ಸಂಗ್ರ

ಹೇಳಿದರೆ ಅದು ಕಾನೂನುಬಾಹಿರವಾದ ಕ್ರಮವಾಗುತ್ತದೆ ಇಂತಹ ವಸೂಲಿ ಕಾರ್ಯಗಳು ಗಮನಕ್ಕೆ ಬಂದಕೂಡಲೇ ಕಮಿಟಿಯ ಕಾರ್ಯದರ್ಶಿಯವರು, ಯಾವ ಬಗೆಯ ಮರ್ಜಿ ಅಥವಾ ದಾಕ್ಷಿಣ್ಯಕ್ಕೊಳಗಾಗದೆ ಕಮಿಟಿಯ ನಿಯಮಗಳನ್ನು ಭಂಗಪಡಿಸುವವರ ವಿರುದ್ಧ ತಮ್ಮ ಕರ್ತವ್ಯದಂತೆ ಕಾನೂನು ಕ್ರಮ ಕೈಗೊಳ್ಳಬೇಕಾಗುತ್ತದೆ

ಸರ್ಕಾರ ಹೀಗೆ ಕ್ಷೇತ್ರದ ಆದಾಯದ ವಿಚಾರದಲ್ಲಿ ಬಹು ಸ್ಪಷ್ಟವಾದ ನಿಯಮಗಳನ್ನು ಮಾಡಿದ್ದರೂ ಸಹ ಕಮಿಟಿಯ ಧರ್ಮಕರ್ತರೇ ಆದ ಮಠದ ಸ್ವಾಮೀಜಿಯವರು ಆ ನಿಯಮಗಳನ್ನು ರಾಜಾರೋಷವಾಗಿ ಧಿಕ್ಕರಿಸಿ ಮಠದ ಹೆಸರಿನಲ್ಲಿ ಕ್ಷೇತ್ರದ ಪರವಾಗಿ ಅಕ್ರಮವಾಗಿ ಹಣ ವಸೂಲು ಮಾಡುತ್ತಿರುವ ಅವ್ಯವಹಾರದ ಕೆಲವು ನಿದರ್ಶನಗಳು ಚಂದ್ರಯ್ಯನವರ ಗಮನಕ್ಕೆ ಬಹಳ ಹಿಂದೆಯೇ ಬಂದಿದ್ದವು

ಕ್ಷೇತ್ರದ ಯಾವುದೇ ಸಾಮಾಜಿಕ, ಧಾರ್ಮಿಕ ಮುಂತಾದ ಉತ್ಸವಗಳನ್ನು ಆಚರಿಸುವಾಗ, ಬಸದಿಗಳ ಜೀರ್ಣೋದ್ಧಾರ ಕಾರ್ಯಗಳನ್ನು ಮಾಡಿಸುವಾಗ ಅದರ ವೆಚ್ಚಗಳನ್ನೆಲ್ಲಾ ಮಠವೇನೂ ವಹಿಸಿಕೊಳ್ಳುವುದಿಲ್ಲ ಮಠ ಇದುವರೆಗೂ ಕ್ಷೇತ್ರದ ಯಾವ ಒಂದು ದೇವಸ್ಥಾನವನ್ನೇ ಆಗಲಿ ಜೀರ್ಣೋದ್ಧಾರ ಮಾಡಿಸಿದ ನಿದರ್ಶನವಿಲ್ಲ! ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲಾ ಅಭಿವೃದ್ಧಿ ಕಾರ್ಯಗಳ ವೆಚ್ಚವನ್ನು ಕಮಿಟಿಯೇ ಮಾಡುತ್ತಿದೆ ವಾಸ್ತವ ಸಂಗತಿ ಹೀಗಿರುವಾಗ ಕ್ಷೇತ್ರದ ಪ್ರತಿಯೊಂದು ಖರ್ಚಿಗೂ ಕಮಿಟಿಯ ಕಡೆ ಕೈತೋರಿಸುವ ಸ್ವಾಮೀಜಿಯವರು, ಕಮಿಟಿಗೆ ನ್ಯಾಯೋಚಿತವಾಗಿ ಬರಬೇಕಾದ ಹಣಕ್ಕೆ ತಾವೇಕೆ ಅಕ್ರಮವಾಗಿ ಕೈಚಾಚುತ್ತಿದ್ದಾರೆ? ಸ್ವಾಮೀಜಿಯವರು ಹೀಗೆ ಅಕ್ರಮವಾಗಿ ಸಂಗ್ರಹಿಸುತ್ತಿರುವ ಹಣವನ್ನೆಲ್ಲಾ ಏನು ಮಾಡುತ್ತಿದ್ದಾರೆ? ಸ್ವಾಮೀಜಿಯವರ ಈ ನಿಯಮಬಾಹಿರವಾದ ನಡವಳಿಕೆ ಕಮಿಟಿಯ ಬೊಕ್ಕಸಕ್ಕೆ ಹಾಕಿದ ಕನ್ನವಲ್ಲವೇ? 'ಸ್ವಾಮೀಜಿಯವರು ಆ ಹಣವನ್ನು ತಾವೇನೂ ಉಪಯೋಗಿಸಿಕೊಳ್ಳುವುದಿಲ್ಲ ಎಲ್ಲವನ್ನೂ ಕ್ಷೇತ್ರಾಭಿವೃದ್ಧಿಗೇ ಖರ್ಚು ಮಾಡುತ್ತಾರೆ ಹಣಕಾಸಿನ ವಿಚಾರದಲ್ಲಿ ಅವರು ಪರಿಶುದ್ಧ ಹಸ್ತರು' ಎಂದು ಹೇಳುವುದಾದರೆ, ಸ್ವಾಮೀಜಿಯವರು ಹಾಗೆ ಪರಿಶುದ್ಧರಾಗಿರುವುದು ನಿಜವಾದ ಪಕ್ಷದಲ್ಲಿ ಅವರು ಕಮಿಟಿಗೆ ಹೋಗುವ ಹಣವನ್ನು ತಮ್ಮ ಕಡೆ ತಿರುಗಿಸಿಕೊಳ್ಳದೆ ನಿಯಮದಂತೆ ಕಮಿಟಿಗೆ ಹೋಗಲು ಬಿಟ್ಟು, ನಂತರ ಲೆಕ್ಕ ವ್ಯವಸ್ಥೆಗೊಳಪಟ್ಟ ಕಮಿಟಿಯ ಹಣ ಕ್ರಮಬದ್ಧವಾಗಿ ಮಂಜೂರಾಗಿ ಕ್ಷೇತ್ರಾಭಿವೃದ್ಧಿಗೆ ವಿನಿಯೋಗವಾಗುವಂತೆ ಏಕೆ ನೋಡಿಕೊಳ್ಳಬಾರದು! ಇದರಲ್ಲಿ ತಪ್ಪೇನಿದೆ? ಹೇಗೂ ಕಮಿಟಿಯಲ್ಲಿರುವ ಹಣವನ್ನು ಕ್ಷೇತ್ರ ಬಿಟ್ಟು ಬೇರೆಲ್ಲೂ ಉಪಯೋಗಿಸುವ ಹಾಗೆಯೇ ಇಲ್ಲವಲ್ಲ! ಕಮಿಟಿಯ ಹಣ ಕ್ಷೇತ್ರಕ್ಕೆ ಮೀಸಲುತಾನೆ! ಆದರೆ ಸ್ವಾಮೀಜಿಯವರು ಕಮಿಟಿಯ ನಿಯಮದಂತೆ ನಡೆದುಕೊಳ್ಳುತ್ತಿಲ್ಲ! ಕಮಿಟಿಗೆ ಬರಬೇಕಾದ ಹಣವನ್ನು ತಾವು ಸಂಗ್ರಹಿಸುವುದನ್ನು ನಿಲ್ಲಿಸಿಲ್ಲ! ಇದನ್ನು ಹೇಗಾದರೂ ಮಾಡಿ

ತಡೆಗಟ್ಟಲೇಬೇಕು. ಸ್ವಾಮಿಜಿಯವರು ನಡೆಸುತ್ತಿರುವ ಅವ್ಯವಹಾರಗಳನ್ನು ಬಯಲಿ ಗೆಳೆಯಲೇಬೇಕು—ಎಂದು ಹೀಗೆಲ್ಲಾ ಹಿಂದೆ ಆಲೋಚಿಸಿದ್ದ ಚಂದ್ರಯ್ಯನವರು ತಾವು ಆಲೋಚಿಸಿದ ಕಾರ್ಯವನ್ನು ಮಾಡಿಯೂ ಇದ್ದರು

ಮಠವು ಕಮಿಟಿಯು ನಿಯಮಗಳನ್ನು ಅತಿಕ್ರಮಿಸಿ ಹಣ ಸಂಗ್ರಹಿಸಿದ ಕೆಲವು ಪ್ರಕರಣಗಳ ವಿವರಗಳನ್ನು ಚಂದ್ರಯ್ಯನವರು 1979 ರ ಅಕ್ಟೋಬರ್ ತಿಂಗಳಿನಲ್ಲಿಯೇ ಪತ್ತೆ ಮಾಡಿದ್ದರು ತಾವು ಬಹುಚಾಣಾಕ್ಷತನದಿಂದ ಕಂಡುಹಿಡಿದ ಈ ಅವ್ಯವಹಾರ ಗಳನ್ನು ತಾ॥ 26–10–1979 ರಂದು ಕಮಿಟಿಯ ವೈಸ್ ಛೇರ್ಮನ್ ಮತ್ತು ಪ್ರತಿಷ್ಠಿತ ಸದಸ್ಯರೊಬ್ಬರ ಗಮನಕ್ಕೂ ತಂದಿದ್ದರು ಅಲ್ಲದೆ ಕಮಿಟಿಯ ಪ್ರಮುಖ ಸಹಸದಸ್ಯರು ಗಳಿಗೂ ಅದರ ಪ್ರತಿಗಳನ್ನು ಕಳುಹಿಸಿಕೊಟ್ಟಿದ್ದರು

ಮಠದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಚಂದ್ರಯ್ಯನವರು ಅಂದು ಮೊಟ್ಟ ಮೊದಲನೆಯ ಬಾರಿಗೆ ಬಹಿರಂಗಪಡಿಸಿದ ಪತ್ರದ ಮುಖ್ಯ ಸಂಗತಿಗಳು ಕೆಳಗಿವೆ

ತಾ॥ 26–10–1979

ಶ್ರೀ ಸೇಟ್ ಲಾಲ್‌ಚಂದ್ ಹೀರಾಚಂದ್‌ಜಿ, (ಬೊಂಬಾಯಿ)

ಶ್ರೀ ಸಾಹು ಶ್ರೇಯಾಂಸಪ್ರಸಾದ್ ಜೈನ್‌ಜಿ, (ಬೊಂಬಾಯಿ)

1 ನಾನು ಕೇಳಿರುವಂತೆ ವಿದ್ಯಾನಂದನಿಲಯ ಧರ್ಮಶಾಲೆ ಪ್ರತಿ ತಿಂಗಳು 10,000 ರೂಪಾಯಿಗೂ ಮೀರಿ ಸಂಗ್ರಹಿಸುತ್ತಿದೆ ಇಲ್ಲಿ ಕ್ಷೇತ್ರಾಭಿವೃದ್ಧಿಗಾಗಿ ಭಕ್ತರಿಂದ ವಂತಿಗೆಯನ್ನು ಸ್ವೀಕರಿಸಿ ರಶೀದಿಯನ್ನು ಮಠದ ಹೆಸರಿನಲ್ಲಿ ಕೊಡಲಾಗುತ್ತದೆ ರಶೀದಿಯಲ್ಲಿ ಅಭಿವೃದ್ಧಿಕಾರ್ಯ, ಮಹಾಮಸ್ತಕಾಭಿಷೇಕ, ಜೀರ್ಣೋದ್ಧಾರ, ಭಂಡಾರ ಮುಂತಾದವನ್ನು ಒಳಗೊಂಡಂತೆ ಹದಿಮೂರು ವಿಷಯಗಳಿವೆ ಆದರೆ ಈ ವಿಷಯಗಳನ್ನು ಮೇನೇಜಿಂಗ್ ಕಮಿಟಿಯ ಗಮನಕ್ಕೆ ತಂದಿಲ್ಲ

2 ದೊಡ್ಡ ಮೊತ್ತದ ವಂತಿಗೆಗಳಿಗೆ ರಶೀದಿಗಳನ್ನು ಕೊಟ್ಟಿಲ್ಲ ಈ ಉದ್ದೇಶ ಕ್ಕಾಗಿಯೇ ಇಟ್ಟಿರುವ ಪ್ರತ್ಯೇಕ ದಾನದ ಪುಸ್ತಕಗಳಲ್ಲಿ ಇವುಗಳನ್ನು ನಮೂದಿಸ ಲಾಗಿದೆ ನನ್ನ ಅಂದಾಜಿನಂತೆ ಇಂತಹ ವಂತಿಗೆಗಳು ತಿಂಗಳಿಗೆ 50,000 ರೂಪಾಯಿ ಗಳಷ್ಟು ಮೀರಬಹುದು ಉದಾಹರಣೆಗೆ ತಾ॥ 25-8-79 ರಲ್ಲಿ ನವದೆಹಲಿಯ ಶ್ರೀ ಶೀಲ್‌ಚಂದ್ ಜೈನ್, 2743 - ನಯಾಬಜಾರ್ ದೆಹಲಿ — ಎಂಬುವರು 20,000 ರೂಪಾಯಿಗಳನ್ನು ದಾನ ಮಾಡಿದ್ದಾರೆ. ಮತ್ತು ತಾ॥ 18-9-1979 ರಲ್ಲಿ ಶ್ರೀಮತಿ

ಶರಬತಿ ದೇವಿ ಕೀರಾಫ್ ಮುನಿಲಾಲ್ ರಮುತ್ತಲಾಲ್‌ಜೈನ್ ಮೆಯಿನ್ ಬಜಾರ್, ಡಾಲ್ಟನ್‌ಗಂಜ್ 8222101 ಬಿಹಾರ್—ಇವರು 23,000 ರೂಪಾಯಿಗಳನ್ನು ದಾನ ಮಾಡಿದ್ದಾರೆ ಆದರೆ ನಾನು ತಿಳಿದಂತೆ ಈ ದಾನಗಳ ಸಂಗತಿ ಕಮಿಟಿಯ ಮೇನೇಜ್ ಮೆಂಟಿನ ಗಮನಕ್ಕೆ ಬಂದಿಲ್ಲ ಹಾಗೂ ಕಮಿಟಿಯ ಲೆಕ್ಕಪತ್ರಗಳಲ್ಲಿ ದಾಖಲಾಗಿಲ್ಲ

3 1979 ಏಪ್ರಿಲ್‌ನಲ್ಲಿ ನಡೆದ ರಥೋತ್ಸವದ ಸಮಯದಲ್ಲಿ ಷಡ್ಯೂಲ್ ನಲ್ಲಿರುವ ಮಠದ ಬಸ್ತಿಯ ಪ್ರತಿನಿತ್ಯದ ಪೂಜೆಗಾಗಿ ಒಬ್ಬೊಬ್ಬ ಭಕ್ತರಿಂದ 150 ರೂಪಾಯಿಗಳಂತೆ ಸಂಗ್ರಹಿಸಿದ್ದಾರೆ ಇದರ ಒಟ್ಟು ಸಂಗ್ರಹ 60 000 ರೂಪಾಯಿ ಗಳು ಮಠದ ಬಸ್ತಿಯು ಕಮಿಟಿಯ ಆಸ್ತಿಯಾದ್ದರಿಂದ ಈ ಹಣ ಮೇನೇಜಿಂಗ್ ಕಮಿಟಿಯ ನಿಧಿಗೆ ಹೋಗಬೇಕಾಗಿತ್ತು ಆದರೆ ಅದು ಕಮಿಟಿಗೆ ಜಮೆಯಾಗಿಲ್ಲ !

ಈ ರೀತಿ ಕ್ಷೇತ್ರದ ಅಭಿವೃದ್ಧಿಗಾಗಿ ಮತ್ತು ಪೂಜೆಗಾಗಿ ಸಂಗ್ರಹಿಸಿದ ನಿಧಿಯನ್ನು ಕಮಿಟಿಯ ನಿಧಿಯಿಂದ ಹೊರಗಿಡಲಾಗಿದೆ. ಈ ದಾನಗಳಿಗೂ ನನಗೆ ತಿಳಿದಂತೆ ಕಮಿ ಟಿಯರಶೀದಿಗಳನ್ನು ಕೊಟ್ಟಿಲ್ಲ ಇದನ್ನು ಪ್ರತ್ಯೇಕವಾದ ಪುಸ್ತಕವೊಂದರಲ್ಲಿ ನಮೂದಿಸಿ ಇಟ್ಟುಕೊಳ್ಳಲಾಗಿದೆ ಕೆಲವು ವಂತಿಗೆಗಳನ್ನು ದಾಖಲೆಯಿಲ್ಲದೆಯೇ ತೆಗೆದುಕೊಂಡಿರುವ ಸಂದೇಹವೂ ನನಗಿದೆ ಮೇನೇಜಿಂಗ್ ಕಮಿಟಿಗೆ ಈ ಯಾವ ನಿಧಿಯನ್ನೂ ಹಸ್ತಾಂತರ ಮಾಡಿಲ್ಲ ಮತ್ತು ಅದರ ಗಮನಕ್ಕೂ ಸಹ ತಂದಿಲ್ಲ ಆದ್ದರಿಂದ ಯಾವ ಉದ್ದೇಶ ಕ್ಕಾಗಿ ಈ ದಾನಗಳನ್ನು ನೀಡಿದ್ದಾರೋ ಅದಕ್ಕಾಗಿ ಈ ಹಣವನ್ನು ಖರ್ಚು ಮಾಡಿಲ್ಲ ವೆಂದು ನನಗನ್ನಿಸುತ್ತಿದೆ

ಮಠದ ಈ ಮನೋಧರ್ಮ ಮತ್ತು ನಡವಳಿಕೆಗಳು ಅಕ್ರಮವಾದುವುಗಳೆಂದು ನಾನು ಭಾವಿಸುತ್ತೇನೆ ಅಲ್ಲದೆ ಇದು ಮೇನೇಜಿಂಗ್ ಕಮಿಟಿಯ ದೃಷ್ಟಿಯಿಂದ ಹಣದ ದುರುಪಯೋಗಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ, ಸಂಸ್ಥೆ ಮತ್ತು ಕ್ಷೇತ್ರದ ಹಿತ ದೃಷ್ಟಿಯಿಂದ, ಕ್ಷೇತ್ರಾಭಿವೃದ್ಧಿ ಮತ್ತು ಪೂಜೆಯ ಎಲ್ಲಾ ವಿಧವಾದ ನಿಧಿಯ ಸಂಗ್ರ ಹಣೆಯನ್ನು ಷಡ್ಯೂಲ್‌ಗಳ ನಿಯಮಗಳಿಗನುಸಾರವಾಗಿ ಮೇನೇಜಿಂಗ್ ಕಮಿಟಿಯ ಹೆಸರಿನಲ್ಲಿಯೇ ಮಾಡಬೇಕು ಮತ್ತು ಅದರ ಹೆಸರಿನಲ್ಲಿಯೇ ರಶೀದಿಯನ್ನು ಕೊಡ ಬೇಕು ಹೀಗೆ ಹಣವೆಲ್ಲಾ ಮೇನೇಜಿಂಗ್ ಕಮಿಟಿಯ ನಿಧಿಗೇ ಹೋಗುವಂತೆ ಮಾಡ ಬೇಕಾಗಿದೆ

ಆದರಣೀಯ ಸೇಟ್‌ಜೀಯವರೇ ತಮ್ಮ ಅಮೂಲ್ಯವಾದ ಸಮಯವನ್ನು ತೆಗೆದುಕೊಂಡು ಇವುಗಳನ್ನೆಲ್ಲಾ ತಮ್ಮ ಮುಂದಿಟ್ಟುದಕ್ಕಾಗಿ ದಯವಿಟ್ಟು ಕ್ಷಮಿಸಿ ಮನಸ್ಸನ್ನು ದಹಿಸುವಂತಹ ಈ ಎಲ್ಲಾ ಸಂಗತಿಗಳನ್ನು ಇನ್ನು ಮುಂದೆ ನನ್ನಲ್ಲಿಯೇ

ಇಟ್ಟುಕೊಳ್ಳಲಾರೆ. ಆದ್ದರಿಂದ ಕ್ಷೇತ್ರದ ಹಿತಾಸಕ್ತಿ ವಹಿಸಿ ಇವುಗಳೆನ್ನೆಲ್ಲಾ ಸರಿಪಡಿ ಸಲು ಸೂಕ್ತ ಕ್ರಮವನ್ನು · ತಾವು ಕೈಗೊಳ್ಳುತ್ತೀರೆಂಬ ಆಶಾಭಾವನೆಯಿಂದ ಈ ವ್ಯವ ಹಾರಗಳನ್ನೆಲ್ಲಾ ತಮ್ಮ ಗಮನಕ್ಕೆ ತಂದಿದ್ದೇನೆ ತೊಂದರೆ ಕೊಟ್ಟುದಕ್ಕಾಗಿ ಕ್ಷಮಿಸಿ

ತಮ್ಮ ವಿಶ್ವಾಸಿ,
(ಸಹಿ)

ತಾ॥ 26–10–1979 ಸಿ. ಬಿ. ಎಂ ಚಂದ್ರಯ್ಯ

ಮೇಲಿನ ಪತ್ರದಲ್ಲಿ ಅಡಕವಾಗಿರುವ ದೊಡ್ಡ ಮೊತ್ತದ ವಂತಿಗೆಯ ವಿವರಗಳನ್ನು ಚಂದ್ರಯ್ಯನವರು ತಾ॥ 7-10-1979 ರಂದು ಸಂಗ್ರಹಿಸಿದ್ದರು ಅಕ್ರಮವಾಗಿ ವಂತಿಗೆ ಗಳನ್ನು ಸಂಗ್ರಹಿಸುತ್ತಿರುವ ಸುಳಿವನ್ನು ತಿಳಿದಿದ್ದ ಚಂದ್ರಯ್ಯನವರು ತಾ॥ 7-10-79 ರಂದು ವಿದ್ಯಾನಂದ ನಿಲಯಕ್ಕೆ ಹೋಗಿ ಅಲ್ಲಿ ಆಗ ವ್ಯವಸ್ಥಾಪಕರಾಗಿದ್ದ ದೇವಕುಮಾರ ಶಾಸ್ತ್ರಿಯವರಿಗೆ 1981 ರ ಮಹಾಮಸ್ತಕಾಭಿಷೇಕದ ವಿಷಯಕ್ಕೆ ರಮೇಶ್‌ಜೈನ್ ಎಂಬು ವರ ಪರವಾಗಿ ಹನ್ನೊಂದು ರೂಪಾಯಿಗಳನ್ನು ಕೊಟ್ಟು ರಶೀದಿ ಹಾಕಿಸಿದರು ಈ ರಶೀದಿಯ ನಂ 1631

ಆ ಸಂದರ್ಭದಲ್ಲಿ ದೇವಕುಮಾರ ಶಾಸ್ತ್ರಿಯವರು, ಚಂದ್ರಯ್ಯನವರ ಪರಿಚಯ ವಿದ್ದುದರಿಂದ ಕ್ಷೇತ್ರಕ್ಕೆ ಯಾತ್ರಿಕರಿಂದ ಹೆಚ್ಚು ಹೆಚ್ಚು ದಾನ ಬರುತ್ತಿದೆ ಎಂದು ಪ್ರಾಸಂಗಿಕವಾಗಿ ಹೇಳಿದರು ಚಂದ್ರಯ್ಯನವರು ನಿದರ್ಶನವನ್ನು ತೋರಿಸಿ ಎಂದು ಕೇಳಿದಾಗ ಶಾಸ್ತ್ರಿಯವರು ತಮ್ಮ ಬಳಿಯಿದ್ದ ಎರಡು ವಂತಿಗೆ ವಿವರಗಳ ಪುಸ್ತಕಗಳಲ್ಲಿ ಒಂದು ಪುಸ್ತಕವನ್ನು ತೋರಿಸಿದರು ಆ ಪುಸ್ತಕವನ್ನು ಹಾಗೇ ತಿರುವಿ ಹಾಕಿದ ಚಂದ್ರಯ್ಯನವರು, ತಾವು ಹಾಕಿಸಿದ್ದ 1631 ನೇ ನಂಬರಿನ ರಶೀದಿಯ ಹಿಂಭಾಗದಲ್ಲಿ 20 000 ರೂಪಾಯಿ ಮತ್ತು 23,000 ರೂಪಾಯಿಗಳನ್ನು ವಂತಿಗೆ ಕೊಟ್ಟವರ ವಿಳಾಸ ತಾರೀಖುಗಳನ್ನು ಗುರುತುಹಾಕಿಕೊಂಡರು ಇದು ತಾ॥ 7-10-79 ರಂದು ವಿದ್ಯಾನಂದ ನಿಲಯದಲ್ಲಿ ನಡೆದ ಪ್ರಸಂಗ

ಈ ಪ್ರಸಂಗದಲ್ಲಿ ಪ್ರಸ್ತಾಪಿಸಲಾಗಿರುವ ಒಟ್ಟು 43,000 ರೂಪಾಯಿಗಳ ದೊಡ್ಡ ವಂತಿಗೆ ನಿಜವಾಗಿಯೂ ಕಮಿಟಿಯ ಬೊಕ್ಕಸಕ್ಕೆ ಬರಬೇಕಾಗಿತ್ತು ಆದರೆ ಕಮಿಟಿಯ ನಿಯಮಗಳನ್ನು ಧಿಕ್ಕರಿಸಿ ಮಠ ಅದನ್ನು ಅಕ್ರಮವಾಗಿ ಸ್ವೀಕರಿಸಿದೆ. ಇದ ರಷ್ಟೇ ಮುಖ್ಯವಾದ ಸಂಗತಿಯೆಂದರೆ 1981 ರ ಮಹಾ ಮಸ್ತಕಾಭಿಷೇಕದ ವಿಷಯ ದಲ್ಲಿ, ಮಠದ ಹೆಸರಿರುವ ರಶೀದಿ ಪುಸ್ತಕಗಳಿಂದ ಅಕ್ರಮವಾಗಿ ಹಣವನ್ನು ಸಂಗ್ರಹಿಸು ತ್ತಿರುವುದು. ಮಹಾಮಸ್ತಕಾಭಿಷೇಕಗಳನ್ನು ನಡೆಸುವ ಮತ್ತು ಅದಕ್ಕಾಗಿ ಹಣ ಸಂಗ್ರ

ಹಿಸುವ ಹಕ್ಕು ಕಮಿಟಿಯ ನಿಯಮ 8 ಉಪನಿಯಮ 2 (b) ಪ್ರಕಾರ ಸಂಪೂರ್ಣವಾಗಿ ಕಮಿಟಿಯದು ಆದರೆ ಮಠ ಈ ನಿಯಮವನ್ನು ರಾಜಾರೋಷವಾಗಿ ಉಲ್ಲಂಘಿಸಿ 1978 ನೇ ವರ್ಷಕ್ಕಿಂತ ಹಿಂದಿನಿಂದಲೂ, 1981 ನೇ ವರ್ಷದ ಮಹಾಮಸ್ತಕಾಭಿಷೇಕ ಕ್ಕಾಗಿ ಅಕ್ರಮವಾಗಿ ಹಣ ಸಂಗ್ರಹಿಸುತ್ತಿದೆ ಹೀಗೆ ಅನೇಕ ವರ್ಷಗಳಿಂದ ಅಕ್ರಮವಾಗಿ ಸಂಗ್ರಹಿಸಿರುವ ಬಹು ದೊಡ್ಡ ಮೊತ್ತದ ಹಣವೆಲ್ಲಾ ಏನಾಯಿತೆಂಬುದು ಚಿದಂಬರ ರಹಸ್ಯವಾಗಿದೆ ! ಈ ಹಗಲು ದರೋಡೆಯನ್ನು ಮೇನೇಜಿಂಗ್ ಕಮಿಟಿಯಲ್ಲಿ ಹಿಂದೆಲ್ಲಾ ಇದ್ದ ಅಥವಾ ಈಗ ಇರುವ ಯಾವ ಕಾರ್ಯದರ್ಶಿಯವರೇ ಆಗಲಿ ತಡೆಗಟ್ಟಲು ಪ್ರಯತ್ನಿಸಿಯೇ ಇಲ್ಲ ! ಅಥವಾ ಕಮಿಟಿಯ ಜೀವನಾಡಿಗಳಾದ ಇನ್ನಿತರ ಯಾವ ಸದಸ್ಯರೇ ಆಗಲಿ ಈ ಅಕ್ರಮಸಂಗತಿಗಳನ್ನು ನಿಲ್ಲಿಸಲು ಸೂಕ್ತ ಕ್ರಮಗಳನ್ನು ಕೈಗೊಂಡಿಲ್ಲ !

ಹೀಗೆಯೇ ಜೀರ್ಣೋದ್ಧಾರ, ಪೂಜೆ, ಭಂಡಾರ ಮುಂತಾದ ವಿಷಯಗಳಿ ಗಾಗಿಯೂ ಸಂಗ್ರಹವಾದ ಹಣದ ವಿಚಾರದಲ್ಲೂ ಮಠವು ಮೇಲಿನಂತೆಯೇ ನಡೆದು ಕೊಂಡಿದೆ ಮಠವು ಅನೇಕ ವರ್ಷಗಳಿಂದಲೂ ಜೀರ್ಣೋದ್ಧಾರದ ಹೆಸರಿನಲ್ಲಿ ಹಣ ವನ್ನು ಅಕ್ರಮವಾಗಿ ಸಂಗ್ರಹಿಸುತ್ತಿದೆ ಹೋಗಲಿ ಇದುವರೆಗೂ ಹೀಗೆ ಅಕ್ರಮವಾಗಿ ಸಂಗ್ರಹಿಸಿರುವ ಹಣದಿಂದಲಾದರೂ ಅದು ಒಂದು ದೇವಸ್ಥಾನವನ್ನಾದರೂ ಜೀರ್ಣೋ ದ್ಧಾರ ಮಾಡಿಸಿಲ್ಲ ಇದುವರೆಗೆ ಆಗಿರುವ ಜೀರ್ಣೋದ್ಧಾರ ಕಾರ್ಯಗಳನ್ನೆಲ್ಲಾ ಕಮಿಟಿಯವರು ಮತ್ತು ಸಾರ್ವಜನಿಕರು ಮಾಡಿಸಿದ್ದಾರೆ. ಜೀರ್ಣೋದ್ಧಾರದ ಹೆಸರಿ ನಲ್ಲಿ ಮಠ ಸಂಗ್ರಹಿಸಿರುವ ಹಣವೆಲ್ಲಾ ಏನಾಯಿತೆಂಬುದೂ ಸಹ ಚಿದಂಬರ ರಹಸ್ಯ ವಾಗಿಯೇ ಉಳಿದಿದೆ !

ಮೇಲಿನ ಈ ಎಲ್ಲಾ ಅಕ್ರಮ ವ್ಯವಹಾರಗಳು ಸಂಗತಿಗಳು ಚಂದ್ರಯ್ಯನವರ ಗಮನಕ್ಕೆ ಬಂದು, ಪವಿತ್ರ ಹೃದಯದಿಂದ ಕ್ಷೇತ್ರಾಭಿವೃದ್ಧಿಗಾಗಿ ದಾನಿಗಳು ಕೊಡುವ ಹಣ ಮಠದ ಹೆಸರಿನಲ್ಲಿ ಲೂಟಿಯಾಗದಿರಲಿ ಎಂಬ ಉದ್ದೇಶದಿಂದ ತಾ॥ 26-10-79ರ ಪತ್ರವನ್ನು ಬೊಂಬಾಯಿನ ಇಬ್ಬರು ಪ್ರಮುಖರಿಗೆ ಬರೆದರು

ಚಂದ್ರಯ್ಯನವರ ಪತ್ರ ಶ್ರೇಯಾಂಸ ಪ್ರಸಾದ್ ಜೈನರಿಗೆ ತಲುಪಿತು ಅವರು ತಾ॥ 8-11-1979 ರಂದು ಚಂದ್ರಯ್ಯನವರಿಗೆ ಉತ್ತರ ಬರೆದು, ಚಂದ್ರಯ್ಯನವರ ದೂರು ಪತ್ರಗಳನ್ನೆಲ್ಲಾ ನೇರವಾಗಿ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರಿಗೆ ರವಾನಿಸಿರುವುದಾಗಿ ತಿಳಿಸಿದರು

ಚಂದ್ರಯ್ಯನವರು ಮಠದ ಮೇಲೆ ಮಾಡಿರುವ ದೂರಿನ ಪತ್ರಗಳೆಲ್ಲಾ ಚಾರು

॥ भगवान श्री बाहुबली स्वामी की जय ॥



# श्री जैन मठ, श्रवणबेलगोला



हासन कर्नाटक (भारत)

श्री जैन मठ 25 मुनि विद्यानंद निलय 24

क्रमांक 1631 दिनांक 7 10 1979

श्री रमेश जैन

बेंगलूर से

कृतज्ञतापूर्वक स्वीकार।

| | रु | पै |
|---|---|---|
| १ मण्डार | | |
| २ जीर्णोद्धार | | |
| ३ धर्मशाला | | |
| ४ अतिथि सत्कार | | |
| ५ त्यागीजन सेवा | | |
| ६ पूजा | | |
| ७ ताडपत्र ग्रंथ संरक्षण | | |
| ८ पुस्तक भण्डार | | |
| ९ प्रकाशन विभाग | | |
| १० धर्मचक्र वन अभिवृद्धि | | |
| ११ १९८१ में महामस्तकाभिषेक | 11 | 00 |
| १२ अकलंक ज्योति | | |
| १३ भरत संगीत परिषद | | |
| टोटल | 11 | 00 |

अक्षरों में (रुपये) ग्यारह

व्यवस्थापक

ಈ ರಶೀದಿಯು ಹಿವರಗಳಿಗೆ ಪುಟ ತಿರುಗಿಸಿನೋಡಿ

ಚಂದ್ರಯ್ಯನವರು ಮಠ ಮಾಡುತ್ತಿರುವ ಕಳ್ಳತನವನ್ನು ಪತ್ತೆ ಮಾಡಿದ ರಶೀದಿ 1981 ರ ಮಹಾಮಸ್ತಕಾಭಿಷೇಕದ ಹೆಸರಿನಲ್ಲಿ 11 ರೂಪಾಯಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ನಿಯಮಗಳಿಗೆ ವಿರುದ್ಧವಾಗಿ ಈ ಹಣವನ್ನು ಸಂಗ್ರಹಿಸಲಾಗಿದೆ ಈ ರಶೀದಿಯು ಹಿಂಭಾಗದಲ್ಲಿಯೇ ಮಠದವರು ಅಕ್ರಮವಾಗಿ ಸಂಗ್ರಹಿಸಿರುವ ವಂತಿಗೆಗಳ ವಿಚಾರವನ್ನು ಚಂದ್ರಯ್ಯನವರು ಗುರುತು ಹಾಕಿಕೊಂಡಿದ್ದು. ಚಂದ್ರಯ್ಯನವರಿಗೆ ಈ ವಂತಿಗೆಗಳ ಗೋಪ್ಯ ಪುಸ್ತಕವನ್ನು ತೋರಿಸಿದ್ದರಿಂದಾಗಿ ಈ ರಶೀದಿಯಲ್ಲಿ ರುಜುಮಾಡಿರುವ ದೇವಕುಮಾರಶಾಸ್ತ್ರಿಯವರು ತಮ್ಮ ವಿದ್ಯಾನಂದ ನಿಲಯದ ಉದ್ಯೋಗವನ್ನು ಕಳೆದುಕೊಳ್ಳಬೇಕಾಯಿತು!

ಮಠದವರು ಹಿಂದಿಯಲ್ಲಿ ಮುದ್ರಿಸಿರುವ ಈ ಅಕ್ರಮ ರಶೀದಿ ಪುಸ್ತಕದಲ್ಲಿ ಹದಿಮೂರು ಬಾಬ್ತುಗಳಿವೆ 1] ಭಂಡಾರ 2] ಜೀರ್ಣೋದ್ಧಾರ 3] ಧರ್ಮಶಾಲೆ 4] ಅತಿಥಿಸತ್ಕಾರ 5] ತ್ಯಾಗಿಜನಸೇವೆ 6] ಪೂಜೆ 7] ತಾಡಪತ್ರ ಗ್ರಂಥಸಂರಕ್ಷಣೆ 8] ಪುಸ್ತಕಭಂಡಾರ 9] ಪ್ರಕಾಶನ ವಿಭಾಗ 10] ಧರ್ಮಚಕ್ರವನ ಅಭಿವೃದ್ಧಿ 11] 1981 ರಲ್ಲಿ ಮಹಾಮಸ್ತಕಾಭಿಷೇಕ 12] ಅಖಂಡಜ್ಯೋತಿ 13] ಭರತ ಸಂಗೀತ ಪರಿಷತ್

ಕ್ಷೇತ್ರಕ್ಕೆ ಬರುವ ಯಾತ್ರಿಕರಿಂದ ಮತ್ತು ದಾನಿಗಳಿಂದ ಕ್ಷೇತ್ರಾಭಿವೃದ್ಧಿಗಾಗಿ ಹಣ ಸಂಗ್ರಹ ಮಾಡುವ, ಅದನ್ನು ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗ ಮಾಡುವ ಸಂಪೂರ್ಣ ಹಕ್ಕು ಸರಕಾರ ರೂಪಿಸಿರುವ ನಿಯಮಗಳ ಪ್ರಕಾರ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ಮಾತ್ರ ಮೀಸಲು ಕಾನೂನು ಹೀಗಿರುವಾಗ ಮಠದ ಸ್ವಾಮಿಗಳು ಈ ಹಣ ಸಂಗ್ರಹಣೆಯ ಅಧಿಕಾರವನ್ನು ತಾವು ಕಸಿದುಕೊಂಡು, ಕ್ಷೇತ್ರಕ್ಕೆ ಹರಿದು ಬರುತ್ತಿರುವ ಹಣವನ್ನೆಲ್ಲಾ ಮೇಲಿನಂತಹ ರಶೀದಿಗಳ ಮೂಲಕ ತಮ್ಮ ಕಡೆಗೆ ತಿರುಗಿಸಿಕೊಂಡಿದ್ದರೂ ಕಮಿಟಿಯ ಕಾರ್ಯದರ್ಶಿಯವರು ಕಣ್ಣುಮುಚ್ಚಿ ಕುಳಿತಿದ್ದಾರೆ! ಕಮಿಟಿಯ ಸದಸ್ಯರು ಈ ಹಗಲು ದರೋಡೆಯನ್ನು ಕಂಡೂ ಕಾಣದವರಂತೆ ತೆಪ್ಪಗಿದ್ದಾರೆ

ಕೀರ್ತಿಯವರನ್ನು ತಲುಪಿದ ಕೂಡಲೇ ಅವರ ಮನಸ್ಥಿತಿ ಏನಾಗಿರಬಹುದೆಂಬುದನ್ನು ಊಹಿಸಲು ಓದುಗರಿಗೇ ಬಿಡುತ್ತೇನೆ ಸ್ವಾಮಿಜಿಯವರ ಮೊದಲನೆಯ ಪ್ರಹಾರ ದೇವಕುಮಾರ ಶಾಸ್ತ್ರಿಯವರ ಮೇಲೆರಗಿತು! ವಿದ್ಯಾನಂದ ನಿಲಯದಲ್ಲಿ ವ್ಯವಸ್ಥಾಪಕ ರಾಗಿದ್ದುಕೊಂಡು ಮಠದ ಹೆಸರಿನಲ್ಲಿ ಸ್ವಾಮಿಜಿಯವರ ಪರವಾಗಿ ಹಣ ವಸೂಲಿ ಮಾಡಿಕೊಡುತ್ತಿದ್ದ ದೇವಕುಮಾರ ಶಾಸ್ತ್ರಿಯವರ ಹುದ್ದೆಗೆ ಅರ್ಧಚಂದ್ರ ಪ್ರಯೋಗ ವಾಯಿತು ! ಅನೇಕ ವರ್ಷಗಳಿಂದ ಕ್ಷೇತ್ರಕ್ಕೆ ಪರಿಶುದ್ಧ ಹೃದಯದಿಂದ ಸೇವೆ ಸಲ್ಲಿಸಿದ ಶಾಸ್ತ್ರಿಯವರು ವಿದ್ಯಾನಂದ ನಿಲಯದಲ್ಲಿ ಕೆಲಸ ಕಳೆದುಕೊಂಡ ಮೇಲೆ ಬೆಂಗಳೂರಿಗೆ ಹೋಗಿ "ಶ್ರೀ ದಿಗಂಬರ ಜೈನ ಸ್ವಾಧ್ಯಾಯ ಮಂಡಲ ಟ್ರಸ್ಟ್" ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿದರು

ಅಂತೂ ಚಂದ್ರಯ್ಯನವರು ಬೊಂಬಾಯಿನ ಪ್ರಮುಖರಿಗೆ ಪತ್ರ ಬರೆದದ್ದು ಅರಣ್ಯರೋಧನವಾಯಿತು ಕೋಣಗಳ ಮುಂದೆ ಕಿನ್ನರಿ ಬಾರಿಸಿದಂತಾಯಿತು ! ಈ ತಾತ್ಸಾರ ವರ್ತನೆಯನ್ನು ಮುಂದಾಗಿಯೇ ಅರಿತೋ ಏನೋ ಚಂದ್ರಯ್ಯನವರರಿ ತಾ॥ *26-10-1979* ರಂದೆ ಮಠವನ್ನು ಪುನಃ ಕಮಿಟಿಯ ಹತೋಟಿಗೊಳಪಡಿಸು ವಂತೆ ಕೋರುವ ನಿರ್ಣಯವನ್ನು ಕಾರ್ಯದರ್ಶಿಯವರಿಗೆ ಕಳುಹಿಸಿದ್ದರು

## ಕ್ಷೇತ್ರ ಚಿಕಿತ್ಸಕ :

ಶ್ರವಣಬೆಳಗೊಳ ಕ್ಷೇತ್ರದ ಆಡಳಿತ ಅಭಿವೃದ್ಧಿ ಕಾರ್ಯ ಅದರ ಆಗುಹೋಗು ಮುಂತಾದ ಎಲ್ಲಾ ವಿಚಾರಗಳಲ್ಲಿ ಚಂದ್ರಯ್ಯನವರಿಗೆ ಯಾರಿಗೂ ಇಲ್ಲದಂತಹ ಅನುಭವ ವಿದೆ ಹಣಕಾಸಿನ ವಿಚಾರದಲ್ಲಿ ಪರಿಶುದ್ಧ ಹಸ್ತರಾದ ಅವರಿಗೆ ಕ್ಷೇತ್ರದ ಆದಾಯ ವೆಚ್ಚಗಳ ವಿಚಾರದಲ್ಲಿ ಎಲ್ಲಿ ಏನೇ ಆಗಲಿ ತಕ್ಷಣ ಅದನ್ನು ಅವರು ಗ್ರಹಿಸುತ್ತಾರೆ ಭೂಕಂಪವಾದಾಗ ಕಂಪನ ಮಾಪಕ ಕೇಂದ್ರ ಬಹು ದೂರದಿಂದಲೂ ಅದನ್ನು ಸೆರೆ ಹಿಡಿಯುವಂತೆ, ಕ್ಷೇತ್ರದ ಹಣಕಾಸಿನ ಮತ್ತು ಇತರ ವ್ಯವಹಾರದಲ್ಲಿ ಎಲ್ಲಿ ಏನೇ ಅವ್ಯವಹಾರಗಳಾಗಿರಲಿ ಅದನ್ನು ಆದಷ್ಟು ಬೇಗ ಗ್ರಹಿಸಿ ಅದರ ಚಿಕಿತ್ಸೆಗೆ ಹೊರಡು ತ್ತಾರೆ ಇದರಿಂದಾಗಿ ಅವರು ಬಹುಜನರ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆ ಅವರಿಗೆ ಬಹಳ ಹತ್ತಿರದಲ್ಲಿದ್ದವರೂ ಬಹುಬೇಗನೆ ದೂರವಾಗತೊಡಗುತ್ತಾರೆ ಆದರೆ ನಿಯಮನಿಷ್ಠೆಯ ಮುಂದೆ ಅವರು ದಾಕ್ಷಿಣ್ಯವನ್ನು ಸುಳಿಯಗೊಡಲು ಬಿಡುವುದಿಲ್ಲ ಈ ತೆರನಾದ ಪರೋಪಕಾರದ ಹೋರಾಟ ಅವರಿಗೆ ಹುಟ್ಟುಗುಣವಾಗಿ ಅಂಟಿಬಂದಿದೆ ಹಣಕ್ಕಾಗಿ, ಅಧಿಕಾರಕ್ಕಾಗಿ ಅಥವಾ ಪ್ರಭಾವ ಪ್ರತಿಷ್ಠೆಗಳನ್ನು ಬೆಳೆಸಿಕೊಳ್ಳುವುದಕ್ಕಾಗಿ ಅವರು ಅಧಿಕಾರ ಸ್ಥಾನದಲ್ಲಿರುವವರ ಕಾಲುಕಟ್ಟಲು ಹೋಗುವುದಿಲ್ಲ. ಸಾರ್ವಜನಿಕ ನಿಧಿಗೆ ಧರ್ಮದ ದುಡ್ಡಿಗೆ ಎಲ್ಲಿ ವಂಚನೆಯಾಗುತ್ತಿದೆಯೋ ಅಲ್ಲಿ ಅವರು ಸಿಡಿಲೇಟಿ

ನಂತೆ ಮೇಲೇರಗುತ್ತಾರೆ ಅಧಿಕಾರ ಸ್ಥಾನದ ಬಲದಿಂದ ವಂಚಿಸುತ್ತಿರುವವರು, ಕಾವಿ ಬಟ್ಟೆಯ ಮರೆಯಲ್ಲಿ ಹಣವನ್ನು ಗಂಟುಕಟ್ಟುತ್ತಿರುವವರು ಅಥವಾ ಬೆತ್ತಲೆಯಾಗಿದ್ದು ಕೊಂಡೇ ಧರ್ಮದ ಹಣವನ್ನು ಮಂಗಮಾಯ ಮಾಡುತ್ತಾ ರಂಗೋಲಿಯ ಕೆಳಗೆ ನುಸುಳುವ ಕೌಶಲವಿರುವವರನ್ನೂ ಚಂದ್ರಯ್ಯನವರು ಬಿಡುವುದಿಲ್ಲ ! ರಂಗೋಲಿಯ ಕಣವನ್ನೂ ಭೇದಿಸಿ ಅಲ್ಲಿ ಅಡಗಿರಬಹುದಾದ ವಂಚಕರನ್ನು ಬಯಲುಮಾಡುವ ಎಣೆಯಿಲ್ಲದ ಸಾಮರ್ಥ್ಯ ಚಂದ್ರಯ್ಯನವರಲ್ಲಿದೆ

ಚಂದ್ರಯ್ಯನವರು ಹಿಂದಿನ ಸ್ವಾಮಿಗಳ ಕಾಲದಲ್ಲಿ ಅಖಿಲ ಭಾರತ ದಿಗಂಬರ ಜೈನ ತೀರ್ಥಕ್ಷೇತ್ರ ಕಮಿಟಿಯ ಶ್ರವಣಬೆಳಗೊಳ ಶಾಖೆಯ ಕಾರ್ಯದರ್ಶಿಯಾಗಿದ್ದು ಕೊಂಡು ಕ್ಷೇತ್ರದ ಪ್ರಗತಿಗೆ ಕಾರಣರಾದರು 1964 ರಲ್ಲಿ ಕ್ಷೇತ್ರ ವಂಚಕರ ಪಾಲಾಗು ವುದನ್ನು ಸಾಹಸದಿಂದ ತಪ್ಪಿಸಿದರು 1967 ರ ಮಹಾಮಸ್ತಕಾಭಿಷೇಕ ಕಾರ್ಯ ಗಳನ್ನು ಬಹು ಯಶಸ್ವಿಯಾಗಿ ಸಂಘಟಿಸಿದರು ಇವರ ಮಾರ್ಗದರ್ಶನದಿಂದಾಗಿ ಮಸ್ತಕಾಭಿಷೇಕದ ಸಂದರ್ಭದಲ್ಲಿ ಎಸ್ ಡಿ ಜೆ ಎಂ ಐ ಕಮಿಟಿಗೆ ಸುಮಾರು ಆರು ಲಕ್ಷ ರೂಪಾಯಿಗಳ ಉಳಿತಾಯವಾಯಿತು 1970 ರಲ್ಲಿ ಈಗಿನ ಚಾರುಕೀರ್ತಿಯವರ ಪಟ್ಟಾಭಿಷೇಕಕ್ಕೆ ಹಾದಿಯನ್ನು ಸುಗಮಗೊಳಿಸಿದರು ಈಗಿನ ಸ್ವಾಮಿಗಳು ಹಿಂದೊಮ್ಮೆ ಕ್ಷೇತ್ರ ತ್ಯಜಿಸಿ ಹೊರಟು ನಿಂತಾಗ ಅವರ ಮನವೊಲಿಸಿ ಉಳಿಸಿಕೊಂಡರು ನಂತರ ಕಾಲಚಕ್ರ ಉರುಳಿ, ಪರಿಸ್ಥಿತಿ ಬದಲಾಗಿ ಸ್ವಾಮೀಜಿಯವರ ಛೇರ್ಮನ್‌ಗಿರಿಯಲ್ಲಿಯೇ ಕಮಿಟಿಯಲ್ಲಿ ದುಂದುವೆಚ್ಚಗಳು ಮತ್ತು ನಿಯಮಬಾಹಿರ ಮಂಜೂರಾತಿಗಳು ಉದ್ದೇಶ ಪೂರ್ವಕವಾಗಿಯೇ ನಡೆದಾಗ, ಅವುಗಳನ್ನೂ ಬಿಡದಂತೆ ಪ್ರತಿಭಟಿಸಿ ನಿಂತರು ಮಠ ಅಕ್ರಮವಾಗಿ ಹಣ ಸಂಗ್ರಹಣೆ ಮಾಡಲು ತೊಡಗಿದಾಗ ಅದಕ್ಕೂ ಸೆಟೆದು ನಿಂತರು ಈ ವಿಧದಲ್ಲಿ ಮತ್ತು ಅನ್ಯಾಯಕ್ಕೆ ತಲೆಬಾಗದ ಮನೋಧರ್ಮದಲ್ಲಿ ಕ್ಷೇತ್ರದ ಆರೋಗ್ಯಕ್ಕಾಗಿ ನಿರಂತರವಾಗಿ ಶ್ರಮಿಸುತ್ತಿರುವ ಕ್ಷೇತ್ರಚಿಕಿತ್ಸಕರು ಚಂದ್ರಯ್ಯನವರು

## ಕೈಬಿಟ್ಟದ್ದು ನಿಯಮ ನಿಷ್ಠೆಯನ್ನು :

ನ್ಯಾಯವಾಗಿ ಮೇನೇಜಿಂಗ್ ಕಮಿಟಿಗೆ ಹೋಗಬೇಕಾದ ಹಣವನ್ನು ಸ್ವಾಮೀಜಿ ಯವರು ನಡುವೆ ಕಸಿದುಕೊಳ್ಳುತ್ತಿದ್ದಾಗ ಅದನ್ನು ವಿರೋಧಿಸುವ ಚಂದ್ರಯ್ಯನವರಂಥ ಕ್ಷೇತ್ರಚಿಕಿತ್ಸಕರನ್ನು ಕಮಿಟಿಯಲ್ಲಿ ಉಳಿಸಿಕೊಳ್ಳಲು ಸ್ವಾಮೀಜಿ ಇಷ್ಟಪಡಲಿಲ್ಲ ! ಚಂದ್ರಯ್ಯನವರ ಸದಸ್ಯತ್ವದ ಅವಧಿ ತಾ॥ 31-12-1979 ರಂದು ಮುಗಿದಿತ್ತೋ ಇಲ್ಲವೋ ಸ್ಪಷ್ಟವಾಗಿ ತಿಳಿಯದು ಅಂತೂ ಸ್ವಾಮೀಜಿಯವರು ಅವರನ್ನು ಕಮಿಟಿ ಯಿಂದ ಕೈಬಿಡಲು ದೃಢನಿರ್ಧಾರ ಮಾಡಿದರು ಈ ನಿರ್ಧಾರವನ್ನು ರಹಸ್ಯವಾಗಿಟ್ಟರು ತಾವು ಹೇಳಿದ್ದಕ್ಕೆಲ್ಲಾ, ನ್ಯಾಯವೇ ಅನ್ಯಾಯವೇ ? ಧರ್ಮವೇ ಅಧರ್ಮವೇ ?

ಎಂದು ಪ್ರಶ್ನಿಸದೆ ತಲೆಬಾಗಿಸಿ ಕೈ ಎತ್ತುವ ಸದಸ್ಯರು ಅವರಿಗೆ ಬೇಕಾಗಿದ್ದರು ! ಸ್ವಾಮೀಜಿಯವರು ಚಂದ್ರಯ್ಯನವರ ಬದಲು ಬೇರೊಬ್ಬರ ಹೆಸರನ್ನು ಸರ್ಕಾರಕ್ಕೆ ಶಿಫಾರಸು ಮಾಡಿದರು ಸರ್ಕಾರದಿಂದ ಈ ಬಗ್ಗೆ ಆಜ್ಞೆ ಹೊರಬೀಳುವವರೆಗೂ ಅವರು ಮೇನೇಜಿಂಗ್ ಕಮಿಟಿಯ ಸಭೆ ನಡೆಯದ ಹಾಗೆ ನೋಡಿಕೊಂಡರು ತಾ॥ 14–5–1980 ರಂದು ಸರ್ಕಾರದ ಆಜ್ಞೆ ಹೊರಬಿತ್ತು ಚಂದ್ರಯ್ಯನವರನ್ನು ಕಮಿಟಿಯಿಂದ ಕೈಬಿಟ್ಟಿರುವ ಸಂಗತಿ ಬಹಿರಂಗವಾಯಿತು ಚಂದ್ರಯ್ಯನವರ ಬಗೆಗಿನ ಈ ಆಜ್ಞೆ ಸಿಂಧುವೇ? ಅಲ್ಲವೇ ? ಎಂಬುದನ್ನು ಇನ್ನೂ ಪರಿಶೀಲಿಸಬೇಕಾಗಿದೆ

ಈ ಹಂತದಲ್ಲಿ ಕಮಿಟಿಯಲ್ಲಿ ತಮ್ಮ ಸದಸ್ಯತ್ವ ಮುಂದುವರಿಯದೇ ಹೋದದ್ದರ ಬಗ್ಗೆ ಚಂದ್ರಯ್ಯನವರಿಗೆ ಕಿಂಚಿತ್ತೂ ವ್ಯಥೆಯಿರಲಿಲ್ಲ ಈ ಕ್ರಮವನ್ನು ಅವರು ನಿರೀಕ್ಷಿಸಿಯೇ ಇದ್ದರು ಅವರು ಸ್ವಾಮೀಜಿಯವರ ಕೈಗೊಂಬೆಯಾಗಿ ಉಳಿಯಲು ಮನಸ್ಸು ಮಾಡಿದ್ದರೆ, ಜೀವನಪರ್ಯಂತ ಕಮಿಟಿಯಲ್ಲಿರಬಹುದಾಗಿತ್ತು ಆದರೆ ಚಂದ್ರಯ್ಯನವರ ಜಾಯಮಾನವೇ ಆ ಬಗೆಯದಲ್ಲ ನೀತಿ ನಿಯಮಗಳನ್ನು ಬಲಿಗೊಟ್ಟು ಕ್ಷೇತ್ರದ ಅಭಿವೃದ್ಧಿಯನ್ನು ಮಾಡುವವರ ಮತ್ತು ನಿಯಮ ತತ್ವಗಳಿಗೆ ತಿಲಾಂಜಲಿ ನೀಡಿ ತಮ್ಮ ಸ್ವಾಗತ ಸಮಾರಂಭಗಳನ್ನು ಏರ್ಪಡಿಸಿಕೊಳ್ಳುವವರ ಜಾಯಮಾನಕ್ಕೆ ಚಂದ್ರಯ್ಯನವರು ಸೇರಿದವರಲ್ಲ ! ಆದ್ದರಿಂದ ಚಂದ್ರಯ್ಯನವರನ್ನು ಕಮಿಟಿಯಿಂದ ಕೈಬಿಟ್ಟ ಕ್ರಮ ವಾಸ್ತವವಾಗಿ ನಿಯಮನಿಷ್ಠೆಯನ್ನು ಕೈಬಿಟ್ಟ ಕ್ರಮವಾಗಿದೆ

**ದೊರೆಯ ತನಕ ದೂರು ·**

ಕಮಿಟಿಯಿಂದ ತಮ್ಮನ್ನು ವ್ಯವಸ್ಥಿತವಾಗಿ ಕೈಬಿಟ್ಟನಂತರ ಚಂದ್ರಯ್ಯನವರು ಕೈಕಟ್ಟಿ ಕೂರಲಿಲ್ಲ ಶ್ರವಣಬೆಳಗೊಳ ಮಠದ ಅವ್ಯವಹಾರಗಳ ಇನ್ನೂ ಕೆಲವು ಮಾಹಿತಿಗಳನ್ನು ಸಂಗ್ರಹಿಸಿದರು ಚಾರುಕೀರ್ತಿ ಸ್ವಾಮೀಜಿಯವರು ಮೇನೇಜಿಂಗ್ ಕಮಿಟಿಯನ್ನೂ, ಜನರನ್ನೂ ವಂಚಿಸುತ್ತಿರುವ ಪ್ರಕರಣಗಳನ್ನು 1980 ರ ಜೂನ್ ತಿಂಗಳಲ್ಲಿ ಹಂತ ಹಂತವಾಗಿ ಸರ್ಕಾರದ ಗಮನಕ್ಕೆ ತಂದರು ತಮ್ಮ ಎಲ್ಲಾ ದೂರುಗಳ ವಿಚಾರಣೆ ನಡೆಸಬೇಕೆಂದು ಪ್ರಾರ್ಥಿಸಿದರು ಈ ದೂರುಗಳನ್ನೆಲ್ಲಾ ಗಮನಿಸಿದರೆ ವಿದ್ಯಾನಂದ ಮುನಿಗಳು ಚಂದ್ರಯ್ಯನವರನ್ನು ಅಪರಾಧಿಗಳನ್ನಾಗಿ ಮಾಡಲು ಪ್ರಯತ್ನಿಸುವ ಪಿತೂರಿಯನ್ನು ಬೆಳ್ಳೂರಿನಲ್ಲಿ ಪಕೆ ಮಾಡಿದರು ಎಂಬುದು ಇನ್ನೂ ಸುಸ್ಪಷ್ಟವಾಗುತ್ತದೆ ಚಂದ್ರಯ್ಯನವರು ಸರ್ಕಾರಕ್ಕೆ ಸಲ್ಲಿಸಿದ ದೂರುಗಳ ವಿವರಣೆ ಮುಂದಿನ ಅಧ್ಯಾಯದಲ್ಲಿದೆ.

ಅಧ್ಯಾಯ ೪

# ಸರ್ಕಾರಕ್ಕೆ ಚಂದ್ರಯ್ಯನವರ ದೂರುಗಳು

ಚಂದ್ರಯ್ಯನವರು ಕರ್ನಾಟಕ ಸರ್ಕಾರದ ಮುಜರಾಯಿ ಮಂತ್ರಿಗಳಿಗೆ ಶ್ರವಣ ಬೆಳಗೊಳದ ಮಠದ ವಿರುದ್ಧ ನಾಲ್ಕು ದೂರುಗಳನ್ನೂ, ಮತ್ತು ಎಂಡೋಮೆಂಟ್ಸ್ ಕಮಿಷನರಿಗೆ ಒಂದು ದೂರನ್ನೂ ಸಲ್ಲಿಸಿದ್ದಾರೆ ಈ ದೂರುಗಳ ಮುಖ್ಯಾಂಶಗಳನ್ನು ಮುಂದೆ ಕೊಟ್ಟಿದ್ದೇನೆ

**ದೂರು 1 :**

## ಮೇನೇಜಿಂಗ್ ಕಮಿಟಿ ಮತ್ತು ಶ್ರೀ ಜೈನ ಮಠದ ವಿಚಾರವಾಗಿ

ಮಾನ್ಯ ಮುಜರಾಯಿ ಮಂತ್ರಿಗಳಿಗೆ ತಾ॥ 6-6-1980
ಕರ್ನಾಟಕ ಸರ್ಕಾರ

ಮಾನ್ಯರೆ,

ಕರ್ನಾಟಕ ಸರ್ಕಾರವು ಶ್ರವಣಬೆಳಗೊಳ ಕ್ಷೇತ್ರಾಭಿವೃದ್ಧಿಯ ದೃಷ್ಟಿಯಿಂದ 1967 ರಲ್ಲಿ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯನ್ನು ಸ್ಥಾಪಿಸಿತು 1968 ರಲ್ಲಿ ಮಠಕ್ಕೆ ಪರಿಮಿತ ಸ್ವಾತಂತ್ರವನ್ನು ಕೊಡುವ ಉದ್ದೇಶದಿಂದ ಕಮಿಟಿಯ ಷಡ್ಯೂಲ್ ನಲ್ಲಿ ಸೇರಿದ್ದ ಮಠ ಮತ್ತು ಜಿನ್ನೇದೇವರು ವಿಷಯಗಳನ್ನು ಕಮಿಟಿಯ ಪ್ರಾರ್ಥನೆ ಯಂತೆ ಕೈಬಿಡಲಾಯಿತು ಆ ಸಮಯದಲ್ಲಿ ಸರ್ಕಾರ ಮಠದ ವ್ಯವಹಾರಗಳನ್ನು ನೋಡಿಕೊಳ್ಳಲು ಒಬ್ಬ ಪೇಷ್ಕಾರರನ್ನು ನೇಮಿಸಿತ್ತು

ಈಗಿನ ಸ್ವಾಮಿಜಿಯವರು ಪಟ್ಟಾಧಿಕಾರಕ್ಕೆ ಬಂದನಂತರ ಆ ಪೇಷ್ಕಾರರು ಏನಾದರೋ ತಿಳಿಯದು? ಅವರು ಮಠದಿಂದ ಅದೃಶ್ಯರಾದರು ! ಸ್ವಾಮಿಜಿಯವರೇ ಎಲ್ಲಾ ವ್ಯವಹಾರಗಳನ್ನೂ ನೋಡಿಕೊಳ್ಳಲಾರಂಭಿಸಿದರು ಮಠದ ವತಿಯಿಂದ ನಾನಾ ಬಾಬ್ತುಗಳಿಗಾಗಿ ಯಾತ್ರಿಕರಿಂದ ಸಂಗ್ರಹಿಸುತ್ತಿದ್ದ ಹಣ ಕಾನೂನಿನಂತೆ ಸರ್ಕಾರಿ ಖಜಾನೆಯಲ್ಲಿ ಮುಜರಾಯಿ ಖಾತೆಗೆ ಜಮಾ ಆಗಲಿಲ್ಲ ಯಾತ್ರಿಕರಿಂದ ಅವರಿಗೆ ಸರಿ ಯಾದ ರಶೀದಿ ಕೊಡದೆ ಸಂಗ್ರಹಿಸಿದ ಚಿಕ್ಕ ಮತ್ತು ದೊಡ್ಡ ವಂತಿಗೆಯ ಹಣ ಮುಜ ರಾಯಿ ಲೆಕ್ಕಕ್ಕಾಗಲೀ ಅಥವಾ ಮೇನೇಜಿಂಗ್ ಕಮಿಟಿಯ ನಿಧಿಗಾಗಲೀ ಹೋಗಲೇ ಇಲ್ಲ ಅವರು ಸ್ವಚ್ಛಂದವಾಗಿ ಇಷ್ಟಬಂದಂತೆ ಹಣ ಖರ್ಚುಮಾಡಿದರು ವಿದ್ಯಾನಂದ ನಿಲಯ ಧರ್ಮಶಾಲೆಯ ಆದಾಯದ ಲೆಕ್ಕವೇ ಇಲ್ಲ ನಾನು ಈ ಸಂಗತಿಗಳನ್ನೆಲ್ಲಾ ಕಮಿಟಿಯ ಗಮನಕ್ಕೆ ತಂದಿದ್ದೇನೆ, ಆದರೆ ಸ್ವಾಮಿಜಿಯವರು ಕಮಿಟಿಯ ಛೇರ್ಮನ್ನ

ರಾದ್ದರಿಂದ ಆ ಸಂಗತಿಗಳನ್ನು ಅವರು ಕಮಿಟಿಯ ಮುಂದಿಡಲಿಲ್ಲ ಈ ವಿಷಯಗಳನ್ನು ಕ್ರಮಪಡಿಸುವ ಬಗ್ಗೆ ಸದಸ್ಯರೂ ಸಹ ಔದಾಸೀನ್ಯವಹಿಸಿದರು

ಸದ್ಯದಲ್ಲೇ ಮಹಾಮಸ್ತಕಾಭಿಷೇಕ ಹತ್ತಿರವಾಗುತ್ತಿದೆ ಈ ಮುಖ್ಯವಾದ ಪವಿತ್ರವಾದ ಸಂದರ್ಭದಲ್ಲಿ ಯಾತ್ರಿಕರಿಂದ ಮತ್ತು ಇತರ ಮೂಲಗಳಿಂದ ವಂತಿಗೆಗಳು ಬಂದೇ ಬರುತ್ತವೆ ಈ ಹಣವೆಲ್ಲಾ ಸರಿಯಾದ ಲೆಕ್ಕಕ್ಕೊಳಪಡಬೇಕಾಗಿದೆ. ಮಠ ಮತ್ತು ಕ್ಷೇತ್ರದ ಹಿತದೃಷ್ಟಿಯಿಂದ ಸಂಗ್ರಹಿಸಿದ ನಿಧಿಯನ್ನು ಖರ್ಚುಮಾಡುವ ಮುನ್ನ ಅದು ಮುಜರಾಯಿ ಖಾತೆಗೆ ಅಥವಾ ಮೇನೇಜಿಂಗ್ ಕಮಿಟಿಯ ಖಾತೆಗೆ ಸೇರ ಬೇಕಾದ್ದು ಅತ್ಯಾವಶ್ಯಕವಾಗಿದೆ, ಮಹಾಮಸ್ತಕಾಭಿಷೇಕ ಶೀಘ್ರವಾಗಿ ಹತ್ತಿರವಾಗು ತ್ತಿದ್ದರೂ ಮೇನೇಜಿಂಗ್ ಕಮಿಟಿಯ ಸದಸ್ಯರು ಈ ಬಗ್ಗೆ ತೀವ್ರವಾದ ತಾತ್ಸಾರವನ್ನು ತೋರುತ್ತಿರುವುದು ಸರಿಯಲ್ಲ !

ಕ್ಷೇತ್ರದ ಹಿತಾಸಕ್ತಿಯ ದೃಷ್ಟಿಯಿಂದ ಎಲ್ಲವೂ ಸುಲಲಿತವಾಗಿ, ಸರಾಗವಾಗಿ ಮತ್ತು ಪ್ರಾಮಾಣಿಕವಾಗಿ ನಡೆದುಕೊಂಡು ಹೋಗುವಂತಾಗಲು ತಾವು ಇವುಗಳನ್ನೆಲ್ಲಾ ಪರೀಕ್ಷಿಸಿ ಕ್ರಮಬದ್ಧಗೊಳಿಸಬೇಕೆಂದು ಪ್ರಾರ್ಥಿಸುತ್ತೇನೆ ಮಠದ ವ್ಯವಹಾರಗಳನ್ನು ಸರಿಯಾಗಿ ನೋಡಿಕೊಳ್ಳಲು ತಕ್ಷಣವೇ ಅಲ್ಲಿ ಒಬ್ಬ ಪೇಷ್ಕಾರರನ್ನಾಗಲೀ ಅಥವಾ ಏಜೆಂಟರನ್ನಾಗಲೀ ನೇಮಿಸುವುದು, ಹಾಗೆಯೇ ಕಮಿಟಿಯ ಆಡಳಿತಕ್ಕಾಗಿ ಒಬ್ಬ ಸಮರ್ಥ ಕಾರ್ಯದರ್ಶಿಯನ್ನು ನೇಮಿಸುವುದು ಈಗ ಮೊದಲು ಆಗಬೇಕಾದ ಕಾರ್ಯ ವಾಗಿದೆ

ತಮ್ಮ ವಿಶ್ವಾಸಿ
(ಸಹಿ)
ಸಿ ಬಿ ಎಂ ಚಂದ್ರಯ್ಯ
ಚಾಮುಂಡಿ ವಸತಿಗೃಹ
ಚಂದ್ರಗುಪ್ತ ರಸ್ತೆ
ಮೈಸೂರು-1

**ದೂರು : 2**

**' ವಿದ್ಯಾನಂದ ನಿಲಯ ' ಧರ್ಮಶಾಲೆಯ ವಿಚಾರವಾಗಿ**

ತಾ॥ 9-6-1980.

ಮಾನ್ಯ ಮುಜರಾಯಿ ಮಂತ್ರಿಗಳಿಗೆ
ಕರ್ನಾಟಕ ಸರ್ಕಾರ

ಮಾನ್ಯರೆ,

ಶ್ರವಣಬೆಳಗೊಳ ಕ್ಷೇತ್ರದಲ್ಲಿ ಹಣಸಂಗ್ರಹಿಸುವ ಮತ್ತು ಅದನ್ನು ವ್ಯಯಮಾಡುವ ವಿಧಾನದಲ್ಲಿ ಸ್ಪಷ್ಟವಾಗಿ ಅವ್ಯವಸ್ಥೆಗಳಿವೆ ಸ್ವಾಮೀಜಿಯವರು ತಾವು ಮನಸ ಬಂದಂತೆ ರಶೀದಿಗಳಿಲ್ಲದೆ ಹಣ ಸಂಗ್ರಹಿಸಬಹುದೆಂದೂ ಮತ್ತು ಅದನ್ನು ತಾವು ನಿರ್ಧರಿಸಿದಂತೆ ವೆಚ್ಚಮಾಡಬಹುದೆಂದೂ ತಿಳಿದುಕೊಂಡಿದ್ದಾರೆ ಯಾತ್ರಿಕರು ಕ್ಷೇತ್ರಕ್ಕೆ ಹಣವನ್ನು ದಾನಮಾಡುವಾಗ ತಾವು ಶ್ರೀಮಠಕ್ಕೆ ದಾನ ಮಾಡುತ್ತಿದ್ದೇವೊ ಅಥವಾ ಮೇನೇಜಿಂಗ್ ಕಮಿಟಿಗೆ ದಾನ ಮಾಡುತ್ತಿದ್ದೇವೊ ಎಂಬ ತಿಳುವಳಿಕೆ ಅವರಿಗಿರುವುದಿಲ್ಲ ಹಣ ಸಂಗ್ರಹಣೆಯ ಬಗೆಗೆ ಕಮಿಟಿಯ ಔದಾಸೀನ್ಯ, ಕ್ಷೇತ್ರದಲ್ಲಿ ಎಲ್ಲವೂ ಸರಿಯಾಗಿ ನಡೆಯುತ್ತಿದೆ ಎಂಬ ಮುಜರಾಯಿ ಇಲಾಖೆಯ ತಿಳುವಳಿಕೆ ಇವುಗಳ ದುರ್ಲಾಭವನ್ನು ಸ್ವಾಮೀಜಿಯವರು ಪಡೆದುಕೊಂಡಿದ್ದಾರೆ

ಇಲ್ಲಿ ಆಕ್ಷೇಪಣೆಗಳನ್ನೆತ್ತಿರುವುದು ಹಣ ಸಂಗ್ರಹಣೆಯ ವಿರುದ್ಧವಲ್ಲ ಅಥವಾ ವೆಚ್ಚದ ವಿರುದ್ಧವಲ್ಲ ಆದರೆ ಹಣವನ್ನು ಅಕ್ರಮವಿಧಾನಗಳಿಂದ ಸಂಗ್ರಹಿಸುವುದಲ್ಲದೆ. ಎಷ್ಟು ಸಂಗ್ರಹವಾಯಿತೆಂಬುದರ ಸುಳಿವನ್ನೂ ಕೊಡದೆ ಮನಬಂದಂತೆ ವೆಚ್ಚ ಮಾಡುವುದರ ವಿರುದ ಈ ಆಕ್ಷೇಪಣೆಗಳಿವೆ ವಿದ್ಯಾನಂದ ನಿಲಯದ ಆಡಳಿತಕ್ಕೆ ಸಂಬಂಧಪಟ್ಟಂತೆ ಈ ಸಂಗತಿಗಳನ್ನು ತಮ್ಮ ಗಮನಕ್ಕೆ ತರುತ್ತೇನೆ

ಈಗಿನ ಸ್ವಾಮಿಗಳು ಈ ಹಿಂದೆ ವಿದ್ಯಾಭ್ಯಾಸದ ಉದ್ದೇಶದಿಂದ ದೆಹಲಿಯಲ್ಲಿದ್ದ ವಿದ್ಯಾನಂದರ ಸಂಪರ್ಕ ಬೆಳೆಸಿದರು ಆ ಸಂದರ್ಭದಲ್ಲಿ ತಮ್ಮನ್ನು ಭೇಟಿಯಾಗುತ್ತಿದ್ದ ಸಮಾಜದ ಗಣ್ಯರ ಮುಂದೆ, ಶ್ರವಣಬೆಳಗೊಳದಲ್ಲಿ ಮುನಿವಿದ್ಯಾನಂದರ ಹೆಸರಿನಲ್ಲಿ ಒಂದು ಧರ್ಮಶಾಲೆಯನ್ನು ಕಟ್ಟಿಸುವ ತಮ್ಮ ಆಶಯವನ್ನು ವ್ಯಕ್ತಪಡಿಸಿದರು ಇದಕ್ಕಾಗಿ ಚಿಕ್ಕದಾದ ದೊಡ್ಡದಾದ ವಂತಿಗೆಗಳು ಬರಲಾರಂಭಿಸಿ ನಾಲ್ಕು ವರ್ಷಗಳ ಹಿಂದೆ ಆ ಕಾರ್ಯವನ್ನು ಮುಗಿಸಿದರು ಈ ಕಾರ್ಯಕ್ಕೆ ಸುಮಾರು ನಾಲ್ಕೈದು ಲಕ್ಷ ರೂಪಾಯಿಗಳು ವೆಚ್ಚವಾಗಿದ ಸರ್ಕಾರ ನೇಮಿಸಿದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ ಕ್ಷೇತ್ರದ ಆಡಳಿತವನು ನೋಡಿಕೊಳ್ಳುತ್ತಿದೆಯೆಂಬುದು ಚೆನ್ನಾಗಿ ತಿಳಿದ ಸಂಗತಿಯೇ ಆಗಿದೆ ಇದಕ್ಕೆ ಜೈನಮಠದ ಸ್ವಾಮೀಜಿಯವರೇ ಸಭೆ ನಡೆಸುವ ಛೇರ್ಮನ್ನರೆಂಬುದೂ ಚೆನ್ನಾಗಿ ತಿಳಿದ ಸಂಗತಿಯೇ ಆಗಿದೆ ಇಲ್ಲಿನ ಒಂದು ವಿಚಿತ್ರವೆಂದರೆ, ಸ್ವಾಮೀಜಿ ಮತ್ತು ಎಸ್ ಡಿ ಜೆ ಎಂ ಐ ಕಮಿಟಿಯೆಂದರೆ ಬೇರೆಬೇರೆಯಲ್ಲ, ಅದೊಂದೇ ವ್ಯವಸ್ಥೆಯೆಂದು ಜನರು ತಪ್ಪು ತಿಳಿದಿರುವುದು ಸ್ವಾಮೀಜಿಯವರಿಗೆ ತಾವು ಕೊಡುವ ಹಣ ಕ್ಷೇತ್ರಾಭಿವೃದ್ಧಿಗಾಗಿ ಎಸ್ ಡಿ ಜೆ.ಎಂ ಐ ಕಮಿಟಿಗೇ ಹೋಗುತ್ತದೆ ಎಂದು ಅವರು ಭಾವಿಸುತ್ತಾರೆ ಆದರೆ ಇಲ್ಲಿನ ಸಂಗತಿಗಳು ಜನರು ತಿಳಿದುಕೊಂಡಿರುವಂತೆ ನಡೆಯುತ್ತಿಲ್ಲ

ವಿದ್ಯಾನಂದ ನಿಲಯ ಧರ್ಮಶಾಲೆಯ ನಿರ್ಮಾಣಕ್ಕಾಗಿ ಸ್ವಾಮೀಜಿಯವರು ಲಕ್ಷಾಂತರ ರೂಪಾಯಿಗಳನ್ನು ದಾನಗಳ ಮೂಲಕ ಸ್ವೀಕರಿಸಿರುವುದು ವಾಸ್ತವವಾದ ಸಂಗತಿ ಹೀಗೆ ಸಂಗ್ರಹಿಸಿದ ಹಣದಲ್ಲಿ ಸುಮಾರು ಶೇಕಡ 60 ರಿಂದ 75 ಭಾಗ ಹಣವನ್ನು ಕಟ್ಟಡಕ್ಕೆ ಖರ್ಚುಮಾಡಲಾಗಿದೆ ಉಳಿದ ಹಣ ಏನಾಯಿತೆಂಬುದು ತಿಳಿದು ಬಂದಿಲ್ಲ ಈ ಬಗ್ಗೆ ಸರಿಯಾದ ಲೆಕ್ಕಪತ್ರಗಳನ್ನಿಟ್ಟಂತೆ ಕಾಣುವುದಿಲ್ಲ. ದಾನಗಳಿಂದ ಬಂದ ಹಣದ ವಿವರ ಮತ್ತು ಅದನ್ನು ವೆಚ್ಚಮಾಡಿದ ವಿವರ ಬೇರಾರಿಗೂ ತಿಳಿದಿಲ್ಲ. ಮೂಲತಃ ಕ್ಷೇತ್ರದ ಪ್ರತಿಯೊಂದು ಆದಾಯವೂ ಅದು ವೆಚ್ಚವಾಗುವ ಮುಂಚೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಬೊಕ್ಕಸಕ್ಕೆ ಹೋಗಬೇಕು. ಇಲ್ಲವೆ ಮುಜರಾಯಿ ಇಲಾಖೆಗೆ ಹೋಗಬೇಕು ಕ್ಷೇತ್ರದ ಆಡಳಿತ ಮತ್ತು ಅಭಿವೃದ್ಧಿ ಕಾರ್ಯಗಳ ವ್ಯವಹಾರಗಳನ್ನು ನೋಡಿಕೊಳ್ಳಲು ಈಗಾಗಲೇ ಸರ್ಕಾರದಿಂದ ನೇಮಕ ಗೊಂಡ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ ಇರುವಾಗ, ಸ್ವಾಮೀಜಿಯವರು ಆ ಅಧಿಕಾರವನ್ನು ಹೇಗೆ ಕಸಿದುಕೊಂಡರು ? ಇದರ ಬಗ್ಗೆ ಒಂದು ಹೇಳಿಕೆಯೆಂದರೆ, ಸ್ವಾಮೀಜಿಯವರು ಹಣವನ್ನು ಸಂಗ್ರಹಿಸುವುದಕ್ಕಾಗಿ ಮತ್ತು ಧರ್ಮಶಾಲೆಯನ್ನು ಕಟ್ಟಿಸುವುದಕ್ಕಾಗಿ ಹೆಚ್ಚು ಶ್ರಮವಹಿಸಿದ್ದಾರೆ ಆದ್ದರಿಂದ ತಮಗೆ ತೋರಿದ ರೀತಿ ಯಲ್ಲಿ ಹಣವನ್ನು ಖರ್ಚುಮಾಡಲು ಅವರಿಗೆ ಹಕ್ಕಿದೆ ಅದು ಅಕ್ರಮವಾದರೂ, ದುರುಪಯೋಗವಾಗದಿದ್ದ ಪಕ್ಷದಲ್ಲಿ ಅದನ್ನು ಯಾರೇ ಆಗಲಿ ಪ್ರಶ್ನಿಸಬಾರದು ಎಂಬುದೇ ಆ ಹೇಳಿಕೆ

ಇನ್ನೊಂದು ಕುತೂಹಲಕಾರಿಯಾದ ಸಂಗತಿಯೆಂದರೆ ಈ ಧರ್ಮಶಾಲೆಯಲ್ಲಿ ಎಲ್ಲಾ ಅನುಕೂಲತೆಗಳಿರುವುದರಿಂದ ಯಾತ್ರಿಕರು ಮತ್ತು ಪ್ರವಾಸಿಗರು ಇಲ್ಲಿ ಉಳಿದು ಕೊಳ್ಳುತ್ತಾರೆ ಅವರಿಂದ ವಸತಿ, ದಾನ, ಮುಂತಾದವುಗಳಿಗಾಗಿ ಹಣ ಸಂಗ್ರಹಿಸ ಲಾಗುತ್ತದೆ ಈ ಹಣ ತಿಂಗಳಿಗೆ 10 ರಿಂದ 15 ಸಾವಿರ ರೂಪಾಯಿಗಳವರೆಗೂ ಬರುತ್ತದೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ ಅಥವಾ ಮುಜರಾಯಿ ಇಲಾಖೆಗೆ ನ್ಯಾಯವಾಗಿ ಹೋಗಬೇಕಾದ ಈ ಹಣ ಅದರ ಬದಲು ಜೈನ ಮಠಕ್ಕೆ ಹೋಗುತ್ತಿದೆ (ಜೈನಮಠ ಮುಜರಾಯಿ ಇಲಾಖೆಯ ಅಧೀನದಲ್ಲಿರುವುದರಿಂದ ಅದಕ್ಕೆ ಬರುವ ದಾನವೆಲ್ಲಾ ಮುಜರಾಯಿ ಇಲಾಖೆಯ ಲೆಕ್ಕಕ್ಕೆ ಹೋಗಬೇಕು ) ಸಂಗ್ರಹಿಸುವ ಹಣಕ್ಕೆ ಸರಿಯಾದ ರಶೀದಿಯನ್ನು ಕೊಡುತ್ತಿಲ್ಲ ಕೊಟ್ಟರೂ ಅವು ಮಠದ ಹೆಸರಿನಲ್ಲಿರುತ್ತವೆ. ಕ್ಷೇತ್ರಕ್ಕಾಗಿ ದಾನಗಳನ್ನು, ವಂತಿಗೆಗಳನ್ನು ಸ್ವೀಕರಿಸುವ ಮತ್ತು ಅದಕ್ಕಾಗಿ ಸರಿಯಾದ ರಶೀದಿಗಳನ್ನು ತನ್ನ ಹೆಸರಿನಲ್ಲಿ ಕೊಡುವ ಕಾನೂನು ಬದ್ಧ ಕರ್ತವ್ಯ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯದಾಗಿರುವಾಗ, ಸ್ವಾಮೀ ಜಿಯವರು ಆ ಹಕ್ಕನ್ನು ಹೇಗೆ ಕಿತ್ತುಕೊಂಡರು? ಈಗ ತಿಳಿದು ಬಂದಿರುವಂತೆ ಧರ್ಮ ಶಾಲೆಯ ನಿರ್ಮಾಣಕಾರ್ಯಕ್ಕಾಗಿ ಸರ್ಕಾರದಿಂದ ಮ್ಯಾಚಿಂಗ್ ಗ್ರಾಂಟನ್ನೂ ಸಹ

ತೆಗೆದುಕೊಳ್ಳಲಾಗಿದೆ ಇದು ನಿಜವಾದರೆ ಧರ್ಮಶಾಲೆಯ ನಿರ್ಮಾಣಕ್ಕಾಗಿ ಎಷ್ಟು ಹಣ ಖರ್ಚಾಯಿತು ಮತ್ತು ಹೇಗೆ ಖರ್ಚಾಯಿತು? ಇತ್ತಕಡೆ ಈ ಧರ್ಮಶಾಲೆಯ ಕಟ್ಟಡಕ್ಕೆ ಮೇನೇಜಿಂಗ್ ಕಮಿಟಿ ತನ್ನ ಸ್ವಂತ ಖರ್ಚಿನಿಂದ ನೀರಿನ ಸರಬರಾಜನ್ನು ಮಾಡುತ್ತಿದೆ ಇಷ್ಟಲ್ಲದೆ ಈ ಮೇಲಿನ ಸಂಗತಿಗಳನ್ನೆಲ್ಲಾ ಎಸ್ ಡಿ ಜೆ ಎಂ ಐ ಕಮಿಟಿಯ ಸದಸ್ಯರ ಗಮನಕ್ಕೆ ತಂದರೂ ಯಾರೂ ಇದನ್ನು ಪರಿಗಣಿಸಿದಂತೆ ಕಾಣಲಿಲ್ಲ ಈ ಸಂಗತಿಗಳನ್ನೆಲ್ಲಾ ಸರಿಪಡಿಸಿ ಎಂದು ಯಾರಾದರೂ ಸ್ವಾಮೀಜಿಯವರನ್ನು ಪ್ರಾರ್ಥಿಸಿಕೊಂಡರೆ, ಅಂಥವರ ಮೇಲೆ ಅವರು ಕ್ರೋಧಗೊಂಡು ಸುಳ್ಳು ವದಂತಿಗಳನ್ನು ಹಬ್ಬಿಸುತ್ತಾರೆ

ಈ ಎಲ್ಲಾ ಪರಿಸ್ಥಿತಿಗಳಿಂದಾಗಿ ಸರ್ಕಾರ ಈ ಧರ್ಮಶಾಲೆಯ ವ್ಯವಹಾರ ಮತ್ತು ಲೆಕ್ಕಗಳ ಕಡೆ ಗಮನ ಹರಿಸಬೇಕೆಂದು ಪ್ರಾರ್ಥಿಸುತ್ತೇನೆ ಇದಲ್ಲದೆ ವಿದ್ಯಾನಂದ ನಿಲಯ ಧರ್ಮಶಾಲೆಯ ಆಡಳಿತ ಮತ್ತು ವ್ಯವಹಾರಗಳನ್ನು ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿ ನೋಡಿಕೊಳ್ಳುವಂತಾಗಬೇಕೆಂದೂ ಮತ್ತು ಧರ್ಮಶಾಲೆಯ ಲೆಕ್ಕಗಳನ್ನು ಆಡಿಟ್ ವ್ಯವಸ್ಥೆಗೊಳಪಡಿಸುವಂತೆ ಆಜ್ಞೆಮಾಡಬೇಕೆಂದೂ ಪ್ರಾರ್ಥಿಸಿಕೊಳ್ಳುತ್ತೇನೆ

ತಮ್ಮ ವಿಶ್ವಾಸಿ
(ಸಹಿ)
ಸ ಬಿ ಎಂ ಚಂದ್ರಯ್ಯ

**ದೂರು 3 :**

**ಮಠದ ಬಸದಿಯ ವಿಚಾರವಾಗಿ**

ತಾ॥ 9-6-1980

ಮಾನ್ಯ ಮುಜರಾಯಿ ಮಂತ್ರಿಗಳಿಗೆ
ಕರ್ನಾಟಕ ಸರ್ಕಾರ

ಮಾನ್ಯರೆ,

ಶ್ರವಣಬೆಳಗೊಳದ ಈಗಿನ ಸ್ವಾಮೀಜಿಯವರು ನಿಧಿ ಸಂಗ್ರಹ ಮಾಡುವ ವಿಚಾರದಲ್ಲಿ ಮತ್ತು ಅದನ್ನು ಖರ್ಚುಮಾಡುವ ವಿಚಾರದಲ್ಲಿ ಮುಜರಾಯಿ ಇಲಾಖೆಯ ನಿಯಮಗಳನ್ನು ಮತ್ತು ಎಸ್ ಡಿ.ಜೆ ಎಂ ಐ ಕಮಿಟಿಯ ನಿಯಮಗಳನ್ನು ಪರಿಗಣಿಸದೆ, ತಮ್ಮ ಇತಿಮಿತಿಗಳನ್ನು ಮೀರಿ ನಡೆದುಕೊಳ್ಳುತ್ತಿದ್ದಾರೆ ಈ ವಿಷಯಕ್ಕೆ ಇಲ್ಲೊಂದು ಉದಾಹರಣೆಯಿದೆ

ಮಠದ ಬಸದಿಯನ್ನು ಎಸ್.ಡಿ ಜೆ.ಎಂ ಐ ಮೇನೇಜಿಂಗ್ ಕಮಿಟಿಯ ಷೆಡ್ಯೂಲ್ ನಂ 31 ರಲ್ಲಿ ಸೇರಿಸಲಾಗಿದೆ ಆದರೆ ಇಲ್ಲಿ ' ಗೋಲಕ'ದ ರೂಪದಲ್ಲಿ ಸಂಗ್ರಹಿಸುವ ಹಣ, ಮತ್ತು ಯಾತ್ರಿಕರಿಂದ ಅನೇಕರೂಪದಲ್ಲಿ ಸಂಗ್ರಹಿಸುವ ದಾನ ಮೇನೇಜಿಂಗ್ ಕಮಿಟಿಯ ಗಮನಕ್ಕೆ ಬರುತ್ತಿಲ್ಲ ಈ ಬಸದಿ ಸ್ವಾಮೀಜಿಯವರಿಗೆ ಸೇರಿದ ಹಾಗೆ ತಿಳಿದು ಇಲ್ಲಿನ ಖರ್ಚುಗಳನ್ನು ನಿರ್ವಹಿಸಲಾಗುತ್ತಿದೆ ಲೆಕ್ಕಾಚಾರದ ದೃಷ್ಟಿಯಿಂದ ಇದು ಅತ್ಯಂತ ಅಕ್ರಮ ಮತ್ತು ಹಣ ದುರುಪಯೋಗಕ್ಕೆ ಸಮಾನವಾದುದು ಎಂದು ಹೇಳಬಹುದು ಈ ಅಕ್ರಮವನ್ನು ಕಮಿಟಿಯ ಗಮನಕ್ಕೆ ತಂದಿದ್ದರೂ ಸಹ ಅದನ್ನು ಹೇಗೋ ಪರಿಗಣನೆಗೆ ತೆಗೆದುಕೊಂಡೇ ಇಲ್ಲ ಮಠದ ಬಸದಿಯ ವ್ಯವಹಾರಗಳ ಸಂಕ್ಷಿಪ್ತ ವಿವರಣೆ ಹೀಗಿದೆ

ಕಮಿಟಿಯ ನಿಯಮಗಳ ಪ್ರಕಾರ ಮಠದ ಬಸದಿಯ ಆಡಳಿತವ್ಯವಹಾರ ಕಮಿಟಿಗೆ ಮಾತ್ರ ಸೇರಿದ್ದು ಮಠದ ಬಸದಿಯಲ್ಲಿಟ್ಟಿರುವ ' ಗೋಲಕ 'ಕ್ಕೆ ಅಲ್ಲಿ ದರ್ಶನಕ್ಕೆ ಬರುವ ಯಾತ್ರಿಕರು ಏನಾದರೂ ಕಾಣಿಕೆಯನ್ನು ಹಾಕುತ್ತಾರೆ 1979 ರ ವಾರ್ಷಿಕ ಜಾತ್ರೆಯ ಸಮಯದಲ್ಲಿ ಮಠದ ಬಸದಿಯ ಆದಾಯ ಎಸ್.ಡಿ ಜೆ ಎಂ ಐ ಕಮಿಟಿಯ ನಿಧಿಗೆ ಹೋಗುತ್ತಿಲ್ಲವೆಂದು ನನಗೆ ತಿಳಿದುಬಂತು ಜಾತ್ರೆಯ ಸಮಯದಲ್ಲಿ ' ದೇವರ ಪೂಜೆ ' ನಡೆಯುವುದು ಮತ್ತು ' ದೇವೇಂದ್ರದರ್ಬಾರ'ನ್ನು ನಡೆಸುವುದು ಸಾಮಾನ್ಯ, ಈ ಸಂದರ್ಭದ ಹರಾಜು ಸಾವಿರಾರು ರೂಪಾಯಿಗಳನ್ನು ಮೀರುತ್ತದೆ

ಈ ಸಮಯದಲ್ಲಿಯೇ ಹಣ ಕೊಟ್ಟವರ ಹೆಸರಿನಲ್ಲಿ ವರ್ಷದಲ್ಲಿ ಒಂದು ದಿನ ಮಠದ ಬಸದಿಯಲ್ಲಿ ಪೂಜೆ ನಡೆಸುವುದಕ್ಕಾಗಿ ತಲಾ 150 ರೂಪಾಯಿಗಳಂತೆ ಹಣ ಸಂಗ್ರಹಿಸಲಾಯಿತು, ಹೀಗೆ ಸಂಗ್ರಹಿಸಿದ ಹಣ 60 000 ರೂಪಾಯಿಗಳಷ್ಟಾಗಿದೆ 1979 ರ ರಥೋತ್ಸವದ ವೆಚ್ಚಗಳ ವಿವರಗಳನ್ನು ಒದಗಿಸುವಂತೆ ನಾನು ಕಾರ್ಯದರ್ಶಿಯವರನ್ನು ಪ್ರಾರ್ಥಿಸಿದೆ ಕಾರ್ಯದರ್ಶಿಯವರು ತಮ್ಮ ವಿವರಣೆಯಲ್ಲಿ ಸ್ವಾಮೀಜಿಯವರ ನಿರ್ದೇಶನದಂತೆ ಹಣ ವೆಚ್ಚಮಾಡಿದೆ ಎಂದು ತಿಳಿಸಿದರು ನಾನು ಲೆಕ್ಕಗಳನ್ನು ಪರಿಶೀಲಿಸಿದ ಮೇಲೆ 1979 ರ ರಥೋತ್ಸವದ ವೆಚ್ಚಗಳನು ಪರಿಶೀಲಿಸಿ ವರದಿ ನೀಡುವಂತೆ ಲೆಕ್ಕಪತ್ರಗಳ ಉಪಸಮಿತಿಯ ಛೇರ್ಮನ್ನರನ್ನು ಪ್ರಾರ್ಥಿಸಿದೆ ಉಪಸಮಿತಿಯ ಛೇರ್ಮನ್ನರಾದ ಶ್ರೀ ಎಸ್ ಪಿ ಶಾಂತರಾಜರು ನೀಡಿರುವ ವರದಿಯ ಪ್ರತಿಯನ್ನು ಇದರ ಜೊತೆ ಕಳುಹಿಸಿದ್ದೇನೆ

ಇಂದ್ರದರ್ಬಾರನ್ನು ನಡೆಸಿದ ಸಂದರ್ಭದಲ್ಲಿ ಸ್ವೀಕರಿಸಿದ ದಾನಗಳ ಲೆಕ್ಕವಿವರಗಳನ್ನು ನಾನು ಕೇಳಿದಾಗ ಸ್ವಾಮೀಜಿಯವರನ್ನು ವಿಚಾರಿಸುವಂತೆ ನನಗೆ ಹೇಳಲಾಯಿತು. ಭಕ್ತರಿಂದ ತಲಾ 150 ರೂಪಾಯಿಗಳಂತೆ ಸಂಗ್ರಹಿಸಿದ ಸುಮಾರು 60.000 ರೂಗಳ ವಿವರಗಳನ್ನು ಕೇಳಿದಾಗಲೂ ನನಗೆ ಮೇಲಿನಂತೆಯೇ ಉತ್ತರ ಕೊಟ್ಟರು ಕಡೆಯಲ್ಲಿ

ಎಲ್ಲಾ ಆದಾಯಗಳನ್ನೂ ಸ್ವಾಮೀಜಿಯವರ ಹೆಸರಿನಲ್ಲಿ ಫಿಕ್ಸೆಡ್ ಡಿಪಾಜಿಟ್ ಲೆಕ್ಕ ದಲ್ಲಿ ಕಾರ್ಪೊರೇಷನ್ ಬ್ಯಾಂಕ್, ಶ್ರವಣಬೆಳಗೊಳದಲ್ಲಿ ಇಟ್ಟಿರುವುದಾಗಿ ನನಗೆ ಹೇಳ ಲಾಯಿತು ಇದೇ ರೀತಿ ಸ್ವಾಮೀಜಿಯವರ ಹೆಸರಿನಲ್ಲಿ ಎಷ್ಟು ಫಿಕ್ಸೆಡ್ ಡಿಪಾಸಿಟು ಗಳಿವೆ ಎಂಬುದನು ಗೊತ್ತುಹಚ್ಚಬೇಕಾಗಿದೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ಹಾಗೆಯೇ ಸರ್ಕಾರಕ್ಕೂ ಈ ಸಂಗತಿ ತಿಳಿದಿಲ್ಲ ಮಠದ ಬಸದಿಯ ಆದಾಯ ಅದು ಹೇಗೆ ಸ್ವಾಮೀಜಿಯವರ ಹೆಸರಿನಲ್ಲಿ ಫಿಕ್ಸೆಡ್ ಡಿಪಾಜಿಟ್ ಆಗಿ ಸೇರಿಹೋಯಿತೋ ಎಂಬುದು ತಿಳಿಯುವುದಿಲ್ಲ

ಈ ದಿನಗಳಲ್ಲಿ ಎಸ್. ಡಿ ಜೆ ಎಂ ಐ ಮೇ ಕಮಿಟಿಯ ಕಾರ್ಯದರ್ಶಿಯವರು, ಕಮಿಟಿಯು ಮಠದ ಬಸದಿಯ ಚಾರ್ಜನ್ನು ತೆಗೆದುಕೊಂಡಿಲ್ಲವೆಂದು ಹೇಳುತ್ತಿದ್ದಾರೆ ಕಾರ್ಯದರ್ಶಿಯವರ ಈ ಅಭಿಪ್ರಾಯ ಶುದ್ಧಾಂಗ ತಪ್ಪು ಮಠದ ಬಸದಿಯ ವ್ಯವಸ್ಥೆ ಮತ್ತು ಆಡಳಿತದ ವ್ಯವಹಾರಗಳು ಈ ದಿನವೂ ಸಹ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಆಡಳಿತದ ಅಂಕೆಯೊಳಗೇ ಇವೆ ಸರ್ಕಾರ ಕಮಿಟಿಯ ಷೆಡ್ಯೂಲ್‌ನಲ್ಲಿರುವ 31ನೇ ವಿಷಯವನ್ನು ಹಿಂದಕ್ಕೇನೂ ಪಡೆದಿಲ್ಲ ಈ ವಿಚಾರದಲ್ಲಿ ಸರ್ಕಾರವೇನಾದರೂ ಷೆಡ್ಯೂಲ್‌ನಲ್ಲಿರುವ 31ನೇ ವಿಷಯ (ಮಠದ ಬಸ್ತಿ) ವನ್ನು ಹಿಂದಕ್ಕೆ ಪಡೆದಿದ್ದರೆ, ಆ ಸರ್ಕಾರಿ ಆಜ್ಞೆಯ ಪ್ರತಿಯನ್ನು ನನಗೆ ಕಳುಹಿಸಿಕೊಡಿ ಎಂದು ನಾನು ಕಾರ್ಯದರ್ಶಿ ಯವರನ್ನು ಪ್ರಾರ್ಥಿಸಿದೆ ಕಾರ್ಯದರ್ಶಿಯವರು ನನಗೆ ಉತ್ತರ ನೀಡುವ ಸೌಜನ್ಯ ವನ್ನೂ ತೋರಿಸಲಿಲ್ಲ ! ಷೆಡ್ಯೂಲ್‌ನ ವಿಷಯ 31 ರಂತೆ ಮಠದ ಬಸದಿ ಈಗಲೂ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ಸೇರಿದೆ ಆದ್ದರಿಂದ ಅದರ ಆದಾಯ ಕಮಿಟಿಯ ನಿಧಿಗೆ ಹೋಗಲೇಬೇಕು

ಈ ಪರಿಸ್ಥಿತಿಗಳಿಂದಾಗಿ ತಾವು ಈ ಬಗ್ಗೆ ಕ್ರಮ ಕೈಗೊಂಡು ಕಾರ್ಯದರ್ಶಿ ಯವರು ಇದನ್ನೆಲ್ಲಾ ಸರಿಪಡಿಸುವ ಹಾಗೆ ಸೂಚನೆಗಳನ್ನು ನೀಡಬೇಕೆಂದು ಪ್ರಾರ್ಥಿ ಸುತ್ತೇನೆ ಕಮಿಟಿಯ ಛೇರ್ಮನ್ನರೂ ಆದ ಸ್ವಾಮೀಜಿಯವರು ತಾವು ಇದುವರೆಗೂ ಅಕ್ರಮವಾಗಿ ಸಂಗ್ರಹಿಸಿದ ಮತ್ತು ವೆಚ್ಚಮಾಡಿದ ಹಣಕ್ಕೆ ಸಂಬಂಧಿಸಿದ ಲೆಕ್ಕಪತ್ರ ಗಳನ್ನು ಮೇನೇಜಿಂಗ್ ಕಮಿಟಿಯ ವಶಕ್ಕೆ ಒಪ್ಪಿಸುವ ಹಾಗೆ ಈಗಲಾದರೂ ವ್ಯವಸ್ಥೆ ಯಾಗಬೇಕು ಇಲ್ಲದೇ ಹೋದರೆ ಇದು ಸರಿಪಡಿಸಲಾರದ ಸ್ಥಿತಿಯನ್ನು ಮುಟ್ಟ ಬಹುದು ಆದ್ದರಿಂದ ಸರ್ಕಾರ ತಕ್ಷಣ ಆಜ್ಞೆಗಳನ್ನಿತ್ತು ಮಠದ ಬಸದಿಯ ಲೆಕ್ಕಪತ್ರ ಗಳನ್ನು ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ವಹಿಸಿಕೊಡಬೇಕೆಂದು ಪ್ರಾರ್ಥಿ ಸುತ್ತೇನೆ

ತಮ್ಮ ವಿಶ್ವಾಸಿ,
ಸಿ ಬಿ ಎಂ. ಚಂದ್ರಯ್ಯ

**ದೂರು 4 :**

## ಶ್ರೀ ಜೈನಮಠದ ವಿಚಾರವಾಗಿ

ಮಾನ್ಯ ಮುಜರಾಯಿ ಮಂತ್ರಿಗಳಿಗೆ ತಾ॥ 12-6-1980
ಕರ್ನಾಟಕ ಸರ್ಕಾರ

ಮಾನ್ಯರೇ,

ಬಹಳ ಪುರಾತನ ಕಾಲದಿಂದಲೂ ಮಠದ ಬಸದಿಯ ಪಕ್ಕದಲ್ಲಿ ಶ್ರೀ ಜೈನ ಮಠದ ಹಳೆಯ ಕಟ್ಟಡವಿತ್ತು ಹಿಂದಿನ ಎಲ್ಲಾ ಭಟ್ಟಾರಕ ಸ್ವಾಮಿಜಿಯವರು ಅಲ್ಲಿಯೇ ವಾಸಿಸುತ್ತಿದ್ದರು ಪ್ರಾಚೀನ ಕಲ್ಲಿನ ಕಟ್ಟಡವಾಗಿದ್ದ ಅದಕ್ಕೆ ತನ್ನದೇ ಆದ ಭಾವನಾತ್ಮಕ ಮೌಲ್ಯವಿತ್ತು ಆ ಕಟ್ಟಡದ ಪಕ್ಕದಲ್ಲಿ ಒಂದು ಹಳೆಯ ಮನೆಯಿತ್ತು

ಮೇಲೆ ಹೇಳಿದ ಪ್ರಾಚೀನ ಕಲ್ಲಿನ ಕಟ್ಟಡ ಮತ್ತು ಅದಕ್ಕೆ ಹೊಂದಿಕೊಂಡಿದ್ದ ಹಳೆಯ ಮನೆಯನ್ನು ಧ್ವಂಸಮಾಡಿ ಅಲ್ಲಿ ಹೊಸದಾದ ಒಂದು ಸಣ್ಣ ಅರಮನೆಯ ರೀತಿಯ ಕಟ್ಟಡವನ್ನು ಹಲವು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಯಿತು ಇದರ ಪ್ರಾರಂಭೋತ್ಸವ ಸಮಾರಂಭ ತಾ॥ 19-6-80 ರಂದು ನೆರವೇರಲಿದೆಯೆಂದು ತಿಳಿದುಬಂದಿದೆ

ಈ ಕೆಳಕಂಡ ಅಂಶಗಳ ಸೂಕ್ಷ್ಮ ಪರಿಶೀಲನೆಯಾಗಬೇಕಾಗಿದೆ

1 ಮೇಲೆ ಹೇಳಿದ ಜೈನಮಠ ಮುಜರಾಯಿ ಇಲಾಖೆಗೆ ಸೇರಿದೆ

2 ಪ್ರಾಚೀನ ಕಟ್ಟಡವನ್ನು ಧ್ವಂಸ ಮಾಡುವುದಕ್ಕೂ, ಅದರ ಸ್ಥಾನದಲ್ಲಿ ಹೊಸದನ್ನು ನಿರ್ಮಿಸುವುದಕ್ಕೂ ಸರ್ಕಾರದಿಂದ ಅಗತ್ಯವಾಗಿ ಪಡೆಯಬೇಕಾದ ಅನುಮತಿಯನ್ನು ಪಡೆದುಕೊಂಡಿಲ್ಲ

3 ಪ್ರಾಚೀನವಾದ ಕಟ್ಟಡವನ್ನು ಧ್ವಂಸಮಾಡುವುದು "ಪ್ರಾಚೀನ ಕಟ್ಟಡ ಮತ್ತು ಸ್ಮಾರಕಗಳ ಸಂರಕ್ಷಣೆ" ಶಾಸನದ ಕಾನೂನಿಗೆ ವಿರುದ್ಧವಾದುದು

4 ನಿರ್ಮಾಣದ ವೆಚ್ಚಗಳನ್ನು ಯಾವ ಮೂಲಗಳಿಂದ ಪೂರೈಸಲಾಯಿತು?

5 ಈ ಉದ್ದೇಶಕ್ಕಾಗಿ ಯಾವ ದಾನಗಳನ್ನಾದರೂ ಸಂಗ್ರಹಿಸಿದ್ದರೆ, ಅದು ನಿಯಮದಂತೆ ಮುಜರಾಯಿ ಇಲಾಖೆಯ ಲೆಕ್ಕಕ್ಕೆ ಹೋಗಿರಬೇಕು

6 ಹೊಸ ಕಟ್ಟಡವನ್ನು ಕಟ್ಟುವುದಕ್ಕಾಗಿ ಮುಜರಾಯಿ ಇಲಾಖೆಯೇನಾದರೂ ಅಗತ್ಯವಾದ ನಿಧಿಯನ್ನು ಬಿಡುಗಡೆ ಮಾಡಿದೆಯೆ?

7 ಹೊಸ ಕಟ್ಟಡ ಕಟ್ಟುವುದರ ಪ್ಲಾನ್ ಮತ್ತು ಎಸ್ಟಿಮೇಟ್‌ಗಳನ್ನೇನಾದರೂ ಸರ್ಕಾರದ ಒಪ್ಪಿಗೆ ಪಡೆಯಲು ಸಲ್ಲಿಸಲಾಗಿದೆಯೆ?

8 ಇದರ ಬಗ್ಗೆ ಇನ್ನೇನಾದರೂ ಅಕ್ರಮಗಳು ಗೋಚರಿಸಿವೆಯೆ?

ಈಗಿನ ಮಠದ ಸ್ವಾಮಿಜಿಯವರು ಈಗೊಂದು ಸರ್ಕಾರವಿದೆ ಮತ್ತು ಮಠವು ಮುಜರಾಯಿ ಇಲಾಖೆಯ ಅಧಿಕಾರ ವ್ಯಾಪ್ತಿಗೊಳಪಟ್ಟಿದೆ ಎಂಬುದನ್ನು ಮರೆತೇ ಬಿಟ್ಟಿರುವಂತೆ ತೋರುತ್ತದೆ ಅವರು ತಮ್ಮ ಚಪಲ ಮತ್ತು ಭ್ರಮೆಗಳಿಗನುಗುಣ ವಾಗಿ ಯಾವ ಪ್ರತಿಬಂಧವೂ ಇಲ್ಲದೆ ನಡೆದುಕೊಳ್ಳುತ್ತಿದ್ದಾರೆ ಮೇಲಿನ ಅಕ್ರಮಗಳ ಕಿಮ್ಮತ್ತು ಸ್ವಾಮಿಜಿಯವರಿಗೆ ಗೊತ್ತಿದ್ದರೂ ಸಹ ಅವುಗಳನ್ನು ಅವರು ಗಮನಕ್ಕೆ ತೆಗೆದುಕೊಂಡಂತೆ ತೋರುವುದಿಲ್ಲ

ಈ ಸಂದರ್ಭದಲ್ಲಿ ನಾನು ಮೇನೇಜಿಂಗ್ ಕಮಿಟಿಯ ಕಾರ್ಯದರ್ಶಿಯವರಿಗೆ, ಷಡ್ಯೂಲನ್ನು ತಿದ್ದುಪಡಿಮಾಡಲು ಪ್ರಾರ್ಥಿಸುವ ನಿರ್ಣಯವೊಂದನ್ನು ಕಮಿಟಿಯ ಮುಂದಿಡಬೇಕೆಂದು ಪ್ರಾರ್ಥಿಸಿಕೊಂಡೆ ಆದರೆ ಮೇನೇಜಿಂಗ್ ಕಮಿಟಿಯ ಛೇರ್ಮನ್ನ ರಾದ ಸ್ವಾಮಿಜಿಯವರು ತಾ॥ 18-12-1979 ರಲ್ಲಿ ನಿರ್ಣಯವನ್ನು ಪ್ರತಿಭಟಿಸಿ ಉತ್ತರ ಬರೆದರು ಇದಾದನಂತರ ಕಮಿಟಿಯ ಮುಂದಿನ ಸಭೆಯನ್ನು ಅವರು ಕರೆ ಯಲೇ ಇಲ್ಲ ! ಈ ವಿಷಯವನ್ನು ಮೇನೇಜಿಂಗ್ ಕಮಿಟಿಯ ಇತರ ಸದಸ್ಯರ ಗಮ ಗಮನಕ್ಕೆ ತಂದರೂ ಯಾರೊಬ್ಬರೂ ಆಸಕ್ತಿವಹಿಸಲಿಲ್ಲ

ಈ ಪರಿಸ್ಥಿತಿಗಳಿಂದಾಗಿ ಶ್ರೀ ಜೈನಮಠದ ವ್ಯವಹಾರ ಮತ್ತು ಆದರ ಆಡಳಿತ ಗಳಲ್ಲಿ ಇನ್ನೂ ಏನಾದರೂ ಅವ್ಯವಹಾರಗಳು ಮುಂದುವರದುಕೊಂಡು ಹೋಗುತ್ತಿ ದ್ದರೆ, ಅವುಗಳನ್ನು ಪತ್ತೆ ಮಾಡುವುದಕ್ಕಾಗಿ ಒಂದು ವಿಚಾರಣಾ ಸಮಿತಿಯನ್ನು ನೇಮಿಸ ಬೇಕೆಂದು ನಾನು ಸರ್ಕಾರದಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ ಈ ಹಿಂದೆ 1968 ರಲ್ಲಿ ನಡೆದ ತಿದ್ದುಪಡಿಯಿಂದಾಗಿ ಕಮಿಟಿಯಿಂದ ಬೇರೆ ಮಾಡಲ್ಪಟ್ಟಿದ್ದ ಷೆಡ್ಯೂಲ್ ವಿಷಯ 33 ಮತ್ತು 34 ನ್ನು ಪುನಃ ಕಮಿಟಿಗೆ ವಹಿಸುವುದಕ್ಕಾಗಿ ಹಿಂದಿನ ತಿದ್ದುಪಡಿ ಯನ್ನು ವಜಾಮಾಡಬೇಕೆಂಬುದಾಗಿಯೂ ಇನ್ನೊಮ್ಮೆ ಪ್ರಾರ್ಥಿಸುತ್ತೇನ

ತಮ್ಮ ವಿಶ್ವಾಸಿ
ಸಿ ಬಿ ಎಂ ಚಂದ್ರಯ್ಯ

**ದೂರು 5 :**

**ಶ್ರೀ ಗೋಮಟೇಶ್ವರ ವಿದ್ಯಾಪೀಠದ ವಿಚಾರವಾಗಿ**

ತಾ॥ 14-6-1980

ಧಾರ್ಮಿಕ ದತ್ತಿಗಳ ಕಮಿಷನರ್‌ರವರಿಗೆ,
ಕರ್ನಾಟಕ ಸರ್ಕಾರ

ಮಾನ್ಯರೆ,

'ಶ್ರೀ ಗೋಮಟೇಶ್ವರ ವಿದ್ಯಾಪೀಠ' ಎಂಬ ಹೆಸರಿನಲ್ಲಿ ರಿಜಿಸ್ಟರಾದ ಸಂಸ್ಥೆಯೊಂದು ಹತ್ತು ವರ್ಷಗಳಿಂದಲೂ ಶ್ರವಣಬೆಳಗೊಳದಲ್ಲಿ ಕಾರ್ಯನಿರ್ವಹಿಸುತ್ತಿದೆ ವರ್ಷಂಪ್ರತಿ 20 ರಿಂದ 30 ರವರೆಗೆ ವಿದ್ಯಾರ್ಥಿಗಳು ಅಲ್ಲಿ ವಿದ್ಯಾಭ್ಯಾಸ ನಡೆಸುತ್ತಿತ್ತಿರುತ್ತಾರೆ ಸಮಿತಿಯವರು ಊಟ, ವಸತಿ ಮತ್ತು ವಿದ್ಯಾಭ್ಯಾಸದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾರೆ ಸಂಸ್ಥೆಯನ್ನು ನಡೆಸುವುದಕ್ಕಾಗಿ ಸಮಿತಿಯು ವಾರ್ಷಿಕವಾಗಿ ಡೊನೇಷನ್‌ಗಳನ್ನು ಸಂಗ್ರಹಿಸುತ್ತಿದೆ ಆಧಾರಯುತವಾಗಿ ತಿಳಿದುಬಂದಿರುವಂತೆ ಪ್ರತಿ ದಾನಿಗಳಿಂದ 300 ರೂಪಾಯಿಗಳನ್ನು ಸಂಗ್ರಹಿಸುತ್ತಾರೆ ಇದರೊಂದಿಗೆ ಸಮಿತಿ ಯಾತ್ರಿಕರಿಂದಲೂ ದಾನಗಳನ್ನು ಸಂಗ್ರಹಿಸುತ್ತಿದೆ ಮತ್ತೆ ಅಖಿಲ ಭಾರತ ದಿಗಂಬರ ಜೈನ ತೀರ್ಥಕ್ಷೇತ್ರ ಕಮಿಟಿ, ಬಾಂಬೆ — ಇಲ್ಲಿಂದಲೂ ವಾರ್ಷಿಕವಾದ ಡೊನೇಷನ್ ಸಿಗುತ್ತದೆ ಇದರ ವಿವರಗಳು ಸ್ಪಷ್ಟವಾಗಿ ತಿಳಿದಿಲ್ಲ ವಿದ್ಯಾಪೀಠವು, ಇನ್ನಿತರ ಸಂಸ್ಥೆಗಳು ಕಮಿಟಿಗಳು ಮುಂತಾದ ಅನೇಕ ಮೂಲಗಳಿಂದ ಡೊನೇಷನ್‌ಗಳನ್ನು ಪಡೆಯುತ್ತಿರಬಹುದು

ಮೇಲಿನವುಗಳಲ್ಲದೆ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯು ತನ್ನ ಅಭಿವೃದ್ಧಿ ನಿಧಿಯಿಂದ ಪ್ರತಿವರ್ಷ 12,000 ರೂಪಾಯಿಗಳನ್ನು ವಿದ್ಯಾಪೀಠಕ್ಕೆ ಕೊಡುತ್ತಿದೆ ವಿದ್ಯಾಪೀಠದ ಸಮಿತಿಯ ಪದಾಧಿಕಾರಿಗಳು ಯಾರೆಂಬುದು ತಿಳಿದುಬಂದಿಲ್ಲ ಸಮಿತಿಯ ಲೆಕ್ಕಪತ್ರಗಳು ವಾರ್ಷಿಕವಾಗಿ ಆಡಿಟ್ ಆಗುತ್ತವೆಯೇ ಎಂಬುದೂ ಸಹ ತಿಳಿದಿಲ್ಲ ಈ ಪರಿಸ್ಥಿತಿಗಳಿಂದಾಗಿ ನಾನು ಕಳಕಳಿಯಿಂದ ಪ್ರಾರ್ಥಿಸಿಕೊಳ್ಳುವುದೇನೆಂದರೆ ಶ್ರೀ ಗೋಮಟೇಶ್ವರ ವಿದ್ಯಾಪೀಠ ಸಮಿತಿಯ ವಿವರವಾದ ಪರಿಶೀಲನೆಯಾಗುವವರೆಗೂ, ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯಿಂದ ವಾರ್ಷಿಕವಾಗಿ ಕೊಡುತ್ತಿರುವ 12,000 ರೂಪಾಯಿಗಳನ್ನು ತಡೆಹಿಡಿದು ಆಜ್ಞೆ ಹೊರಡಿಸಬೇಕು, ಮತ್ತು ಮೇಲಿನ ಸಮಿತಿ ಸ್ಥಾಪನೆಯಾದಾಗಿನಿಂದ ಹಿಡಿದು ಈ ತಾರೀಖಿನವರೆಗೆ ಅದರ ಲೆಕ್ಕಪತ್ರಗಳ ವಿವರವಾದ ಆಡಿಟ್ ನಡೆಸಲು ಆಜ್ಞೆ ಹೊರಡಿಸಬೇಕೆಂದು ಪ್ರಾರ್ಥಿಸುತ್ತೇನೆ

ತಮ್ಮ ವಿಶ್ವಾಸಿ

(ಸಹಿ)

ಸಿ ಬಿ ಎಂ ಚಂದ್ರಯ್ಯ,

ಚಾಮುಂಡಿ ವಸತಿ ಗೃಹ

ಚಂದ್ರಗುಪ್ತ ರಸ್ತೆ

ಮೈಸೂರು-1

ಇವಿಷ್ಟೂ ಚಂದ್ರಯ್ಯನವರು 1980 ರ ಜೂನ್ ತಿಂಗಳಲ್ಲಿ ಸರ್ಕಾರಕ್ಕೆ ಸಲ್ಲಿಸಿದ ದೂರುಗಳು ಈ ಎಲ್ಲಾ ದೂರಿನ ಪ್ರತಿಗಳನ್ನು ಬೊಂಬಾಯಿಯ 'ಅಖಿಲಭಾರತ ದಿಗಂಬರ ಜೈನ ತೀರ್ಥಕ್ಷೇತ್ರ ಕಮಿಟಿಗೂ ಸಹ ಕಳುಹಿಸಿಕೊಟ್ಟರು

**ಅಕ್ಷಮ್ಯ ಅಪರಾಧ :**

ಚಂದ್ರಯ್ಯನವರ ಈ ಐದು ದೂರಿನ ವಿಷಯಗಳನ್ನು ಓದಿದರೆ ಜೀವನ ಮೌಲ್ಯಗಳಲ್ಲಿ ನಂಬಿಕೆಯಿರುವ ಯಾರೇ ಆಗಲಿ ಈ ದೂರುಗಳಲ್ಲಿ ಅಡಕವಾಗಿರುವ ವಿಷಯಗಳ ಒಗೆಗೆ ಬಹಳ ಗಂಭೀರವಾಗಿ ಆಲೋಚಿಸಬೇಕಾಗುತ್ತದೆ ಚಂದ್ರಯ್ಯನವರು ತಾವು ಆಪಾದಿಸಿರುವಂತೆ ಕಮಿಟಿಯಲ್ಲಿ ಮತ್ತು ಮಠದಲ್ಲಿ ಅವ್ಯವಹಾರಗಳು ನಡೆಯುತ್ತಿರುವ ವಿಚಾರಗಳ ಬಗೆಗೆ ಸ್ಪಷ್ಟವಾದ ಸಾಕ್ಷ್ಯಾಧಾರಗಳನ್ನು ಒದಗಿಸಿದ್ದಾರೆ ಚಂದ್ರಯ್ಯನವರು ತಮ್ಮ ದೂರುಗಳಲ್ಲಿ ಪ್ರಸ್ತಾಪಿಸಿರುವ ದಾನ, ವಂತಿಗೆ, ಕಾಣಿಕೆ ಕೊಡುಗೆ ಮುಂತಾದ ವಿಚಾರಗಳನ್ನೇ ತೆಗೆದುಕೊಂಡು ಯೋಚಿಸಿದರೆ, ಅವುಗಳನ್ನು ಸಂಗ್ರಹಿಸುತ್ತಿರುವ ರೀತಿ ನೀತಿಗಳು ಹಾಗೆ ಸಂಚಯವಾದ ಅಮೂಲ್ಯವಾದ ನಿಧಿಯನ್ನು ನಾನಾ ಅಭಿವೃದ್ಧಿ ಕಾರ್ಯಗಳಿಗಾಗಿ ವೆಚ್ಚಮಾಡುವ ರೀತಿ ನೀತಿಗಳು ಇವುಗಳೆಲ್ಲೆಲ್ಲಾ ಪ್ರಾಮಾಣಿಕತೆಯ ಸೊತ್ತು ತಾನೇ ತಾನಾಗಿ ಪ್ರಸರಿಸಿರಬೇಕು ಇಂತಹ ವ್ಯವಸ್ಥೆಯಲ್ಲಿ ನಿಯೋಜಿತರಾದವರು ಪ್ರಾಮಾಣಿಕತೆಯ ತತ್ವವನ್ನು ಸ್ವಯಂ ವಿಧಿಸಿಕೊಳ್ಳಬೇಕು ನಿಧಿಗಳ ಸಂಗ್ರಹಣೆಯ ವಿಚಾರದಲ್ಲಿ ನೀವು ಪ್ರಾಮಾಣಿಕರಾಗಿರಿ ಎಂದು ಇತರರಿಂದ ಹೇಳಿಸಿಕೊಳ್ಳಬಾರದು ಆದರೆ ಶ್ರವಣಬೆಳಗೊಳ ಮಠದಲ್ಲಿ ಮತ್ತು ಕಮಿಟಿಯಲ್ಲಿ ಸಂಬಂಧಪಟ್ಟವರು ಹೀಗೆ ನಡೆದುಕೊಳ್ಳುತ್ತಿದ್ದಾರೆಯೆ? ನಿಯಮಗಳನ್ನು ನಿರ್ಲಜ್ಜವಾಗಿ ಭಂಗಗೊಳಿಸುತ್ತಿದ್ದಾರಲ್ಲ ? ಕ್ಷೇತ್ರದ ಹಿತದೃಷ್ಟಿಯಿಂದ ಸರ್ಕಾರ ರಚಿಸಿರುವ ನೀತಿ ನಿಯಮಾವಳಿಗಳನ್ನು ಗೊತ್ತಿದ್ದೂ ರಾಜಾರೋಷಾಗಿ ಧಿಕ್ಕರಿಸುತ್ತಿರುವುದು ಅಕ್ಷಮ್ಯವಾದ ಅಪರಾಧವಲ್ಲವೆ?

ಶ್ರವಣಬೆಳಗೊಳ ಕ್ಷೇತ್ರ ಮುಜರಾಯಿ ಆಡಳಿತಕ್ಕೊಳಪಟ್ಟಿರುವುದರಿಂದ ಕ್ಷೇತ್ರದ ಮೇಲೆ ಸರ್ಕಾರದ ಹತೋಟಿ ನೇರವಾಗಿಯೇ ಇದೆ ಕ್ಷೇತ್ರಕ್ಕೆ ಬರುವ ಹಣವನ್ನು ಸಂಗ್ರಹಿಸುವ ಏಕಸ್ವಾಮ್ಯ ಕಮಿಟಿಯದೆಂಬ ಸ್ಪಷ್ಟ ನಿಯಮಗಳಿರುವಾಗ ಸ್ವಾಮೀಜಿಯವರೇ ಆಗಲಿ ಆ ನಿಯಮಗಳನ್ನು ಮುರಿಯಲು ಹೋಗಬಾರದು ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯಿರುವುದು ಸ್ವಾಮೀಜಿಯವರಿಗೆ ಇಷ್ಟವಿಲ್ಲದಿದ್ದ ಪಕ್ಷದಲ್ಲಿ ಈ ಬಗ್ಗೆ ಅವರು ನೇರವಾಗಿ ಸರ್ಕಾರಕ್ಕೆ ಬರೆಯಬಹುದು ! ಕಮಿಟಿಯಿದ್ದರೆ ಕಮಿಟಿಯ ರಶೀದಿಯಲ್ಲಿಯೇ ಹಣ ಸಂಗ್ರಹಿಸಬೇಕಾಗುತ್ತದೆ, ಕಮಿಟಿಯ ಲೆಕ್ಕಕ್ಕೆ ಜಮಾ ಮಾಡಬೇಕಾಗುತ್ತದೆ, ಸದಸ್ಯರನ್ನು ಕಲೆಹಾಕಬೇಕಾಗುತ್ತದೆ, ಸಭೆ

ನಡೆಸಬೇಕಾಗುತ್ತದೆ, ಅವರ ಸಾಧಕಬಾಧಕಗಳನ್ನು ಚರ್ಚಿಸಬೇಕಾಗುತ್ತದೆ, ನಿರ್ಣಯ ಮಾಡಬೇಕಾಗುತ್ತದೆ, ಮಂಜೂರು ಮಾಡಬೇಕಾಗುತ್ತದೆ, ಆಡಿಟ್ ಮಾಡಬೇಕಾಗುತ್ತದೆ ಇದರಿಂದ ಅಭಿವೃದ್ಧಿ ಕಾರ್ಯಗಳು ನಿಧಾನವಾಗುತ್ತವೆ, ಆದ್ದರಿಂದ ಇಂತಹ ಕಮಿಟಿಯೇ ಬೇಡ, ಕ್ಷೇತ್ರದ ಸಮಸ್ತ ಅಧಿಕಾರಗಳನ್ನೂ ಮಠಕ್ಕೇ ಬಿಟ್ಟುಕೊಡಿ—ಎಂದು ಬರೆದು ಕ್ಷೇತ್ರವನ್ನು ಮುಜರಾಯಿ ಇಲಾಖೆಯ ಹತೋಟಿಯಿಂದಲೂ ಬಿಡಿಸಿಕೊಂಡು ತಮ್ಮದೇ ಆದ ಸರ್ವಾಧಿಕಾರದ ಆಡಳಿತವನ್ನು ಸಾಧ್ಯವಾದರೆ ಸ್ಥಾಪಿಸಿಕೊಳ್ಳಬಹುದು ! ಇದು ಸಾಧ್ಯವಾಗದೇ ಹೋದರೆ ಸ್ವಾಮೀಜಿಯವರೂ ಸಹ ಸರ್ಕಾರ ರಚಿಸಿರುವ ಮೇನೇಜಿಂಗ್ ಕಮಿಟಿಯ ನಿಯಮಗಳಿಗೆ ಬದ್ಧರಾಗಿರಲೇಬೇಕಾಗುತ್ತದೆ ಜನಕ್ಕೊಂದು ಕಾನೂನು ಮಠದ ಸ್ವಾಮೀಜಿಗೊಂದು ಕಾನೂನು ಎಂಬುದಾಗಿ ನಮ್ಮ ರಾಷ್ಟ್ರದ ಸಂವಿಧಾನದಲ್ಲಿ ಎಲ್ಲಿಯೂ ಹೇಳಿಲ್ಲ !

## ಕ್ಷೇತ್ರ ಹಿತದ ಪ್ರಜ್ಞೆ :

ಚಂದ್ರಯ್ಯನವರು, ತಾ॥ 19-5-1979 ರಿಂದ ಹಿಡಿದು 1980ರ ಜೂನ್ ತಿಂಗಳಿನಲ್ಲಿ ಸರ್ಕಾರಕ್ಕ ದೂರು ಸಲ್ಲಿಸಿದ್ದನ್ನು ಒಳಗೊಂಡಂತೆ, ಅಲ್ಲಿಯವರೆಗೂ ನಡೆಸಿರುವ ವ್ಯವಹಾರಗಳನ್ನು ಅಭ್ಯಾಸ ಮಾಡಿದಾಗ ಅವರ ವ್ಯವಹಾರದಲ್ಲಿ ಯಾವ ಆಕ್ಷೇಪಾರ್ಹವಾದ ಸಂಗತಿಗಳೂ ಕಂಡುಬರುವುದಿಲ್ಲ ಅವರ ವ್ಯವಹಾರದಲ್ಲಿ ಕ್ಷೇತ್ರಹಿತದ ಪ್ರಜ್ಞೆ ಉದ್ದಕ್ಕೂ ಗೋಚರಿಸುತ್ತದೆ ಕ್ಷೇತ್ರಕ್ಕಾಗಿ ಸಂಗ್ರಹಿಸುವ ಹಣವಾಗಲಿ ಅಥವಾ ನಿರ್ವಹಿಸುವ ವೆಚ್ಚವಾಗಲೀ ಅದು ಕ್ರಮಬದ್ಧವಾಗಿರಬೇಕು ನಿಯಮಬದ್ಧವಾಗಿರಬೇಕು ಮತ್ತು ಪ್ರಾಮಾಣಿಕವಾಗಿರಬೇಕು ಎಂಬುದನ್ನು ಅವರು ತಮ್ಮ ದೀರ್ಘ ವ್ಯವಹಾರದಲ್ಲಿ ಪ್ರತಿಪಾದಿಸಿದ್ದಾರೆ ಯಾರೇ ಆಗಲಿ ಇದನ್ನು ಅಲ್ಲಗಳೆಯಲು ಸಾಧ್ಯವಿಲ್ಲ ಚಂದ್ರಯ್ಯನವರ ಆಕಾಂಕ್ಷೆ ನಿಜವಾಗಿಯೂ ಅಪೂರ್ವವಾದುದು ಏಕೆಂದರೆ " ಜೀವನ ತತ್ವಗಳನ್ನು ಮತ್ತು ಧಾರ್ಮಿಕ ಮೌಲ್ಯಗಳನ್ನು ಅನುಸರಣೆ ಮಾಡಿ " ಎಂದು ಸಮಾಜದ ಜನರಿಗೆ ಉಪದೇಶ ಮಾಡುವುದಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಿರುವ ಚಾರುಕೀರ್ತಿ ಸ್ವಾಮೀಜಿಯವರೇ ಧಾರ್ಮಿಕ ಸಂಸ್ಥೆಯ ನಿಯಮಗಳನ್ನು ತಾವೇ ಅದರ ಪ್ರಧಾನರಾಗಿದ್ದುಕೊಂಡು ತಿಳಿದೂ ತಿಳಿದೂ ಭಂಗಪಡಿಸುತ್ತಿದ್ದರೆ, ಅದೇ ಸಂದರ್ಭದಲ್ಲಿ ಒಬ್ಬ ಗೃಹಸ್ಥರಾದ ಚಂದ್ರಯ್ಯನವರು ಆ ಧರ್ಮ ಸಂಸ್ಥೆಯ ನಿಯಮಗಳನ್ನು ಸಂರಕ್ಷಿಸಲು ನ್ಯಾಯಬದ್ಧವಾಗಿ ಹೋರಾಡುತ್ತಿದ್ದಾರೆ !

ಮೇನೇಜಿಂಗ್ ಕಮಿಟಿಯ ಉಪನಿಯಮದ ಒಪ್ಪಿಗೆಯಿಲ್ಲದಿದ್ದರೂ ಸಹ ಹಣವನ್ನು ಮಂಜೂರು ಮಾಡಲಾಗಿದೆ ಈ ವಿಷಯದಲ್ಲಿ ಅನುಕೂಲವಾಗುವಂತೆ ಉಪನಿಯಮವನ್ನು ಮಾರ್ಪಾಟು ಮಾಡಲು ನಾವು ಸರ್ಕಾರವನ್ನು ಕೋರಬಹುದು " ಎಂದು

ಚಾರುಕೀರ್ತಿಯವರು ಸರ್ಕಾರ ರಚಿಸಿರುವ ನಿಯಮದ ಸಮಾಧಿ ಮಾಡಲು ಹಾತೊರೆ ಯುತ್ತಿದ್ದಾರೆ, ಅದೇ ಸಂದರ್ಭದಲ್ಲಿ "ಉಪನಿಯಮದ ಒಪ್ಪಿಗೆಯಿಲ್ಲದೆ ಹಣವನ್ನು ಮಂಜೂರು ಮಾಡಲೇಬಾರದು" ಎಂದು ಚಂದ್ರಯ್ಯನವರು ಸರ್ಕಾರ ಮಾಡಿರುವ ನಿಯಮವನ್ನು ಬದುಕಿಸಲು ಹೋರಾಡುತ್ತಿದ್ದಾರೆ ! ಈ ಸಂದರ್ಭದಲ್ಲಿ ಯಾರ ಅಂತ ರಂಗ ಪರಿಶುದ್ಧ ! ತ್ಯಾಗಿಗಳೆನಿಸಿಕೊಂಡ ಸನ್ಯಾಸಿಗಳದೋ ? ಅಥವಾ ಶ್ರಾವಕರೆನಿಸಿ ಕೊಂಡ ಚಂದ್ರಯ್ಯನವರದೋ ?

ಕ್ಷೇತ್ರವೆಂದಮೇಲೆ ಸ್ವಾಮೀಜಿಯವರು ಗಮನಕ್ಕೆ ಬರಲೇ ಬೇಕಲ್ಲವೇ ? ಕ್ಷೇತ್ರಾ ಭಿವೃದ್ಧಿಗೆ ಸ್ವಾಮೀಜಿಯವರೇ ಕಾರಣ ಎಂದು ಜನರು ತಿಳಿದುಕೊಳ್ಳುತ್ತಾರೆ ಮಠಕ್ಕೆ ದಾನ ಕೊಟ್ಟು ಮುಂದೆ ನಡೆಯುತ್ತಾರೆ ಕ್ಷೇತ್ರದ ಆಡಳಿತ ನಡೆಸಲು ಅಭಿವೃದ್ಧಿ ಕಾರ್ಯ ಮಾಡಲು ಮಠದಿಂದ ಹೊರತಾದ, ಮೇನೇಜಿಂಗ್ ಕಮಿಟಿಯೊಂದಿದೆ ಎಂಬುದು ಅವರ ಗಮನಕ್ಕೆ ಬರುವುದಿಲ್ಲ ಕ್ಷೇತ್ರದ ಪರವಾಗಿ ಎಲ್ಲಾ ರೀತಿಯ ದಾನಗಳನ್ನು ಸ್ವೀಕರಿಸುವ ಹಕ್ಕು ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಗೆ ಮಾತ್ರ ಇದೆ ಎಂಬುದು ಜನರಿಗೆ ತಿಳಿದುಬರುವುದಿಲ್ಲ ಸರ್ಕಾರದಿಂದ ನೇಮಕಗೊಂಡಿರುವ ಕಮಿಟಿಯ ಅಸ್ತಿತ್ವ ಯಾತ್ರಿಕರ ಗಮನಕ್ಕೆ ಬರದ ಹಾಗೆ ಮಠದವರು ತುಂಬಾ ಎಚ್ಚರ ವಹಿಸುತ್ತಾರೆ ಯಾತ್ರಿಕರು ದಾನ ಕೊಡುವಾಗ ಮಠದವರು ನಿಜವಾಗಿಯೂ ಪ್ರಾಮಾಣಿಕರಾಗಿದ್ದರೆ, ಯಾತ್ರಿಕರಿಗೆ ಎಸ್ ಡಿ ಜೆ ಎಂ ಐ ಕಮಿಟಿಗೆ ಹೋಗಿ ದಾನ ಕೊಡಿ ಎಂದು ಮಾರ್ಗ ದರ್ಶನ ಮಾಡಬೇಕು ಆದರೆ ಮಠದವರು ಹಾಗೆ ಮಾಡದೆ ತಮ್ಮಲ್ಲಿರುವ ಹತ್ತಾರು ಬಗೆಯ ಅಕ್ರಮವಾದ ರಶೀದಿ ಪುಸ್ತಕಗಳಿಂದ ಹಣವನ್ನು ಯಾವ ಅಂಜಿಕೆಯೂ ಇಲ್ಲದೆ ಕಸಿದುಕೊಳ್ಳುತ್ತಾರೆ

ಸ್ವಾಮೀಜಿಯವರು ವಿದ್ಯಾನಂದ ನಿಲಯ ಧರ್ಮಶಾಲೆಯ ನಿರ್ಮಾಣಕ್ಕಾಗಿ ಶ್ರಮವಹಿಸಿದ್ದಾರೆ ನಿಜ ಆದರೆ ಈ ಸಂದರ್ಭದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಯಾವ ಕಡೆಯ ಜನರೇ ಆಗಲಿ ದಾನ ನೀಡುವಾಗ ಕ್ಷೇತ್ರಾಭಿವೃದ್ಧಿ ಗೆಂದು ನೀಡುತ್ತಾರೆಯೇ ಹೊರತು ಇತರರ ಮೋಜಿನ ಜೀವನ ಮತ್ತು ಲಾಭಗಳಿಗಾಗಿ ಅಲ್ಲ ಸ್ವಾಮೀಜಿಯವರೂ ಅಷ್ಟೆ, ಕ್ಷೇತ್ರಾಭಿವೃದ್ಧಿಗೆಂದು ಹಣ ಸಂಗ್ರಹಿಸಿದ್ದಾರೆಯೇ ಹೊರತು, ಇತರ ಉದ್ದೇಶಗಳಿಗಲ್ಲ ಭಕ್ತರು ಶ್ರೀ ಗೋಮಟೇಶ್ವರನನ್ನು ಮತ್ತು ಕ್ಷೇತ್ರವನ್ನು ನೋಡಿ ದಾನವನ್ನು ಕೊಡುತ್ತಾರೆಯೇ ಹೊರತು ಇತರರನ್ನಲ್ಲ ಹೀಗೆ ಕ್ಷೇತ್ರಾಭಿವೃದ್ಧಿಯ ದೃಷ್ಟಿಯಿಂದ ವಿದ್ಯಾನಂದ ನಿಲಯಕ್ಕಾಗಿ ಬಂದ ಹಣ ಅದು ವೆಚ್ಚ ವಾಗುವ ಮೊದಲು ಸರ್ಕಾರ ರಚಿಸಿರುವ ಸ್ಪಷ್ಟ ನಿಯಮಗಳ ಪ್ರಕಾರ ಎಸ್ ಡಿ ಜೆ ಎಂ.ಐ ಮೇನೇಜಿಂಗ್ ಕಮಿಟಿಯ ನಿಧಿಗೆ ಅಥವಾ ಮುಜರಾಯಿ ಇಲಾಖೆಯ ನಿಧಿಗೆ ತಪ್ಪದೆ ಹೋಗಲೇಬೇಕಾಗಿತ್ತು ಆದರೆ ಹಾಗೆ ಹೋಗದೆ, ಕ್ರಮಬದ್ಧವಾದ ಲೆಕ್ಕಪತ್ರ

ಗಳ ವ್ಯವಸ್ಥೆಯಿಲ್ಲದೆ ವಿದ್ಯಾನಂದ ನಿಲಯ ಧರ್ಮಶಾಲೆ ನಿರ್ಮಾಣವಾಗಿದೆ ಹೀಗೆ ನೈತಿಕ ಹಿನ್ನೆಲೆಯಿಲ್ಲದೆ ನಿರ್ಮಾಣಗೊಂಡು ನಿಂತಿರುವ ವಿದ್ಯಾನಂದ ನಿಲಯ ಧರ್ಮಶಾಲೆ ಕ್ಷೇತ್ರದ ಅನೌರಸ ಸಂತಾನವೆನಿಸಿಕೊಂಡಿದೆ

ಹಣವನ್ನು ಸಂಗ್ರಹಿಸುವುದಕ್ಕೆ ಮೊದಲು, ಅದನ್ನು ಸಂಗ್ರಹಿಸಿದ ನಂತರ ಕಟ್ಟಡ ಕ್ಕಾಗಿ ಖರ್ಚು ಮಾಡುವ ಮೊದಲು ಸ್ವಾಮೀಜಿಯವರು ಸರ್ಕಾರ ರಚಿಸಿರುವ ನಿಯಮ ಗಳನ್ನು ಏತಕ್ಕಾಗಿ ಗಾಳಿಪಾಲು ಮಾಡಿದರು ? ಅದರ ಕಾರಣವಿಷ್ಟೆ, ಕ್ಷೇತ್ರದ ಅಭಿ ವೃದ್ಧಿಯ ಹೆಸರಿನಲ್ಲಿ ಬರುವ ಹಣವನೆಲ್ಲಾ ನ್ಯಾಯದಂತೆ ಕಮಿಟಿಯ ಬೊಕ್ಕಸಕ್ಕೆ ಹಾಕಿಸಿ ಧರ್ಮಶಾಲೆಯನ್ನು ಕಟ್ಟಿದ್ದರೆ, ಧರ್ಮಶಾಲೆಯು ಕಮಿಟಿಯ ಆಸ್ತಿಯಾಗಿ ಅದರ ಆದಾಯವೆಲ್ಲಾ ಸಹಜವಾಗಿ ಕಮಿಟಿಯ ಲೆಕ್ಕಕ್ಕೆ ಹೋಗುತ್ತಿತ್ತು ಹೀಗಾಗು ವುದು ಸ್ವಾಮೀಜಿಯವರಿಗೆ ಇಷ್ಟವಿಲ್ಲ ತಾವು ಮಾಡುತ್ತಿರುವುದು ಕಾನೂನಿಗೆ ವಿರುದ್ಧ ವಾದ ಕೆಲಸವಾದರೂ ಪರವಾಗಿಲ್ಲ ಇದರಿಂದ ತಮ್ಮ ನೈತಿಕ ಹಿನ್ನೆಲೆಗೆ ಧಕ್ಕೆಯಾದರೂ ಪರವಾಗಿಲ್ಲ, ತಾವು ಸ್ವೇಚ್ಛೆಯಾಗಿ ಖರ್ಚು ಮಾಡಲು ಹಣವನ್ನೊದಗಿಸುವ ಆದಾಯದ ಮೂಲಗಳು ಅವರಿಗೆ ಬೇಕೇಬೇಕಾಗಿದ್ದುವು ಈ ದೃಷ್ಟಿಯೇ ಪ್ರಧಾನ ಕಾರಣವಾಗಿ ವಿದ್ಯಾನಂದ ನಿಲಯ ಧರ್ಮಶಾಲೆ ನಿರ್ಮಾಣವಾಯಿತು ವೈರಾಗ್ಯಮೂರ್ತಿಯಾದ ಗೊಮ್ಮಟನ ಪೀಠದಲ್ಲಿ ಮಂಡಿಸಿರುವ ಚಾರುಕೀರ್ತಿ ಸ್ವಾಮೀಜಿಯವರ ಪರಿಗ್ರಹಾಕಾಂಕ್ಷೆ ಈ ರೀತಿಯಿದೆ ! ಭೌತಿಕವಾಗಿ ಬೆಳೆಯುವ ಕ್ಷೇತ್ರ ಅದು ಸ್ಥಿರವಾದ, ಶಾಶ್ವತವಾದ ನೈತಿಕ ತಳಹದಿಯ ಮೇಲೆ ನಿಂತಿರಬೇಡವೇ ?

ಮಠದ ಬಸದಿಯ ವಿಚಾರದಲ್ಲೂ ಇಂತಹ ನಿಯಮ ಭಂಗವಾಗಿದೆಯೆಂಬುದರಲ್ಲಿ ಸಂಶಯವಿಲ್ಲ 1979 ರ ರಥೋತ್ಸವ ಕಾಲದಲ್ಲಿ ಮಠದ ಬಸದಿಯಲ್ಲಿ, ವರ್ಷದಲ್ಲಿ ಒಂದು ದಿನ ಒಬ್ಬೊಬ್ಬರ ಹೆಸರಿನಲ್ಲಿ ಪೂಜೆ ನಡೆಸುವ ವ್ಯವಸ್ಥೆಯ ಯೋಜನೆಗೆ 150 ರೂಪಾಯಿ ಹಣ ಕೊಟ್ಟವರಲ್ಲಿ ನಾನೂ ಒಬ್ಬನಾಗಿದ್ದೇನೆ ಈ ಯೋಜನೆಯ ವಿಚಾರ ವನ್ನು ಆ ಸಮಯದಲ್ಲಿ ಜನರ ಗಮನಕ್ಕೆ ತರುತ್ತಿದ್ದವರಲ್ಲಿ ಎಂ ಸಿ ಅನಂತರಾಜಯ್ಯ ನವರೂ ಒಬ್ಬರು ನಾನು ಹಣ ನೀಡುವಾಗ ಸಂಗ್ರಹಣೆಯ ಕ್ರಮವೆಲ್ಲಾ ಕಾನೂನು ಬದ್ಧವಾಗಿರಬಹುದು ಅದರ ವಿನಿಯೋಗವೂ ಕ್ರಮಬದ್ಧವಾಗಿರಬಹುದು ಎಂದು ತಿಳಿದು ಕೊಂಡಿದ್ದೆ ಆದರೆ ಈಗ ಆ ಹಣ ಸರ್ಕಾರದ ನಿಯಮಗಳ ಪ್ರಕಾರ ಎಸ್ ಡಿ ಜೆ ಎಂ ಐ ಕಮಿಟಿಗೆ ಹೋಗಿಲ್ಲವೆಂಬುದನ್ನು ತಿಳಿದು ವಿಸ್ಮಿತನಾಗಿದ್ದೇನೆ ಕ್ಷೇತ್ರಕ್ಕೆ ಸಂಬಂಧಿಸಿದ ಪೂಜೆ, ರಥೋತ್ಸವ, ಇತರ ಉತ್ಸವಗಳು ಮುಂತಾದ ಎಲ್ಲಾ ಕಾರ್ಯ ಗಳನ್ನು ನಡೆಸುವ ಜವಾಬ್ದಾರಿ ಮೇನೇಜಿಂಗ್ ಕಮಿಟಿಯದು ಕಮಿಟಿಯ ನಿಯಮ 8 ರ ಉಪನಿಯಮ (2) ರಲ್ಲಿ (a) ವಿಷಯದಲ್ಲಿ ದಿನನಿತ್ಯದ ಪೂಜಾ ವ್ಯವಸ್ಥೆಯನ್ನು ನೋಡಿಕೊಳ್ಳುವ ಜವಾಬ್ದಾರಿ ಮೇನೇಜಿಂಗ್ ಕಮಿಟಿಯದು ಎಂದು ಸ್ಪಷ್ಟವಾಗಿ ಹೇಳ

ಲಾಗಿದೆ ನಿಯಮ ಹೀಗಿದ್ದ ಮೇಲೆ ಜನಸಮೂಹದಿಂದ 150 ರೂಪಾಯಿಗಳಂತೆ ಸಂಗ್ರಹಿಸಿರುವ ಎಲ್ಲಾ ಹಣವೂ ಮೇನೇಜಿಂಗ್ ಕಮಿಟಿಯ ನಿಧಿಗೆ ಸೇರ್ಪಡೆಯಾಗಲೇ ಬೇಕಾಗಿತ್ತು ಆದರೆ ಆ ಹಣ ಹಾಗೆ ಸೇರಿಲ್ಲ ! ಈ ಅಕ್ರಮ ವ್ಯವಹಾರಕ್ಕೆ ಪೂರ್ಣ ಜವಾಬ್ದಾರರಾದ ಸ್ವಾಮಿಜಿಯವರು ಇದಕ್ಕ ಸಮಂಜಸವಾದ ಉತ್ತರವನ್ನು ಕೊಡ ಬಲ್ಲರೇ ? ಇದಕ್ಕೆ ಎಂ ಸಿ ಅನಂತರಾಜಯ್ಯನವರು ಏನು ಹೇಳುತ್ತಾರೆ ?

ಶ್ರೀ ಗೋಮಟೇಶ್ವರ ವಿದ್ಯಾಪೀಠದಲ್ಲೂ ಸಾಕಷ್ಟು ಅವ್ಯವಸ್ಥೆಗಳಿವೆ ಮೇನೇಜಿಂಗ್‌ಕಮಿಟಿಯು ವಿದ್ಯಾಪೀಠಕ್ಕೆ ವಾರ್ಷಿಕವಾಗಿ ಕೊಡುತ್ತಿರುವ 12,000 ರೂಪಾಯಿಗಳ ಗ್ರಾಂಟಿನ ಅವ್ಯವಸ್ಥೆಯನ್ನು ಗಮನಿಸಬೇಕು ಗ್ರಾಂಟಿನ ಹಣ ಸರಿಯಾಗಿ ವಿನಿಯೋಗವಾಗುತ್ತಿದೆಯೋ ಇಲ್ಲವೆ ಎಂಬುದನ್ನು ಖಚಿತಪಡಿಸಿಕೊಳ್ಳದೆ ಕಣ್ಣು ಮುಚ್ಚಿಕೊಂಡು ಈ ಗ್ರಾಂಟನ್ನು ಕೊಡಲಾಗುತ್ತಿದೆ ವಿದ್ಯಾಪೀಠ ಸರಿಯಾದ ಲೆಕ್ಕಪತ್ರಗಳನ್ನಿಟ್ಟಿದೆಯೋ ? ಪಡೆದ ಹಣವನ್ನು ವೆಚ್ಚಮಾಡಿದ ಹಿಂದಿನ ವರ್ಷದ ಲೆಕ್ಕಪತ್ರಗಳು ಕಮಿಟಿಗೆ ಬಂದಿವೆಯೋ ? ಇಲ್ಲವೇ? ಎಂಬ ಯಾವ ಪರಿಶೀಲನೆಯನ್ನೂ ಮಾಡದೆ, ಕೊಟ್ಟ ಹಣಕ್ಕೆ ವಿವರವನ್ನೂ ಕೇಳದೆ ಅಂಥವಾಗಿ ಕಮಿಟಿಯು ಗ್ರಾಂಟನ್ನು ನೀಡುತ್ತಿದೆ ಇದು ಮೇನೇಜಿಂಗ್ ಕಮಿಟಿಯ ಆಡಳಿತ ವಿಧಾನ ಎಷ್ಟು ಶೋಚನೀಯ ಎಂಬುದಕ್ಕ ಒಂದು ಜ್ವಲಂತ ನಿದರ್ಶನ ಸ್ವಾಮಿಜಿಯವರ ನೇತೃತ್ವದಲ್ಲಿಯೇ ಆ ವಿದ್ಯಾಪೀಠವೂ ಇರುವುದರಿಂದ ಲೇನಾದರೂ ಲೆಕ್ಕವನ್ನು ಕಮಿಟಿಯವರು ಕೇಳುತ್ತಿಲ್ಲವೇ ? ಸಾರ್ವಜನಿಕರ ನಿಧಿಯ ಬಗ್ಗೆ ವಿದ್ಯಾಪೀಠದ ಸಮಿತಿಯೇ ಆಗಲಿ ಅಥವಾ ಮೇನೇಜಿಂಗ್ ಕಮಿಟಿಯೇ ಆಗಲಿ ಇಷ್ಟೊಂದು ಅಸಡ್ಡೆಯನ್ನು ತೋರಿಸಬಹುದೇ ? ಈ ಅಕ್ರಮಗಳನ್ನೆಲ್ಲಾ ವಿಚಾರಿಸದೆ ಮೇನೇಜಿಂಗ್ ಕಮಿಟಿಯ ಸದಸ್ಯರು ಏನು ಮಾಡುತ್ತಿದ್ದಾರೆ ?

ಕ್ಷೇತ್ರದಲ್ಲಿ ನಡೆಯುತ್ತಿರುವ ಈ ಅವ್ಯವಹಾರಗಳನ್ನೆಲ್ಲಾ ಕ್ರಮಪಡಿಸಲು ಹೋರಾಡಿದ ಚಂದ್ರಯ್ಯನವರನ್ನು ಯಾರೇ ಆಗಲಿ ಮೆಚ್ಚಬೇಕು ಅವರು ಸರ್ಕಾರಕ್ಕೆ ದೂರುಗಳನ್ನು ಸಲ್ಲಿಸುವುದಕ್ಕೆ ಮುಂಚೆ ಕಮಿಟಿಯನ್ನು ಸರಿಯಾದ ಹಾದಿಗೆ ಹಚ್ಚಲು ನಿರಂತರವಾಗಿ ಪ್ರಯತ್ನಿಸಿದರು ಅವರ ಪ್ರಾಮಾಣಿಕವಾದ ಪ್ರಯತ್ನಗಳಿಗೆಲ್ಲಾ ಸಹ ಸದಸ್ಯರ ಬೆಂಬಲ ಸಿಗದೆ ನಿಯಮಭಂಜಕರ ಕೈಯೇ ಮೇಲಾದಾಗ ಪ್ರಾಮಾಣಿಕವಾದ ವ್ಯವಸ್ಥೆಯನ್ನು ಉಳಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದಲೇ ಅವರು ಸರ್ಕಾರಕ್ಕೆ ದೂರುಗಳನ್ನು ಸಲ್ಲಿಸಿದರು

**ವಿದ್ಯಾನಂದರ ಗಮನಕ್ಕೆ ದೂರುಗಳು :**

ವಿದ್ಯಾನಂದರು ಇಂದೂರನ್ನು ಬಿಟ್ಟು ಶ್ರವಣಬೆಳಗೊಳದ ಕಡೆಗೆ ವಿಹಾರ ಮಾಡುತ್ತಿದ್ದಂತೆಯೇ ಕಾಲಕಾಲಕ್ಕೆ ಶ್ರವಣಬೆಳಗೊಳದ ಕಮಿಟಿಯ ಎಲ್ಲಾ ವ್ಯವಹಾರಗಳ

ವರದಿ ಅವರಿಗೆ ತಲುಪುತ್ತಿತ್ತು. ಕ್ಷೇತ್ರದ ಸಮಸ್ತ ಆಗುಹೋಗುಗಳೂ ಅವರಿಗೆ ತಿಳಿಯುತ್ತಿದ್ದವು. ಮಹಾಭಾರತದ ಕುರುಕ್ಷೇತ್ರಯುದ್ಧದ ಸುದ್ಧಿಯನ್ನು ಧೃತರಾಷ್ಟ್ರನಿಗೆ ಪ್ರತಿನಿತ್ಯವೂ ಸಂಜಯ ವರದಿ ಮಾಡುತ್ತಿದ್ದಂತೆ ಇಲ್ಲಿ ವಿದ್ಯಾನಂದರಿಗೆ ಯಾರು ವರದಿ ಮಾಡುತ್ತಿದ್ದರು ಎಂಬುದನ್ನು ನಾನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ! ಖಂಡಿತವಾಗಿ ಕೇಳುವವರಿಗೆ ಖಂಡಿತವಾಗಿ ಹೇಳುವವರೂ ಇರುತ್ತಾರಲ್ಲವೆ ?

ತಮ್ಮ ಸ್ವಾಗತ ಸಮಾರಂಭಗಳ ಹಣದ ಮಂಜೂರಾತಿಗೆ ಆಕ್ಷೇಪಣೆಗಳನ್ನು ಹಾಕಿದ್ದ ಸಿ ಬಿ ಎಂ ಚಂದ್ರಯ್ಯ ಮತ್ತು ಎಸ್ ಪಿ ಶಾಂತರಾಜರು ಕಮಿಟಿಯಿಂದ ಹೊರಗುಳಿಯುವಂತಾದ ಸುದ್ದಿ ವಿದ್ಯಾನಂದರು ಕರ್ನಾಟಕ ಪ್ರವೇಶ ಮಾಡುವುದಕ್ಕೆ ಮುಂಚೆಯೇ ಅವರಿಗೆ ತಿಳಿದಿತ್ತು. ವಿದ್ಯಾನಂದರ ವಿಹಾರ 1980 ರ ಜೂನ್ ತಿಂಗಳ 1 ನೇ ತಾರೀಖಿನೊಳಗೆ ಹುಬ್ಬಳ್ಳಿಯನ್ನು ಬಿಟ್ಟಿತು. ಚಂದ್ರಯ್ಯನವರು ತಾ॥ 6-6-80 ರಂದು ಮೋನೇಜಂಗ್ ಕಮಿಟಿ ಮತ್ತು ಮಠಕ್ಕೆ ಸಂಬಂಧಿಸಿದ ದೂರನ್ನು ಸರ್ಕಾರಕ್ಕೆ ಸಲ್ಲಿಸಿದ ದಿವಸ ವಿದ್ಯಾನಂದರು ಧಾರವಾಡ ಜಿಲ್ಲೆಯ ಬಂಕಾಪುರದಲ್ಲಿದ್ದರು. ಚಂದ್ರಯ್ಯನವರು ತಾ॥ 9–6–80 ರಂದು 'ವಿದ್ಯಾನಂದ ನಿಲಯ' ಮತ್ತು 'ಮಠದ ಬಸ್ತಿ'ಗೆ ಸಂಬಂಧಿಸಿನ ದೂರನ್ನು ಸಲ್ಲಿಸಿದ ದಿವಸ, ವಿದ್ಯಾನಂದರು ಧಾರವಾಡ ಜಿಲ್ಲೆಯ ಹನುಮನ ಹಟ್ಟಿಯಲ್ಲಿದ್ದರು. ತಾ॥ 12–6–1980 ರಂದು ಶ್ರೀ ಜೈನಮಠಕ್ಕೆ ಸಂಬಂಧಿಸಿದ ದೂರನ್ನು ಸಲ್ಲಿಸಿದ ದಿವಸ ವಿದ್ಯಾನಂದರು ಚಿತ್ರದುರ್ಗ ಜಿಲ್ಲೆಯ ಹರಿಹರದಲ್ಲಿದ್ದರು. ತಾ॥ 14–6–80 ರಂದು 'ಶ್ರೀ ಗೋಮಟೇಶ್ವರ ವಿದ್ಯಾಪೀಠಕ್ಕೆ ಸಂಬಂಧಿಸಿದಂತೆ ದೂರನ್ನು ಸಲ್ಲಿಸಿದ ದಿವಸವೂ ವಿದ್ಯಾನಂದರು ಹರಿಹರದಲ್ಲಿಯೇ ಇದ್ದರು. ತಾ॥ 15–6–80 ರಂದು ದಾವಣಗೆರೆಗೆ ಆಗಮಿಸಲಿದ್ದರು. ತಾ॥ 27–6–80 ಕ್ಕೆ ಹೊಸದುರ್ಗ ಸೇರಲಿದ್ದರು.

ವಿದ್ಯಾನಂದರು ಹೀಗೆ ವಿಹಾರ ಮಾಡುತ್ತಾ ಬರುತ್ತಿರುವಾಗ ಅವರು ಹೊಸದುರ್ಗ ತಲುಪುವ 1980 ರ ಜೂನ್ ಕಡೆಯ ವಾರದೊಳಗಾಗಿ ಅಥವಾ ಬೆಳ್ಳೂರನ್ನು ತಲುಪುವ ಜುಲೈ ಹದಿಮೂರರೊಳಗಾಗಿ ಚಂದ್ರಯ್ಯನವರು ಸರ್ಕಾರಕ್ಕೆ ಸಲ್ಲಿಸಿರುವ ಐದು ದೂರುಗಳ ಸುದ್ದಿಯೂ ವಿದ್ಯಾನಂದ ಮುನಿಗಳನ್ನು ತಲುಪಿತ್ತು. ದೂರುಗಳ ಪ್ರತಿಯೊಂದು ವಿವರಗಳೂ ಅವರ ಗಮನಕ್ಕೆ ಬಂದವು. ಈ ಸಂದರ್ಭದಲ್ಲಿ ವಿದ್ಯಾನಂದರು ಮಾಡಬಹುದಾಗಿದ್ದ ಉತ್ತಮ ಕಾರ್ಯವೆಂದರೆ, ದೂರುಗಳನ್ನು ಸಲ್ಲಿಸಿದ್ದ ಚಂದ್ರಯ್ಯನವರನ್ನು ಕರೆಸಿ ಅವರೊಂದಿಗೆ ಚರ್ಚಿಸುವುದರ ಮೂಲಕ ಅವರ ಸ್ಪಷ್ಟೀಕರಣವನ್ನು ಕೇಳಬಹುದಾಗಿತ್ತು. ಆದರೆ ಚಂದ್ರಯ್ಯನವರು ಕಮಿಟಿಯಲ್ಲಿದ್ದಾಗ ನಡೆಸಿದ ನ್ಯಾಯೋಚಿತ ಹೋರಾಟದ ಪ್ರತಿಯೊಂದು ಅಂಶವೂ ವಿದ್ಯಾನಂದರಿಗೆ ಚೆನ್ನಾಗಿ ತಿಳಿದಿದ್ದುದರಿಂದ ಈ ನೇರವಾದ ಮಾರ್ಗವನ್ನು ಅವರು ಅನುಸರಿಸುವ

ಹಾಗೆಯೇ ಇರಲಿಲ್ಲ ! ಒದಲಾಗಿ ಚಂದ್ರಯ್ಯನವರನ್ನು ಯಾವ ವಿಧದಿಂದಲಾದರೂ ಸರಿ ತಪ್ಪಿತಸ್ಥರನ್ನಾಗಿಸಲು ಸನ್ನಾಹ ನಡೆಸಿದರು

ಮುಂದೆ ವಿದ್ಯಾನಂದರು ಚಿತ್ರದುರ್ಗ ಜಿಲ್ಲೆಯನ್ನು ಬಿಟ್ಟು ಬೆಳ್ಳೂರನ್ನು ತಲುಪುವ ನಡುವಿನ ದಿನಗಳಲ್ಲಿ ಚಂದ್ರಯ್ಯನವರನ್ನು ಮಣಿಸುವ ಮಾರ್ಗಗಳನ್ನು ಹುಡುಕ ತೊಡಗಿದರು ಚಂದ್ರಯ್ಯನವರು ಕಾರ್ಯದರ್ಶಿಯಾಗಿದ್ದ ಶ್ರೀ ಗೋಮಟೇಶ್ವರ ಎಜುಕೇಷನ್ ಸೊಸೈಟಿ ನಡೆಸುತ್ತಿದ್ದ ಶ್ರೀ ಗೋಮಟೇಶ್ವರ ಮಹಾವಿದ್ಯಾಲಯ ಕಾಲೇಜು 1976 ರಲ್ಲಿ ಮುಚ್ಚಿದ್ದ ಸಂಗತಿಯೂ ಈ ಸಂದರ್ಭದಲ್ಲಿ ಅವರ ನೆನಪಿನಲ್ಲಿತ್ತು ಅಂತೂ ವಿದ್ಯಾನಂದ ಮುನಿಗಳು ಬೆಳ್ಳೂರನ್ನು ತಲುಪುವುದರೊಳಗೆ ಚಂದ್ರಯ್ಯನವರನ್ನು ಸಮಾಜದ ದೃಷ್ಟಿಯಲ್ಲಿ ತಪ್ಪಿತಸ್ಥರನ್ನಾಗಿ ಮಾಡುವ ಪಿತೂರಿಯ ಕೃತ್ರಿಮ ಯೋಜನೆಗಳು ಸಿದ್ಧವಾಗಿದ್ದುವು

ಚಂದ್ರಯ್ಯನವರು ತಾ॥ 7-10-1979 ರಂದು ವಿದ್ಯಾನಂದ ನಿಲಯಕ್ಕೆ ಹೋಗಿ ಅಲ್ಲಿನ ವ್ಯವಸ್ಥಾಪಕರಿಗೆ ಹಣವನ್ನು ನೀಡಿ ಶ್ರೀ ಜೈನ ಮಠದ ಹೆಸರಿನಲ್ಲಿದ್ದ ರಶೀದಿ ತಂದ ಪ್ರಸಂಗವನ್ನೇ ವಿದ್ಯಾನಂದರು ತಮ್ಮ ಪಿತೂರಿಗೆ ಅನುಕೂಲವಾಗುವಂತೆ ಮಾರ್ಪಡಿಸಿಕೊಂಡರು ಈ ಪಿತೂರಿ ನಾಟಕದ ಮೊದಲನೆಯ ಅಂಕದಲ್ಲಿ ಚಂದ್ರಯ್ಯನವರು ಮತ್ತು ಶಾಂತರಾಜರ ಸ್ನೇಹವನ್ನು ಮುರಿಯುವ ಸಂಚಿತ್ತು ಚಂದ್ರಯ್ಯನವರು ವಿದ್ಯಾನಂದ ನಿಲಯದ ವ್ಯವಸ್ಥಾಪಕರಿಂದ ಒಂದು ವಂತಿಗೆ ಪುಸ್ತಕದ ಹಾಳೆಗಳನ್ನು ಬಲಾತ್ಕಾರವಾಗಿ ಕಿತ್ತುಕೊಂಡು ಹೋಗಿದ್ದಾರೆ ಎಂಬ ಕಟ್ಟು ಕಥೆಯನ್ನು ಶಾಂತರಾಜರ ಗಮನಕ್ಕೆ ತಂದು ಅವರನ್ನು ನಂಬಿಸಲು ಪ್ರಯತ್ನ ಮಾಡಬೇಕೆಂದು ತೀರ್ಮಾನಿಸಲಾಯಿತು

ವಿದ್ಯಾನಂದರ ಪಂಚನೆಯ ಯೋಜನೆಯಂತೆ ತಾ॥ 13-7-80 ರಂದು ಬೆಳ್ಳೂರಿನಲ್ಲಿ ಬಿ ಜೆ ನಾಭಿರಾಜಯ್ಯನವರ ಮನೆಯಲ್ಲಿ ಈ ಪಿತೂರಿನಾಟಕದ ಮೊದಲನೆಯ ಅಂಕ ಪ್ರಾರಂಭವಾಯಿತು ! ಆದರೆ ಪ್ರಾರಂಭದಲ್ಲಿಯೇ ಅಂದು ಶಾಂತರಾಜರು ಯಾವಾಗ ತಮ್ಮ ಆತ್ಮಸಾಕ್ಷಿಗೆ ಅಂಟಿಕೊಳ್ಳುತ್ತಾರೋ ಆಗಲೇ ವಿದ್ಯಾನಂದರು ಶಾಂತರಾಜರನ್ನೂ ಸಹ ತಮ್ಮ ಪಿತೂರಿಯ ಇನ್ನೊಂದು ಗುರಿಯನ್ನಾಗಿ ಮಾಡಿಕೊಂಡರು ! ಬೆಳ್ಳೂರಿನಲ್ಲಿ ತಾ॥ 13-7-80 ಮತ್ತು 14-7-80 ರಂದು ನಡೆದ ಪ್ರಸಂಗಗಳನ್ನು ಈಗಾಗಲೇ 'ದೋಷಾರೋಪಣೆಯ ಮಾತುಗಳ ಹಿನ್ನೆಲೆ' ಅಧ್ಯಾಯದ ಪ್ರಾರಂಭದಲ್ಲಿ ವಿವರಿಸಿದ್ದೇವೆ ತಾ॥ 14-7-80 ರ ಪ್ರವಚನದ ಪ್ರಸಂಗವಾದನಂತರ ತಾ॥ 15-7-1980 ರಂದು ವಿದ್ಯಾನಂದರು ಚಂದ್ರಯ್ಯ ಮತ್ತು ಶಾಂತರಾಜರ ಮೇಲೆ ಸಾಮಾಜಿಕ ಬಹಿಷ್ಕಾರ ಹಾಕಿಸುವ ಪ್ರಯತ್ನವನ್ನೂ ಸಹ

ಬೆಳ್ಳೂರಿನಲ್ಲಿಯೇ ನಡೆಸಿದರು ಅವರಿಬ್ಬರನ್ನೂ ಬಹಿಷ್ಕರಿಸಲು ಪ್ರಾರ್ಥಿಸುವ ಟೈಪಾದ ಒಂದೆರಡು ಹಾಳೆಗಳಿಗೆ, ಸಮಾಜದ ಕೆಲವರನ್ನು ರುಜುಹಾಕುವಂತೆ ಅವರು ಚಾರುಕೀರ್ತಿಸ್ವಾಮಿಜಿಯವರ ಮೂಲಕ ಪ್ರಯತ್ನಿಸಿದರು ಜನರು ಇದಕ್ಕೆ ಸಹ ಕರಿಸದೇ ಹೋದಾಗ ವಿದ್ಯಾನಂದರು ಸಾಮಾಜಿಕ ಬಹಿಷ್ಕಾರ ಹಾಕುವ ಪ್ರಯತ್ನವನ್ನು ವಿಧಿ ಯಿಲ್ಲದೆ ಕೈಬಿಡಬೇಕಾಯಿತು. ಹೀಗೆ ಕಾನೂನಿಗೆ ವಿರದ್ಧವಾದ ಬಹಿಷ್ಕಾರ ಹಾಕುವ ಪ್ರಯತ್ನವನ್ನು ವಿದ್ಯಾನಂದರು ಮತ್ತು ಚಾರುಕೀರ್ತಿಯವರಿಬ್ಬರೂ ಅಂದು ಮಾಡಿ ಮುಖಭಂಗಕ್ಕೊಳಗಾದರು !

ಮುಂದೆ ವಿದ್ಯಾನಂದರಿಂದಾಗಿ ಶಾಂತರಾಜರ ಮೇಲೂ ಚಂದ್ರಯ್ಯನವರ ಮೇಲೂ ತೀವ್ರವಾದ ಅಪಪ್ರಚಾರ ನಡೆಯಿತು ತಮ್ಮ ಮೇಲೆ ಬಹು ವ್ಯವಸ್ಥಿತವಾದ ರೀತಿ ಯಲ್ಲಿ ನಡೆದ ಅಪಪ್ರಚಾರದಿಂದ ಅವರಿಬ್ಬರೂ ಮನನೊಂದರು ತಾವು ಮಠದ ಅವ್ಯವಹಾರಗಳ ವಿರುದ್ಧ ಸರ್ಕಾರಕ್ಕೆ ದೂರು ಸಲ್ಲಿಸಿದ್ದರಿಂದ, ತಮ್ಮ ವಿರುದ್ಧ ತೀರಾ ಕೀಳು ಮಟ್ಟದ ಅಪಪ್ರಚಾರ ನಡೆಯಬಹುದೆಂದು ಚಂದ್ರಯ್ಯನವರು ನಿರೀಕ್ಷಿಸಿರಲಿಲ್ಲ ಈ ಹಿನ್ನೆಲೆಯಲ್ಲಿ ಚಂದ್ರಯ್ಯನವರ ಕೆಲವರು ಆಪ್ತರು ಕ್ಷೇತ್ರದ ಅವ್ಯವಹಾರಗಳನ್ನು ತಾವು ಬಗೆಹರಿಸಲು ಶ್ರಮಿಸುವುದಾಗಿಯೂ, ಮಠದ ವಿರುದ್ಧ ಸರ್ಕಾರಕ್ಕ ಸಲ್ಲಿಸಿರುವ ದೂರನ್ನು ದಯವಿಟ್ಟು ಹಿಂದಕ್ಕೆ ಪಡೆಯಬೇಕೆಂದೂ ಪ್ರಾರ್ಥಿಸಿದರು ಸ್ನೇಹಿತರ ಒತ್ತಾಯಕ್ಕೆ ಚಂದ್ರಯ್ಯನವರು ಮಣಿದು ಕೆಲವು ದೂರುಗಳನ್ನು ಹಿಂದಕ್ಕೂ ಪಡೆದರು ಆದರೆ ಮುಂದೆ ಮಠದ ಅವ್ಯವಹಾರಗಳು ಸರಿಯಾದ ಹಾದಿಗೆ ಬರುವ ಲಕ್ಷಣಗಳು ಕಂಡುಬರಲಿಲ್ಲ ! ಮತ್ತು ಅವರ ವಿರುದ್ಧದ ಅಪಪ್ರಚಾರಗಳು ನಿಲ್ಲಲೂ ಇಲ್ಲ.

ಈ ಹಂತದಲ್ಲಿ ಮುಂದಿನ ಕೆಲವು ದಿನಗಳಲ್ಲಿಯೇ ಈ ವಿಚಾರಗಳೆಲ್ಲಾ ನನ್ನ ಗಮ ನಕ್ಕೆ ಬಂದು ನಾನು ವಿದ್ಯಾನಂದರಿಗೆ ಮೊದಲ ಪತ್ರವನ್ನು ಬರೆಯುವಂತಾಯಿತು ನಂತರ ಘಟನೆಗಳು ಒಂದೊಂದಾಗಿ ನಡೆದು ಒಂದು ಇನ್ನೊಂದನ್ನನುಸರಿಸಿ ಈ ಪುಸ್ತಕದ ರಚನೆಯವರೆಗೂ ನನ್ನನ್ನು ಕೊಂಡೊಯ್ದವು

**ಮೂಡಿ ಬರುವ ತೀರ್ಮಾನ :**

ಇದುವರೆಗೆ ಈ ಪುಸ್ತಕದಲ್ಲಿ ವಿವರಿಸಲಾಗಿರುವ ವಿವರಣೆಗಳಿಂದ ವಿದ್ಯಾನಂದರ ವ್ಯಕ್ತಿತ್ವದ ಬಗೆಗೆ ಈ ತೀರ್ಮಾನ ಮೂಡಿಬರುತ್ತದೆ

ವಿದ್ಯಾನಂದ ಮುನಿಗಳು ಕೆಲವಾರು ವರ್ಷಗಳಿಂದಲೂ ಶ್ರವಣಬೆಳಗೊಳ ಕ್ಷೇತ್ರದ ಅನೇಕ ವ್ಯವಹಾರಗಳನ್ನು ದೂರದಲ್ಲಿದ್ದುಕೊಂಡೇ ನಿಯಂತ್ರಿಸುತ್ತಿದ್ದಾರೆ ಶ್ರವಣ ಬೆಳಗೊಳದ 1981 ನೇ ವರ್ಷದ ಮಹಾಮಸ್ತಕಾಭಿಷೇಕಕ್ಕೆ, ಎಲ್ಲರೂ ತಿಳಿದಿರುವಂತೆ

ಅವರು ಆಮಂತ್ರಿತರಾಗಿ ಅತಿಥಿಯಾಗಿ ಮಾರ್ಗದರ್ಶನ ಮಾಡಲು ಬಂದವರಲ್ಲ ! ಆಮಂತ್ರಣ ಬರುವ ಹಾಗೆ ತಾವೇ ವ್ಯವಸ್ಥೆ ಮಾಡಿಕೊಂಡು, ಶ್ರವಣಬೆಳಗೊಳ ಕ್ಷೇತ್ರದ ಸರ್ವಾಧಿಕಾರಿಯಾಗಿ ಆಡಳಿತ ನಡೆಸುವ ದೃಢ ಸಂಕಲ್ಪ ಮಾಡಿಕೊಂಡೇ ಕ್ಷೇತ್ರಕ್ಕೆ ಬಂದವರು ಅವರು ! ಶ್ರವಣಬೆಳಗೊಳ ಮಠ, ಪರಂಪರೆಯಿಂದ ದಿಗಂಬರ ಸನ್ಯಾಸಿಗಳ ಮಠವೆಂದು ಪ್ರಚಾರ ನಡೆಯುತ್ತಿರುವುದೂ ಮತ್ತು ಅನುಕ್ರಮವಾಗಿ ಎರಡನೆಯ ಬಾರಿಗೆ ಚಾತುರ್ಮಾಸಕ್ಕಾಗಿ ವಿದ್ಯಾನಂದರು ಶ್ರವಣಬೆಳಗೊಳದಲ್ಲಿಯೇ ಈಗಲೂ ಉಳಿದುಕೊಂಡಿರುವುದು ಮೇಲಿನ ಮಾತುಗಳಿಗೆ ಪುಷ್ಟಿಯನ್ನೊದಗಿಸುತ್ತದೆ ದೆಹಲಿಯಿಂದ ಹೊರಡುವಾಗ ಅವರು ಉಪಾಧ್ಯಾಯ ಮುನಿಗಳಾಗಿ ಹೊರಡಲಿಲ್ಲ ! ಆಧ್ಯಾತ್ಮಿಕ ಕ್ಷೇತ್ರದ ಆಚಾರ್ಯ ಪದವಿಯನ್ನು ಕೊಡಲು ಯಾವ ಅರ್ಹತೆಯೂ ಇಲ್ಲದ ಜನರು ಏರ್ಪಡಿಸಿದ ಸಭೆಗೆ ಹೋಗಿ 'ಏಲಾಚಾರ್ಯ' ಎಂಬ ಆಚಾರ್ಯ ಪದವಿಯನ್ನು ಧಾರ್ಮಿಕ ಸಂಪ್ರದಾಯಕ್ಕೆ ವಿರುದ್ಧವಾಗಿ ಸ್ವೀಕರಿಸಿ ದಕ್ಷಿಣದ ಕಡೆ ಹೊರಟರು !

ದೆಹಲಿಯಿಂದ ಬರುವಾಗ ತಮ್ಮ ಅದ್ದೂರಿಯ ಸ್ವಾಗತ ಸಮಾರಂಭಗಳ ಕಡೆ ಸತ್ಕಾರದ ವಿಧಾನಗಳ ಕಡೆ ತೀವ್ರ ಗಮನ ಹರಿಸಿ ಅದು ಹೀಗೆಯೇ ನಡೆಯಬೇಕು ಎಂದು ತಮ್ಮ ಆಪ್ತ ವರ್ಗಕ್ಕೆ ಬಿಡದಂತ ಸೂಚನೆಗಳನ್ನು ಕೊಟ್ಟುಕೊಂಡು ಬಂದಿದ್ದಾರೆ ! ಎಲ್ಲಕ್ಕಿಂತಲೂ ಮುಖ್ಯವಾಗಿ ಕರ್ನಾಟಕದಲ್ಲಿ ನಡೆಯುವ ಸ್ವಾಗತ ಸಮಾರಂಭಗಳ ವಿಚಾರದಲ್ಲಿ ಅವರು ಹೆಚ್ಚು ಗಮನಕೊಟ್ಟರು ಅದರಲ್ಲೂ ಬೆಳಗಾಂ ಜಿಲ್ಲೆಯಲ್ಲಿ ನಡೆಯುವ ಸ್ವಾಗತ ಸಮಾರಂಭಗಳು ಮತ್ತು ಮೆರವಣಿಗೆಗಳ ವಿಚಾರದಲ್ಲಿ ಅತ್ಯಾಸಕ್ತಿ ವಹಿಸಿದರು ಇದಕ್ಕೊಂದು ಪ್ರಬಲವಾದ ಕಾರಣವುಂಟು ಈ ಹಿಂದೆ ವಿದ್ಯಾನಂದರು 1963 ರಲ್ಲಿ ಕ್ಷುಲ್ಲಕ ಪಾರ್ಶ್ವಕೀರ್ತಿಗಳಾಗಿ ಕರ್ನಾಟಕವನ್ನು ತ್ಯಜಿಸಿ ಹೊರಟಿದ್ದಾಗ ಅವರು ತುಂಬಾ ವಿವಾದಾಸ್ಪದ ಸಾಧುಗಳೆನಿಸಿಕೊಂಡಿದ್ದರು 1963 ಕ್ಕಿಂತ ಹಿಂದಿನ ಶೇಡಬಾಳ (ಜನ್ಮಸ್ಥಳ) ದ ಮತ್ತು ಹೂಂಬುಜದ ಅವರ ವಾಸಗಳು ಗಂಭೀರತರವಾದ ಆಪಾದನೆಗಳಿಂದ ಕೂಡಿದ್ದುವು

ಮೇಲಿನ ಕಾರಣಗಳಿಂದಾಗಿ ಈ ಸಂದರ್ಭದಲ್ಲಿ ಅವರು ಕರ್ನಾಟಕಕ್ಕೆ ಆಗಮಿಸುವ ಸಮಯದಲ್ಲಿ ತಮಗೆ ಹೆಚ್ಚು ಪ್ರಚಾರವನ್ನು ದೊರಕಿಸಿಕೊಳ್ಳಬೇಕಾಗಿತ್ತು, ಇದಕ್ಕಾಗಿ ಸಾಧ್ಯವಾದ ಎಲ್ಲಾ ಮೂಲಗಳಿಂದಲೂ ಹಣ ಕೂಡಿಸುವ ಯೋಜನೆ ಸಿದ್ಧವಾಯಿತು ಶ್ರವಣಬೆಳಗೊಳ ಮಠದಲ್ಲಿ ಅಕ್ರಮವಾದ ರಶೀದಿ ಪುಸ್ತಕಗಳಿಂದ ಸಂಗ್ರಹಿಸಿದ್ದ ನಿಧಿ ಈ ಕಾರ್ಯಕ್ಕಾಗಿ ಕಾಯ್ದಿಟ್ಟು ಪಡುವಟ್ಟಿತ್ತು ಇದರ ಜೊತೆಗೆ ಇತರ ಮೂಲಗಳನ್ನು ಅವರು ಹುಡುಕತೊಡಗಿದರು ಯಾತ್ರಿಕರಿಂದ ಕ್ಷೇತ್ರಾಭಿವೃದ್ಧಿಗೆಂದು ಪ್ರವೇಶ ಶುಲ್ಕದ ರೂಪದಲ್ಲಿ ಸಂಗ್ರಹಿಸಿದ ಹಣದಿಂದ ಕೂಡಿದ ಎಸ್ ಡಿ ಜೆ ಎಂ ಐ ಮೇನೇಜಿಂಗ್ ಕಮಿಟಿಯ ಬೊಕ್ಕಸ ವಿದ್ಯಾನಂದರಿಗೆ ಅಕ್ಷಯ ಪಾತ್ರೆಯಾಗಿ ಕಂಡಿತು

ವಿದ್ಯಾನಂದ ಮುನಿಗಳ ಆಪ್ತರೂ ಕಮಿಟಿಯ ಸದಸ್ಯರೂ ಆದವರೊಬ್ಬರು ತಾರೀಖು 12–3–1979 ರಲ್ಲಿ ಮೇನೇಜಿಂಗ್ ಕಮಿಟಿಗೆ ಬರೆದ ಪತ್ರವೊಂದರಲ್ಲಿ, ವಿದ್ಯಾನಂದರ ವಿಹಾರ ಇಂದೂರಿನಿಂದ ಹೊರಟು ಶ್ರವಣಬೆಳಗೊಳವನ್ನು ತಲುಪುವವರೆಗೆ ಅದರ ಖರ್ಚು 5 ಲಕ್ಷ ರೂಪಾಯಿಗಳವರೆಗೆ ಬರುತ್ತದೆ ಆದ್ದರಿಂದ ಕಮಿಟಿಯು ಸ್ವಾಗತ ಸಮಿತಿಗೆ ತನ್ನ ಮೊದಲ ಕಂತಾಗಿ 50,000 ರೂಪಾಯಿಗಳನ್ನು ಮುಂಗಡವಾಗಿ ಕೊಡಬೇಕೆಂದು ಪ್ರಾರ್ಥಿಸಿದ್ದಾರೆ ಕಮಿಟಿಯ ಬೊಕ್ಕಸದ ಕಡೆ ವಿದ್ಯಾನಂದರು ಶಿಷ್ಯರ ಮೂಲಕ ಹರಿಸಿರುವ ದೃಷ್ಟಿ ಹೇಗಿದೆಯೆಂಬುದನ್ನು ಇಲ್ಲಿ ಕಾಣಬಹುದು ಕ್ಷೇತ್ರಾಭಿವೃದ್ಧಿಗೆಂದು ಸಂಗ್ರಹವಾಗಿರುವ ಲಕ್ಷಾಂತರ ರೂ ಗಳ ನಿಧಿಯನ್ನು ತಮ್ಮ ಮೆರವಣಿಗೆಯ ಹುಚ್ಚು ಹೊಳೆಗೆ ಚೆಲ್ಲಿಸುವುದಕ್ಕಾಗಿ ವಿದ್ಯಾನಂದರು ಇಲ್ಲಿ ಎಷ್ಟೊಂದು ಕಾತರರಾಗಿದ್ದಾರೆ !

ಮಹಾನ್ ದೇಶಪ್ರೇಮಿ ರಾಷ್ಟ್ರಸಂತ ಎಂದೆಲ್ಲಾ ತಮ್ಮ ಅನುಯಾಯಿಗಳಿಂದ ಬಣ್ಣಿಸಿಕೊಳ್ಳುವ ವಿದ್ಯಾನಂದರು, ದೇಶದ ಜನರ ಆರ್ಥಿಕ ದುಸ್ಥಿತಿಯ ಕಡೆ ಗಮನ ಹರಿಸಿದ್ದಾರೆಯೇ ? ದೇಶದಲ್ಲಿ ಲಕ್ಷಾಂತರ ಮಂದಿ ನಿಲ್ಲಲು ಸರಿಯಾದ ನೆಲೆಯಿಲ್ಲದೆ, ಒಪ್ಪೊತ್ತಿನ ಗಂಜಿಗಾಗಿ ಪರದಾಡಬೇಕಾದ ಭೀಕರ ಪರಿಸ್ಥಿತಿಯಿರುವಾಗ, ಅಲ್ಲಲ್ಲಿ ಕ್ಷಾಮಡಾಮರಗಳು ಅಪ್ಪಳಿಸಿ ಜನರನ್ನೂ ಮೂಕ ಪಶುಗಳನ್ನೂ ಬಲಿ ತೆಗೆದುಕೊಳ್ಳುವಂತಹ ದಾರುಣವಾದ ಪರಿಸ್ಥಿತಿಗಳು ದೇಶದಲ್ಲಿರುವಾಗ ವಿದ್ಯಾನಂದರು ತಮ್ಮ ಅನುಯಾಯಿಗಳೊಬ್ಬರ ಮೂಲಕ ಸ್ವಾಗತ ಸಮಾರಂಭ ಮತ್ತು ಮೆರವಣಿಗೆಗಳಿಗಾಗಿ 5 ಲಕ್ಷ ರೂಪಾಯಿಗಳನ್ನು ಬಯಸಿರುವುದು ಮತ್ತು ಅದನ್ನು ವಿರೋಧಿಸಿದವರ ಮೇಲೆ ಕೆಂಡ ಕಾರುತ್ತಿರುವುದು ನಿಜಕ್ಕೂ ನಾಚಿಗೆಗೇಡಿನ ಸಂಗತಿಯಾಗಿದೆ ! ರಾಷ್ಟ್ರಸಂತರಾದವರೊಬ್ಬರು ತಮ್ಮ ಬಾಜಾಬಜಂತ್ರಿಗಾಗಿ ಹೀಗೆ ಲಕ್ಷಾಂತರ ರೂಪಾಯಿಗಳನ್ನು ದುಂದುವೆಚ್ಚ ಮಾಡುತ್ತಿರುವುದು ರಾಷ್ಟ್ರ ಧರ್ಮವೇ ? ಬಾಜಾ ಬಜಂತ್ರಿಯ ವಾದ್ಯಗೋಷ್ಠಿಯಿಲ್ಲದಿದ್ದರೆ ರಾಷ್ಟ್ರಸಂತರ ಹೆಜ್ಜೆ ಮೇಲೇಳುವುದೇ ಇಲ್ಲವೆ ?

ಅಂತೂ ದೇಶದ ಪರಿಸ್ಥಿತಿ ಏನಾದರೂ ಆಗಲಿ ವಿದ್ಯಾನಂದರು ತಮ್ಮ ಮೆರವಣಿಗೆಗಳಿಗಾಗಿ ಕಮಿಟಿಯಿಂದ ಹಣ ಸೆಳೆಯಲು ಹಠತೊಟ್ಟರು ! ಚಾರುಕೀರ್ತಿಸ್ವಾಮಿಜಿಯವರು ಈ ಹಠವನ್ನು ಕಮಿಟಿಯ ವ್ಯವಹಾರಗಳಲ್ಲಿ ಜೀವಂತವಾಗಿ ಉಳಿಸಿದರು ಸ್ವಾಗತಸಮಿತಿಗೆ 25,000 ರೂಪಾಯಿಗಳನ್ನು ಮಂಜೂರುಮಾಡುವ ಅಕ್ರಮ ನಿರ್ಣಯ ಸದಸ್ಯರಿಬ್ಬರ ವಿರೋಧದಿಂದಾಗಿ ತ್ರಿಶಂಕು ಸ್ಥಿತಿಯಲ್ಲಿಯೇ ಉಳಿದು ಹೋಯಿತು

ಚಂದ್ರಯ್ಯನವರೂ ಮತ್ತು ಶಾಂತರಾಜರೂ ತತ್ವದ ದೃಷ್ಟಿಯಿಂದ ನಿರ್ಣಯದ

ಸೇರ್ಪಡೆಯನ್ನು ವಿರೋಧಿಸಿದಾಗ, 'ತಿದ್ದಲು ಬಂದವರನ್ನು ಗುದ್ದಿ ತೆಗೆಯುವಂತೆ' ಅವರಿಬ್ಬರನ್ನೂ ವಿದ್ಯಾನಂದರು ತೆಗೆಸಿದರು ಈ ಸಂದರ್ಭಗಳಲ್ಲೆಲ್ಲಾ ಚಾರುಕೀರ್ತಿಗಳು ವಿದ್ಯಾನಂದರ ಕೈಗೊಂಬೆಯಾಗಿ ಕಾರ್ಯ ನಿರ್ವಹಿಸಿದರು ನಂತರ ಘಟನೆಗಳು ಒಂದೊಂದಾಗಿ ನಡೆದು ಬೆಳ್ಳೂರಿನ ಪ್ರಸಂಗದ ಹಂತವನ್ನು ಮುಟ್ಟಿತು ತಮ್ಮ ಪಿತೂರಿಯ ವಿಫಲತೆಯಿಂದ ಹತಾಶರಾಗಿದ್ದ ವಿದ್ಯಾನಂದರು ಕಡೆಗೆ ಬಹಿರಂಗ ಪ್ರವಚನದಲ್ಲಿ ಚಂದ್ರಯ್ಯನವರು ಮತ್ತು ಶಾಂತರಾಜನ ವಿರುದ್ಧ ಜನರನ್ನು ಎತ್ತಿಕಟ್ಟುವ ದುಸ್ಸಾಹಸಕ್ಕೆ ಇಳಿದು ಅಸಂಬದ್ಧವಾಗಿ ಮಾತನಾಡಿದರು

ಚಂದ್ರಯ್ಯನವರೂ ಮತ್ತು ಶಾಂತರಾಜರೂ ಕಮಿಟಿಯಲ್ಲಿರುವವರೆಗೂ, ಅಕ್ರಮ ಮಂಜೂರಾತಿ ಪಡೆದ 25,000 ರೂಪಾಯಿಗಳನ್ನು ಕಮಿಟಿಯಿಂದ ತೆಗೆದುಕೊಂಡು ಸ್ವಾಗತ ಕಾರ್ಯಗಳಿಗಾಗಿ ಉಪಯೋಗಿಸಲಾಗಲಿಲ್ಲ ! ಈ ಬಗ್ಗೆ ಸರ್ಕಾರಕ್ಕೆ ದೂರು ಹೋಗಬಹುದೆಂಬ ಭೀತಿಯೇ ಇದಕ್ಕೆ ಕಾರಣ ಅವರಿಬ್ಬರೇನಾದರೂ ಆಕ್ಷೇಪಣೆಗಳನ್ನು ಸಲ್ಲಿಸದೆ ಅಕ್ರಮಗಳಿಗೆಲ್ಲಾ ಕೈ ಎತ್ತಿದ್ದರೆ ಇಷ್ಟು ಹೊತ್ತಿಗೆ 25,000 ರೂಪಾಯಿಗಳ ಮಾತು ಹಾಗಿರಲಿ, ಕಮಿಟಿಯ ಐದು ಲಕ್ಷರೂಪಾಯಿಗಳು ಅಥವಾ ಅದಕ್ಕಿಂತ ಇನ್ನೂ ದೊಡ್ಡ ಮೊತ್ತದ ಹಣ ವಿದ್ಯಾನಂದರ ಮೆರವಣಿಗೆಯ ತಳಿರು ತೋರಣಗಳಾಗಿ, ಬಟ್ಟೆಯ ಬ್ಯಾನರ್‌ಗಳಾಗಿ, ಪ್ರಚಾರದ ಭಿತ್ತಿಪತ್ರಗಳಾಗಿ, ಬಾಜಾ ಬಜಂತ್ರಿಯವರ ವಾದ್ಯಗಳ ಶಬ್ದವಾಗಿ ಕರಗಿಹೋಗುತ್ತಿತ್ತು ! ಅದೃಷ್ಟವಶಾತ್ ಶಾಂತರಾಜರು ಮತ್ತು ಚಂದ್ರಯ್ಯನವರ ನ್ಯಾಯೋಚಿತ ಆಕ್ಷೇಪಣೆಗಳಿಂದಾಗಿ ಸಾರ್ವಜನಿಕರಿಂದ ಕ್ಷೇತ್ರಾಭಿವೃದ್ಧಿಗಾಗಿ ಸಂಗ್ರಹವಾಗಿದ್ದ ಕಮಿಟಿಯ ಐದುಲಕ್ಷಕ್ಕೂ ಮೀರಿದ ಹಣ ಸಂಸ್ಥೆಗೆ ಉಳಿದಂತಾಯಿತು

1980 ರ ಮೇತಿಂಗಳ ನಂತರ ನಡೆದ ಕಮಿಟಿಯ ಸಭೆಗಳಲ್ಲಿ, ಸ್ವಾಗತಸಮಾರಂಭದ ಅಕ್ರಮ ಮಂಜೂರಾತಿಯ ತ್ರಿಶಂಕು ಸ್ಥಿತಿಯ ನಿರ್ಣಯದ ಪ್ರಕರಣ ಏನಾಗಿದೆಯೆಂಬುದು ತಿಳಿದು ಬಂದಿಲ್ಲ ಈ ಸಂಗತಿಯನ್ನು ವಿಚಾರಿಸಬೇಕಾಗಿದೆ

ಅಧ್ಯಾಯ ೫

# ಉಪಸಂಹಾರ

ನಾನು ವಿದ್ಯಾನಂದರಿಗೆ ಬರೆದಿರುವ ನಾಲ್ಕು ಬಹಿರಂಗ ಪತ್ರಗಳು ನಂತರ ಬರೆದ ಈ ಪುಸ್ತಕಕ್ಕೆ ವಿದ್ಯಾನಂದರು ತಾ॥ 14-7-80 ರಂದು ಬೆಳ್ಗೊರಿನಲ್ಲಿ ಮಾಡಿದ ಬಹಿರಂಗ ಪ್ರವಚನವೇ ಮೂಲ ಕಾರಣ ವಿದ್ಯಾನಂದರು ಅಂದು ತಮ್ಮ ಪ್ರವಚನದಲ್ಲಿ ಪರನಿಂದೆಯನ್ನು ಮಾಡದೇ ಹೋಗಿದ್ದರೆ ಅವರನ್ನು ಕುರಿತ ನನ್ನ ಬರಹಗಳಾವುವೂ ರೂಪಿತವಾಗುತ್ತಿರಲಿಲ್ಲ! ಅಖಿಲ ಭಾರತ ಪ್ರಸಿದ್ಧಿಯುಳ್ಳ ದಿಗಂಬರ ಮುನಿಗಳೊಬ್ಬರಿಂದ ಬಹಿರಂಗವಾಗಿ ಬಂದ ಅಪ್ಪಟ ಸುಳ್ಳು ಮಾತುಗಳು ನನ್ನನ್ನು ಚಿಂತನೆಗೊಳಗಾಗುವ ಹಾಗೆ ಮಾಡಿದವು ಆ ಚಿಂತನೆಗಳು ಅದುವರೆಗೆ ಅವರ ಬಗ್ಗೆ ಇದ್ದ ಅಭಿಮಾನವನ್ನು ಕ್ರಮೇಣವಾಗಿ ಶೂನ್ಯ ಮಾಡಿ ಸತ್ಯಾಂಶವನ್ನು ಸಂಶೋಧಿಸುವ ಕಡೆಗೆ ನನ್ನನ್ನು ದೂಡಿದುವು ಇದಕ್ಕಾಗಿ ನಾನು ನನ್ನದೇ ಆದ ಮಾರ್ಗದಲ್ಲಿ ನಿರಂತರವಾಗಿ ಪ್ರಯತ್ನ ಪಟ್ಟೆ ಆ ಪ್ರಯತ್ನ ನನ್ನನ್ನು ಈ ಗ್ರಂಥರಚನೆಯವರೆಗೂ ಕೊಂಡೊಯ್ದಿತು

ನಿಜಾಂಶವನ್ನು ಪತ್ತೆ ಮಾಡುವ ನನ್ನ ಪ್ರಾಮಾಣಿಕವಾದ ಪ್ರಯತ್ನಗಳನ್ನು ತಡೆ ಹಿಡಿಯುವ ಪ್ರಯತ್ನಗಳು, ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇತರರಿಂದ ಒಂದೇ ಸಮನೆ ನಡೆದುವು ನನ್ನ ಮೊದಲನೆಯ ಬಹಿರಂಗ ಪತ್ರ ಪ್ರಕಟವಾದ ಕೂಡಲೇ ಶ್ರೀ ಚಾರುಕೀರ್ತಿ ಸ್ವಾಮೀಜಿಯವರೇ ನೇರವಾಗಿ ನನಗೆ ಬೆದರಿಕೆ ಹಾಕಿದರು ಈ ಬೆದರಿಕೆಯನ್ನು ನಾನು ಉಪೇಕ್ಷೆ ಮಾಡಿ ಎರಡು ಮತ್ತು ಮೂರನೆಯ ಬಹಿರಂಗ ಪತ್ರಗಳನ್ನು ಪ್ರಕಟಿಸಿದೆ ಈ ಸಂದರ್ಭದಲ್ಲಿ ಅಗೋಚರವಾದ ಕೈಗಳು ನನ್ನ ವಿರುದ್ಧ ಅಪಪ್ರಚಾರದ ಮತ್ತು ಕೊಲೆ ಬೆದರಿಕೆಯ ಪತ್ರಗಳನ್ನು ಮುದ್ರಿಸಿ ಹಂಚಿದುವು ಚಾರುಕೀರ್ತಿ ಸ್ವಾಮೀಜಿಯವರು ತಾ॥ 12-12-80 ರಂದು ನನಗೆ ಒಂದು ಪತ್ರ ಬರೆದು ನನ್ನ ಮೂರು ಬಹಿರಂಗ ಪತ್ರಗಳಿಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದರು ನಾನು ತಾರೀಖು 29-12-80 ರಂದು ಅವರ ಪತ್ರಕ್ಕೆ ಉತ್ತರವನ್ನು ಬರೆದೆ ಆದರೆ ಚಾರುಕೀರ್ತಿಯವರು ತಾವೇ ವ್ಯವಹಾರವನ್ನು ಪ್ರಾರಂಭಿಸಿ ನನಗೆ ಬರೆದ ಪತ್ರಕ್ಕೆ ನಾನು ಉತ್ತರವನ್ನು ಬರೆದಾಗ ಆ ಪತ್ರವನ್ನು ಅಂಚೆಯವರಿಂದ ತೆಗೆದುಕೊಳ್ಳದೆ ತಿರಸ್ಕರಿಸಿ ಹಿಂದಕ್ಕೆ ಕಳುಹಿಸಿದರು ! ಇದು ಅವರ ವ್ಯವಹಾರದ ಏಕಮುಖವಾದ ನೀತಿ !

ಕೊಲೆ ಬೆದರಿಕೆಯ ಕರಪತ್ರದ ವಿರುದ್ಧ ನಾನು ತಾ॥ 17-12-80 ರಂದು ಪೋಲೀಸರಿಗೆ ದೂರನ್ನು ಸಲ್ಲಿಸಿ ನನ್ನ ಬರವಣಿಗೆಯನ್ನು ಮುಂದುವರೆಸಿದೆ. ನನ್ನ ನಾಲ್ಕನೆಯ ಬಹಿರಂಗ ಪತ್ರ ಪ್ರಕಟವಾದ ನಂತರ ವಿದ್ಯಾನಂದ ಮುನಿಗಳ ಸಮೀಪವರ್ತಿಗಳಾದವರೊಬ್ಬರು ತಾ॥ 28-12-1980 ರಂದು ಭದ್ರಾವತಿಯ ನನ್ನ ಮನೆಗೆ ರಾತ್ರಿ ಸುಮಾರು 8-30 ಗಂಟೆಯ ಹೊತ್ತಿನಲ್ಲಿ ಬಂದಿದ್ದರು ಅವರ ಜೊತೆ ಮತ್ತಿಬ್ಬರೂ ಸಹ

ಇದ್ದರು ಅವರಲ್ಲಿ ಒಬ್ಬರು ನನ್ನ ಸಹೋದ್ಯೋಗಿಗಳಾದವರು ಅವರು ಬಹುಶಃ ವಿದ್ಯಾನಂದರ ಆದೇಶದ ಮೇರೆಗೆ ಬಂದಿದ್ದರೆಂದು ಕಾಣುತ್ತದೆ ಸುಮಾರು ಒಂದು ಗಂಟೆಯ ಕಾಲ ನನ್ನೊಂದಿಗೆ ನನ್ನ ಪತ್ರಗಳ ವಿಚಾರವಾಗಿ ಚರ್ಚೆ ಮಾಡಿದರು ಚರ್ಚೆಯಲ್ಲಿ ಅವರು ಮುಖ್ಯವಾಗಿ " ವಿದ್ಯಾನಂದ ಮುನಿಗಳು ದೊಡ್ಡವರು ಅವರನ್ನು ಪ್ರಶ್ನಿಸುವ ಹಕ್ಕು ನಿಮಗಿಲ್ಲ ! ನೀವು ಯಾರೂಂತ ಅವರು ನಿಮಗೆ ಉತ್ತರ ಕೊಡಬೇಕು ? ವಿದ್ಯಾನಂದರು ಮಾಡಿದ ಪಾಪವನ್ನು ವಿದ್ಯಾನಂದರೇ ಅನುಭವಿಸುತ್ತಾರೆ, ನೀವೇಕೆ ಅದನ್ನು ಕೇಳಬೇಕು ? ಸಮಾಜದವರು ನಿಮ್ಮನ್ನು ವಿಚಾರಣೆ ಮಾಡಬೇಕು " ಮುಂತಾಗಿ ಸಮಾಜದ ಜವಾಬ್ದಾರಿಯನ್ನು ತಾವೇ ಗುತ್ತಿಗೆ ಪಡೆದವರಂತೆ ಮಾತನಾಡಿದರು ಶಿಲಾಯುಗದ ಸಂಸ್ಕೃತಿಯನ್ನು ನೆನಪು ಮಾಡಿಕೊಡುವ ಅವರ ಮಾತುಗಳನ್ನು ನಾನು ಒಪ್ಪದೇ ಹೋದಾಗ, ಅವರು ಬಂದ ದಾರಿಗೆ ಸುಂಕವಿಲ್ಲದಂತಾಗಿ ಚರ್ಚೆಯನ್ನು ಮುಂದುವರಿಸಲಾರದೆ ಮನೆಯಿಂದ ನಿರ್ಗಮಿಸಿದರು

ಈ ಪ್ರಸಂಗವಾದ ಕೆಲವು ದಿನಗಳನಂತರ ತಾ॥ 17-1-1981 ನೇ ಶನಿವಾರ ಸಾಯಂಕಾಲ 4-30 ರ ಸಮಯದಲ್ಲಿ ಆಚಾರ್ಯರತ್ನ ದೇಶಭೂಷಣ ಮುನಿಮಹಾರಾಜರನ್ನು ದಾವಣಗೆರೆಯಲ್ಲಿ ನಾನು ಕಂಡಿದ್ದೆ ಆ ಸಮಯದಲ್ಲಿ ಆಚಾರ್ಯರು ಮಹಾಮಸ್ತಕಾಭಿಷೇಕದ ನಿಮಿತ್ತ ಶ್ರವಣಬೆಳಗೊಳದ ಕಡೆಗೆ ವಿಹಾರ ಮಾಡುತ್ತಾ ದಾವಣಗೆರೆಯಲ್ಲಿ ಬಿಡಾರಮಾಡಿದ್ದರು ವಿದ್ಯಾನಂದರಿಗೆ ಬರೆದ ನನ್ನ ನಾಲ್ಕು ಪತ್ರಗಳ ವಿಚಾರವನ್ನು ಅವರಿಗೆ ದೀಕ್ಷೆನೀಡಿದ ಪೂಜ್ಯ ದೇಶ ಭೂಷಣ ಮುನಿಮಹಾರಾಜರ ಗಮನಕ್ಕೆ ತರುವುದೇ ನನ್ನ ಭೇಟಿಯ ಉದ್ದೇಶವಾಗಿತ್ತು ಆಚಾರ್ಯರೊಂದಿಗೆ ನಾನು ಚರ್ಚೆಯಲ್ಲಿ ನಿರತನಾಗಿರುವಾಗ ವಿದ್ಯಾನಂದರ ಅನುಯಾಯಿಗಳಾದ ದಾವಣಗೆರೆಯ ವಾಣಿಜ್ಯೋದ್ಯಮಿಗಳಲ್ಲೊಬ್ಬರು ಅಲ್ಲಿಗೆ ಧಾವಿಸಿಬಂದು ಚರ್ಚೆಗೆ ಅಡ್ಡಿಯನ್ನುಂಟು ಮಾಡಿದರು ಆಚಾರ್ಯರ ಸಾನ್ನಿಧ್ಯವೆಂಬುದನ್ನೂ ಅವರು ಮರೆತು ಕೋಪತಾಪಗಳ ಪ್ರದರ್ಶನ ಮಾಡಿದರು, ನಾನು ನಾಲ್ಕು ಪತ್ರಗಳನ್ನು ಮುದ್ರಿಸಿ ಹಂಚಿದ್ದೆ ಅವರ ಈ ಬಗೆಯ ಆಕ್ಷೇಪಣೆಗೆ ಕಾರಣವಾಗಿತ್ತು ನನ್ನ ಪತ್ರಗಳಲ್ಲಿ ದೋಷಗಳೇನಿವೆ? ತೋರಿಸಿ ಕೊಡಿ ಎಂದು ನಾನು ಪ್ರಶ್ನಿಸಿದಾಗ ನನ್ನ ಮಾತಿಗೆ ಅವರು ಗಮನ ಕೊಡದೆ ತಮ್ಮ ಬಿರುಸು ಮಾತುಗಳನ್ನು ಮುಂದುವರೆಸಿದರು ಕಡೆಗೆ ನಾನೂ ಸಹ ಅನಿವಾರ್ಯವಾಗಿ ಬಿಸಿವಾಗ್ವಾದಕ್ಕಿಳಿಯಬೇಕಾಯಿತು ಈ ಹಂತದಲ್ಲಿ ಆಚಾರ್ಯರು ನಡುವೆ ಪ್ರವೇಶಿಸಿ ಪರಿಸ್ಥಿತಿಯನ್ನು ಶಾಂತಗೊಳಿಸಿದರು ವಾಣಿಜ್ಯೋದ್ಯಮಿಗಳು ಆಚಾರ್ಯರಿಗೆ ವಂದಿಸಿ ಅವರಿಂದ ಅನುಮತಿ ಪಡೆದು ಅಲ್ಲಿಂದ ನಿರ್ಗಮಿಸಿದರು ನಂತರ ನಾನು ಆಚಾರ್ಯರಿಗೆ ನನ್ನ ಕೆಲವು ವಿಜ್ಞಾಪನೆಗಳನ್ನು ನಿವೇದಿಸಿ ಅವರಿಂದ ಶುಭಾಶೀರ್ವಾದಗಳನ್ನು ಪಡೆದು ಹಿಂತಿರುಗಿದೆ

ಮುಂದೆ ನನ್ನ ನಾಲ್ಕು ಬಹಿರಂಗ ಪತ್ರಗಳ ದಿಕ್ಕನ್ನು ತಪ್ಪಿಸುವ ಕುತಂತ್ರದ ಅಂಗವಾಗಿ ಪುನಃ ಅಗೋಚರವಾದ ಕೈಗಳು ನನ್ನ ಹೆಸರು ವಿಳಾಸಗಳನ್ನು ದುರುಪಯೋಗ ಪಡಿಸಿಕೊಂಡು ಒಂದು ಕೋಟಾ ಪತ್ರವನ್ನು ನನ್ನ ಹೆಸರಿನಲ್ಲಿ ಮುದ್ರಿಸಿ ಹಂಚಿದಾಗ ನಾನು ತಾ॥ 18-2-81 ರಲ್ಲಿ ಪುನಃ ಪೋಲೀಸರಿಗೆ ದೂರು ಸಲ್ಲಿಸಬೇಕಾಯಿತು . ಈ ಘಟನೆಯಿಂದಾಗಿ ನನ್ನ ನಾಲ್ಕು ಪತ್ರಗಳ ಸಿಂಧುತ್ವವನ್ನು ಸ್ಥಿರಪಡಿಸುವ ದೃಷ್ಟಿಯಿಂದ ನಾನು ಈ ಪುಸ್ತಕ ರಚನೆಗೆ ಕೈ ಹಾಕಿದೆ

**ವಿಜ್ಞಾಪನೆ :**

ಇದುವರೆಗೂ ನನ್ನ ನಾಲ್ಕು ಬಹಿರಂಗ ಪತ್ರಗಳ ಮೂಲಕ ನಂತರ ಈ ಗ್ರಂಥದ ಮೂಲಕ, ತ್ಯಾಗಮೂರ್ತಿಯಾದ ಗೊಮ್ಮಟನ ಪಾದದಡಿಯಲ್ಲಿ ಅವ್ಯವಹಾರಗಳಲ್ಲಿ ನಿರತರಾಗಿ ಪರಿಗ್ರಹಗಳಿಗಾಗಿ ಹಾತೊರೆಯುತ್ತಿರುವ ಚಾರುಕೀರ್ತಿ ಸ್ವಾಮೀಜಿಯವರ ಲಜ್ಜಾಹೀನವಾದ ಪ್ರಕರಣಗಳನ್ನೂ, ಸುಳ್ಳು ಹೇಳುತ್ತಾ ಧರ್ಮದ ಹೆಸರಿನಲ್ಲಿ ಜನರನ್ನು ವಂಚಿಸುತ್ತಿರುವ ವಿದ್ಯಾನಂದ ಮುನಿಗಳ ಮುನಿಧರ್ಮವಿರುದ್ಧವಾದ ನಡವಳಿಕೆಗಳನ್ನೂ ದಾಖಲೆಗಳ ಮೂಲಕವಾಗಿ ಬಹಿರಂಗಗೊಳಿಸಿದ್ದೇನೆ ಹಾಗೆಯೇ ಕ್ಷೇತ್ರದಲ್ಲಿ ನೀತಿನಿಯಮಗಳನ್ನು ಮತ್ತು ಪಾವಿತ್ರತೆಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿರುವವರ ಸಾಹಸಗಳನ್ನೂ ಮನದಟ್ಟು ಮಾಡಿಕೊಟ್ಟಿದ್ದೇನೆ ಈ ಸಂದರ್ಭದಲ್ಲಿ ಸಹೃದಯರಲ್ಲಿ ನನ್ನ ಒಂದು ಸವಿನಯ ಮನವಿಯೆಂದರೆ, ದೊಡ್ಡವರು ಯಾರು ಎಂಬುದನ್ನು ನಿರ್ಧರಿಸಲು ವೇಷವನ್ನು, ಮಾತನ್ನು, ಪ್ರಚಾರವನ್ನು, ಪದವಿಗಳನ್ನು, ಬಿರುದುಗಳನ್ನು ಅಥವಾ ಪರಂಪರಾಗತ ನಂಬಿಕೆಯನ್ನು ಆಧಾರವಾಗಿಟ್ಟುಕೊಳ್ಳಬೇಡಿ ದೊಡ್ಡತನವನ್ನು ನಿರ್ಧರಿಸಲು ದಯವಿಟ್ಟು ಸತ್ಯವನ್ನು ಆಧಾರವಾಗಿಟ್ಟುಕೊಳ್ಳಿ ಸತ್ಯ ಹೊರನೋಟಕ್ಕೆ ಗೋಚರವಾಗದೇ ಹೋದಾಗ ಅದನ್ನು ಶೋಧಿಸಲು ಪ್ರಯತ್ನ ಕೈಗೊಳ್ಳಿ ಅದರಲ್ಲಿ ಸಫಲರಾದರೆ ಅದನ್ನು ನಿರ್ಭಯವಾಗಿ ಪ್ರಕಾಶ ಪಡಿಸಿ ಅದು ಸಮಾಜದ ಹಿತವನ್ನು ಬಯಸುವ ಜನರ ದಾರಿದೀವಿಗೆಯಾಗಬಹುದು



**ವಿದ್ಯಾನಂದರು ಸುಳ್ಳಾಡಿಲ್ಲ, ಪಿತೂರಿಯನ್ನು ಮಾಡಿಲ್ಲ, ಯಾರನ್ನೂ ವಂಚಿಸಿಲ್ಲ, ಎಂದು ವಿದ್ಯಾನಂದರೇ ಆಗಲಿ ಅಥವಾ ಅವರ ಅಂಥ ಬೆಂಬಲಿಗರೇ ಆಗಲಿ ಹೇಳುವುದಾದರೆ, ಅಂಥವರು ಈಗಲಾದರೂ ವಿದ್ಯಾನಂದರು 14-7-80 ರಂದು ಬೆಳ್ಳೂರಿನಲ್ಲಿ ಬಹಿರಂಗವಾಗಿ ಆಡಿರುವ ದೋಷಾರೋಪಣೆಯ ಮಾತುಗಳನ್ನು ರುಜುವಾತುಪಡಿಸಲಿ. ಇಲ್ಲದೇಹೋದರೆ ಧೂರ್ತ**

**ಕಸದ ಹಿನ್ನೆಲೆಯನ್ನು ಒಳಗೊಂಡು ವಿದ್ಯಾನಂದರು ಬೋಧಿಸುವ ವಿಶ್ವ ಧರ್ಮ 'ಹುಟ್ಟುಕುರುಡ ಬಣ್ಣಿಸುವ ಬೆಳುದಿಂಗಳ ಕಥೆಯಂತೆ' ಕೇವಲ ಕೃತಕವಾಗುತ್ತದೆ.**



ವಿದ್ಯಾನಂದರು ತಮ್ಮ ಪ್ರವಚನ ಸಭೆಗಳಲ್ಲಿ ಒಂದು ಕಡೆ ಗಾಂಧೀಜಿಯವರನ್ನು ಕುರಿತು ಈ ಮಾತುಗಳನ್ನು ಹೇಳಿದ್ದಾರೆ,

"ಮಹಾತ್ಮ ಗಾಂಧೀಜಿಯವರು ತನ್ನ ತಪ್ಪನ್ನು ಒಪ್ಪಿಕೊಂಡು ಬೇರೆಯವರಿಗೊಂದು ಆದರ್ಶದ ಪಾಠ ಕಲಿಸುತ್ತಿದ್ದರು ಅವರು ಹಾಕಿದ ಹೆದ್ದಾರಿಯಲ್ಲಿ ರಾಷ್ಟ್ರದ ಧರ್ಮ ಸುರಕ್ಷಿತವಾಗಿ ಬೆಳೆಯುತ್ತಿದೆ ಆದರೆ ಇಂದಿನ ಮುಖಂಡರು ತನ್ನ ತಪ್ಪಿನ ಹೊರೆಯನ್ನು ನಿರಪರಾಧಿಗಳಾದ ಇನ್ನೊಬ್ಬರ ಹೆಗಲಿಗೆ ಹೊರಿಸಿ ತಾವು ಸಭ್ಯರಾಗುತ್ತಾರೆ ಬೇರೆಯವರ ಮೇಲೆ ದೋಷಾರೋಪಣೆ ಮಾಡುತ್ತಾರೆ ತಾನು ಮಾತ್ರ ಹಾಲಿನಂತೆ ಶುಭ್ರ, ಬೇರೆಯವರೆಲ್ಲಾ ಕೆಸರಿನಲ್ಲಿ ಮುಳುಗಿದವರು ಎಂಬ ಛಿದ್ರಾನ್ವೇಷಿಗಳಾಗುತ್ತಾರೆ ಆದರೆ ಯಾರು ತನ್ನ ಬಣ್ಣಿಸಿ, ಇದಿರ ಹಳಿಯುವನೋ ಅವನು ನಿಜಕ್ಕೂ ದೊಡ್ಡವನಾಗಲಾರ"

ಗಾಂಧೀಜಿಯವರ ಈ ಅಪೂರ್ವ ಆದರ್ಶವನ್ನು ಮೆಚ್ಚಿಕೊಂಡು ಜನರಿಗೆಲ್ಲಾ ಅದನ್ನು ನಿತ್ಯವೂ ಉಪದೇಶ ಮಾಡುವ ವಿದ್ಯಾನಂದರು ಅದನ್ನು ಜನರಿಗೆ ಮಾತ್ರ ಮೀಸಲಾಗಿಟ್ಟಿದ್ದಾರೋ ಅಥವಾ ತಮಗೂ ಅನ್ವಯಿಸಿಕೊಳ್ಳಲು ಸಿದ್ಧರಿದ್ದಾರೋ? ಎಂಬುದಕ್ಕೆ ಉತ್ತರ ತಿಳಿಯಬೇಕಾಗಿದೆ?

॥ ಮುಗಿಯಿತು ॥



**ವಿ.ಸೂ.**

ಶ್ರೀ ಸಿ ಬಿ ಎಂ ಚಂದ್ರಯ್ಯನವರು ಮತ್ತೆ ಶ್ರವಣಬೆಳಗೊಳದ ಮಠದ ಅವ್ಯವಹಾರಗಳ ವಿರುದ್ಧವಾಗಿಯೂ, ಮತ್ತು ಮಹಾಮಸ್ತಕಾಭಿಷೇಕ ಸಮಯದಲ್ಲಿ ನಡೆದ ತೀವ್ರತರವಾದ ಹಣದ ಅವ್ಯವಹಾರಗಳ ವಿರುದ್ಧವಾಗಿಯೂ ತಾ॥ 20-4-1981 ರಲ್ಲಿ ಸರ್ಕಾರಕ್ಕೆ ದೂರನ್ನು ಸಲ್ಲಿಸಿದ್ದಾರೆ ಇದರ ಪರಿಣಾಮಗಳನ್ನು ಕಾಯ್ದು ನೋಡಬೇಕು

## ಮಹಾವೀರ ವಚನ

* ಚಾರಿತ್ರವಂತನು ಅಲ್ಪಜ್ಞಾನ ಪಡೆದಿದ್ದರೂ ಸಾಕು. ಚಾರಿತ್ರಹೀನನು ಅಧಿಕಶ್ರುತಜ್ಞಾನ ಪಡೆದಿದ್ದರೂ ಅದು ನಿಷ್ಫಲವಾಗುತ್ತದೆ

* ಅನಾಚಾರವು ಅಸತ್ಯದ ಜನನಿ, ಶೀಲವೆಂಬ ವೃಕ್ಷಕ್ಕೆ ಕೊಡಲಿ, ಅಜ್ಞಾನದ ಜನ್ಮಭೂಮಿಗೆ ಮತ್ತು ದುರ್ಗತಿಗೆ ಮೂಲ



## ಕುಂದಕುಂದ ವಚನ

ಸುಹಡೋ ಸೂರತ್ತವಿಣಾ, ಮಹಿಲಾಸೋ ಹಗ್ಗರಹಿಯು ಪರಿಸೋಹಾ।
ವೇರಗ್ಗಣಾಣ ಸಂಜಮಹೀಣಾ, ಖಮಣಾಣ ಕಿಂ ವಿಲಬ್ಭಂತೇ ॥

ಶೌರ್ಯವಿಲ್ಲದ ಭಟನೂ, ಸುಮಂಗಲಿತನವಿಲ್ಲದ ಅಲಂಕಾರವುಳ್ಳ ಹೆಂಗಸೂ, ವೈರಾಗ್ಯಜ್ಞಾನಚಾರಿತ್ರಗಳಿಲ್ಲದ ಮುನಿಗಳೂ ಏನನ್ನೂ ಪಡೆಯುವುದಿಲ್ಲ



ತಾ|| 20 7 80 ರಂದು ವಿದ್ಯಾನಂದರು ಶ್ರವಣಬೆಳಗೊಳಕ್ಕೆ ಪ್ರವೇಶ ಮಾಡಿದ ದಿವಸ ಚಂದ್ರಯ್ಯನವರು, ಶಾಂತರಾಜರು ಮತ್ತಿತರರ ವಿರುದ್ಧ ಕಟ್ಟಲಾಗಿದ್ದ ಅಪಪ್ರಚಾರದ ಬ್ಯಾನರ್. ವಿದ್ಯಾನಂದರು ತಾ|| 14-7-80 ರಂದು ಬೆಳ್ಳೂರಿನಲ್ಲಿ ಮಾಡಿದ ನಿಂದೆಯ ಮಾತುಗಳನ್ನನುಸರಿಸಿ ಇದು ಕಾಣಿಸಿಕೊಂಡಿತು ಚಾರುಕೀರ್ತಿ ಸ್ವಾಮೀಜಿ ಮತ್ತು ವಿದ್ಯಾನಂದರ ಸೂಚನೆಗಳ ಮೇರೆಗೆ ಈ ಬ್ಯಾನರ್ ಕಟ್ಟುವ ವ್ಯವಸ್ಥೆ ಮಾಡಲಾಗಿತ್ತು ಎಂಬುದು ಸಾರ್ವಜನಿಕರಲ್ಲಿ ಇರುವ ಅಭಿಪ್ರಾಯ.

/ PRINTED MATTER

BY BOOK POST - REGISTERED WITH ACK DUE



To

Pujya Sri. Vidyananda Muniji,
Hukumchand Thyagi Nivas,
SHRAVA ABELAGOLA
(Hassan District)

Refused

From :
B.S.Nanda Kumar, M.A.,
Lecturer in Kannada,
Sir M.V.College,
BHADRAVATHI.

MYSORE N P O. 570001

---

ವಿದ್ಯಾನಂದರ ತೆಗೆದುಕೊಳ್ಳಲು ನಿರಾಕರಿಸಿದ ನನ್ನ ನಾಲ್ಕನೇ ಬಹಿರಂಗ ಪತ್ರವಿದ್ದ ಅಂಚೆಯ ಲಕೋಟೆ. ದಯವಿಟ್ಟು ನಿಮ್ಮ ಮಾತುಗಳ ಸತ್ಯಾಂಶವನ್ನು ಸ್ಪಷ್ಟಪಡಿಸಿ ಎಂದು ಕೇಳಿದ್ದಕ್ಕಾಗಿ ಸಿಕ್ಕ ಪ್ರತಿಕ್ರಿಯೆ ಇದು. ಈ ಪತ್ರವನ್ನು ತೆಗೆದುಕೊಳ್ಳಲು ನಿರಾಕರಿಸಿದ ವಿದ್ಯಾನಂದರು ಸತ್ಯವನ್ನು ಹೇಳಲು ನಿರಾಕರಿಸಿದರು!

*Charukirti Bhattarak Swamiji*

Phone : 25

SRI JAIN MATH
SHRAVANABELAGOLA-573 135
KARNATAKA STATE (INDIA)

Date 22ನೇ ಮೇ 1980.

ಧರ್ಮಬಂಧು ಶ್ರೀ ಎಸ್.ಪಿ. ಶಾಂತರಾಜರಿಗೆ,

ತರುವಾಯ ಶ್ರೀ ಗೋಮಟಗಿರಿ ಕ್ಷೇತ್ರ ಸೇವಾ ಸಮಿತಿಯಿಂದ ಗೋಮಟಗಿರಿ ಕ್ಷೇತ್ರವನ್ನು ಇಲ್ಲಿಯ ಎಸ್.ಡಿ.ಜೆ.ಎಮ್.ಐ. ಮ್ಯಾನೇಜಿಂಗ್ ಕಮಿಟಿಗೆ ಸೇರಿಸುವ ವಿಚಾರವಾಗಿ ತಾರೀಖು 19-5-1980ರ ಪತ್ರ ಬಂದಿರುತ್ತೆ. ಅಲ್ಲದೆ, ಆ ಪತ್ರದೊಂದಿಗೆ ಗೋಮಟಗಿರಿ ಕ್ಷೇತ್ರ ಸಮಿತಿಯ ಇತ್ತೀಚಿನ ಸಭೆಯಲ್ಲಿ ನೀವು ಮಂಡಿಸಿರುವ ವಿಚಾರದ ಬಗ್ಗೆ ನಿರ್ಣಯಿಸಿದ ಪ್ರಸ್ತಾವದ ಪ್ರತಿ ಲಭಿಯೂ ಸಹಾ ಬಂದಿರುತ್ತೆ.

ಗೊಮ್ಮಟಗಿರಿ ಹಾಗೂ ಇತರ ಕ್ಷೇತ್ರಗಳ ಬಗ್ಗೆ ನಾವು ನಿಮ್ಮಲ್ಲಿ ಮಾತನಾಡಿರುವುದು ನಿಜ. ಆದರೆ ಎಸ್.ಡಿ.ಜೆ.ಎಮ್.ಐ. ಮ್ಯಾನೇಜಿಂಗ್ ಕಮಿಟಿಗೆ ಗೋಮಟಗಿರಿ ಕ್ಷೇತ್ರವನ್ನು ವಹಿಸಬೇಕೆಂದು ನಾವು ನಿಮ್ಮಲ್ಲಿ ತಿಳಿಸಿಲ್ಲ. ಶ್ರೀ ಮಠದ ಸ್ವಸ್ತಿಶ್ರೀ ಸ್ವಾಮಿಗಳಿಗೆ ಆ ಕ್ಷೇತ್ರವನ್ನು ವಹಿಸಿದಲ್ಲಿ ಅದರ ಅಭಿವೃದ್ಧಿಯನ್ನು ಮಾಡಲಾಗುವುದು ಎಂದು ತಿಳಿಸಿದ್ದೆವು. ಆದ್ದರಿಂದ ನಮ್ಮ ಅಭಿಪ್ರಾಯವನ್ನು ಸರಿಯಾದ ರೀತಿಯಲ್ಲಿ ತಿಳಿದುಕೊಂಡು ನಿರ್ಣಯ ತೆಗೆದುಕೊಂಡರೆ ಬಹಳ ಉತ್ತಮ. ಈ ಬಗ್ಗೆ ತಿದ್ದಿಕೊಳ್ಳುವುದು.

ಸಮಿತಿಯಿಂದ ಬಂದಿರುವ ಪತ್ರವನ್ನು ನಿಮ್ಮ ಅವಗಾಹನೆಗಾಗಿ ಇದರೊಂದಿಗೆ ಲಗತ್ತಿಸಿದೆ.

ಪತ್ರ ತಲುಪಿದ್ದಕ್ಕೆ ಬರೆಯಿರಿ.

ಆಶೀರ್ವಾದಗಳು,

[signature]

ಸ್ವಸ್ತಿಶ್ರೀ ಚಾರುಕೀರ್ತಿ ಸ್ವಾಮಿಗಳು.

ಶ್ರೀ ಎಸ್.ಪಿ. ಶಾಂತರಾಜ್,
50, ರಮಾವಿಲಾಸ ರಸ್ತೆ,
ಮೈಸೂರು.

---

ತಾ|| 22-5-80 ರಂದು ಚಾರುಕೀರ್ತಿಯವರು ಶಾಂತರಾಜರಿಗೆ ಶ್ರೀ ಗೋಮಟಗಿರಿ ಕ್ಷೇತ್ರದ ಚಾರವಾಗಿ ಬರೆದ ಮೂಲಪತ್ರದ ಪಡಿಯಚ್ಚು (ಪುಟ 12 ಮತ್ತು 13 ನ್ನು ನೋಡಿ)

ಜೈನ ಮಠದ ಹೆಸರಿನಲ್ಲಿ ಹಿಂದಿಯಲ್ಲಿ ಮುದ್ರಿಸಿರುವ ಅಕ್ರಮ ರಶೀದಿಗಳು. ಈ ಅಕ್ರಮ ರಶೀದಿಗಳಲ್ಲಿನ ಇನ್ನೊಂದು ಅಕ್ರಮವೆಂದರೆ ತಾ|| 30-9-1979 ರಂದು ಒಂದೇ ಬಗೆಯ ಎರಡು ರಶೀದಿ ಪುಸ್ತಕಗಳಿಂದ ರಶೀದಿಗಳನ್ನು ಹರಿದಿರುವುದು. ಒಂದು ರಶೀದಿಯ ನಂ 1524 ಎಂದಿದ್ದರೆ ಇನ್ನೊಂದರಲ್ಲಿ 1196 ಎಂದಿರುವುದನ್ನು ಮೇಲಿನ ಎರಡು ರಶೀದಿಗಳಲ್ಲಿ ಕಾಣಬಹುದು. ಇದೇ ರೀತಿ ಜೈನ ಮಠದ ಹೆಸರಿನಲ್ಲಿ ಬೇರೆ ಬೇರೆ ಬಾಬ್ತುಗಳಿಗಾಗಿ ಮುದ್ರಿಸಿರುವ ಇನ್ನಿತರ ರಶೀದಿ ಪುಸ್ತಕಗಳಲ್ಲಿಯೂ ಸಹ ಎರಡೆರಡು ಸೆಟ್ ಅಥವಾ ಇನ್ನೂ ಹೆಚ್ಚು ಸೆಟ್‌ಗಳನ್ನು ಮುದ್ರಿಸಿರಬಹುದೆಂದು ತೋರುತ್ತದೆ! ಹೀಗೆ ಅಕ್ರಮವಾಗಿ ಸಂಗ್ರಹಿಸುತ್ತಿರುವ ಹಣವೆಲ್ಲಾ ಏನಾಗುತ್ತಿದೆ ಎಂಬುದು ಚಿದಂಬರ ರಹಸ್ಯವಾಗಿದೆ!

MUNI VIDYANANDA NILAYA
DIGAMBER JAIN MATH
SHRAVANABELAGOLA

No. 1881 Date [illegible]

Received with thanks from Sri [illegible]

[illegible]

Rupees One hundred one only

Rs. 101/-

Signature Manager

ವಿದ್ಯಾನಂದ ನಿಲಯದಲ್ಲಿ ಈ ಮೊದಲು 13 ಬಾಬ್ತುಗಳಿರುವ ಮಠದ ಹೆಸರಿನ ಹಿಂದಿ ಭಾಷೆಯ ರಶೀದಿಯನ್ನು ದಾನ ಕೊಟ್ಟವರಿಗೆ ಕೊಡುತ್ತಿದ್ದರು. ಈ ಅಕ್ರಮ ರಶೀದಿಯ ವಿರುದ್ಧ ಚಂದ್ರಯ್ಯನವರು ಸರ್ಕಾರಕ್ಕೆ ದೂರು ಸಲ್ಲಿಸಿದ ಕೂಡಲೆ ಮೇಲಿನ 'ಮುನಿ ವಿದ್ಯಾನಂದ ನಿಲಯ–ದಿಗಂಬರ ಜೈನ ಮಠ' ಎಂಬ ಹೊಸ ಬಗೆಯ ಇಂಗ್ಲಿಷ್ ಭಾಷೆಯ ರಶೀದಿ ಮಠದಿಂದ ಬಿಡುಗಡೆಯಾಯಿತು!

ಕ್ಷೇತ್ರಾಭಿವೃದ್ಧಿಯ ಹೆಸರಿನಲ್ಲಿ ಹಣ ಸಂಗ್ರಹಿಸಿ ವಿದ್ಯಾನಂದ ನಿಲಯವನ್ನು ಕಟ್ಟಿರುವುದರಿಂದ, ವಿದ್ಯಾನಂದ ನಿಲಯದಲ್ಲಿ ಬಾಡಿಗೆ ರೂಪದಿಂದ ಉತ್ಪತ್ತಿಯಾಗುವ ಹಣ ಮತ್ತು ದಾನ ರೂಪವಾಗಿ ಬರುವ ಹಣ ನಿಯಮಗಳಂತೆ ನ್ಯಾಯೋಚಿತವಾಗಿ ಮೇನೇಜಿಂಗ್ ಕಮಿಟಿಗೆ ಹೋಗಬೇಕು ಆದರೆ ಈಗ ಅದು ಮಠಕ್ಕೆ ಹೋಗುತ್ತಿದೆ! ಮೇನೇಜಿಂಗ್ ಕಮಿಟಿಯನ್ನು ದಿವಾಳಿಯೆಬ್ಬಿಸುವ ಮಠದ ಈ ಅವ್ಯವಹಾರವನ್ನು ಮೇನೇಜಿಂಗ್ ಕಮಿಟಿಯು ಆಡಳಿತ ಹಗರಣ ಸಹಿಸಿಕೊಂಡಿರುವುದು ಆಶ್ಚರ್ಯಕರವೇ ಸರಿ!




ಜೈನ ಮಠದ ಇನ್ನೊಂದು ವಂಚನೆಯ ಯೋಜನೆ ಇದು 'ಜನಕಲ್ಯಾಣ ನಿಧಿ' ಎಂಬ ಹೆಸರಿನಲ್ಲಿ ಹಣ ಸಂಗ್ರಹಿಸುತ್ತಿರುವ ಈ ಯೋಜನೆಯಲ್ಲಿ ಜನಕಲ್ಯಾಣಕ್ಕಿಂತ ಹೆಚ್ಚಾಗಿ ಯಾವ ವಿಧದಲ್ಲಾದರೂ ಹಣವನ್ನು ಸಂಗ್ರಹಿಸಿ ಅದರ ಉಸ್ತುವಾರಿಯನ್ನು ಮಠದ ಪ್ರಶ್ನಾತೀತ ಸರ್ವಾಧಿಕಾರಕ್ಕೆ ಒಳಪಡಿಸುವ ಹಣದ ಲೋಭ ಮತ್ತು ವ್ಯಾಮೋಹವೇ ಇಲ್ಲಿ ಪ್ರಧಾನ.

ಜನರಿಂದ ಹಣ ತೆಗೆದುಕೊಳ್ಳಲು ಮಠವು ಅನೇಕ ವಿಧಗಳಲ್ಲಿ ತೀವ್ರ ಆಸಕ್ತಿಯನ್ನು ತೋರಿಸುತ್ತದೆ ಆದರೆ ವಿಚಿತ್ರವೆಂದರೆ ಆ ಸಂಗ್ರಹಿಸಿದ ಹಣದ ಆದಾಯ ವೆಚ್ಚದ ಲೆಕ್ಕಪತ್ರಗಳನ್ನು ಜನರ ಮುಂದಿಡಲು ಮಠವು ನಿರಾಕರಿಸುತ್ತದೆ ಹಣ ಕೊಡುವ ಒಡೆಯರಾದ ಸಾರ್ವಜನಿಕರಿಗೆ ಅದರ ಲೆಕ್ಕಪತ್ರಗಳ ವಿವರ ಕೇಳುವ ಹಕ್ಕಿಲ್ಲವೆಂಬುದು ಆಶ್ಚರ್ಯವೇ ಸರಿ!

ಮೇಲಿರುವ 'ಜನಕಲ್ಯಾಣ ನಿಧಿ' ಎಂಬಂತೆಯೇ ದೇಶ ಕಲ್ಯಾಣ ನಿಧಿ, ವಿಶ್ವ ಕಲ್ಯಾಣ ನಿಧಿ, ವನ ಕಲ್ಯಾಣ ನಿಧಿ, ವೃಕ್ಷ ಕಲ್ಯಾಣ ನಿಧಿ, ಪಕ್ಷಿ ಕಲ್ಯಾಣ ನಿಧಿ, ಮೃಗ ಕಲ್ಯಾಣ ನಿಧಿ, ಎಂದೆಲ್ಲಾ ರಶೀದಿ ಪುಸ್ತಕಗಳನ್ನು ಮಠವು ಮುದ್ರಿಸಿ ಹಣವನ್ನು ರಾಶಿ ಹಾಕಿಕೊಳ್ಳಬಹುದಲ್ಲವೆ?